ತರುಣ ಭಾರತೀ

# ಭಾರತೀಯ ಸಮಾಜ

ಶ್ಯಾಮಾಚರಣ ದುಬೆ

ಅನುವಾದ
ಆರ್. ಎಲ್. ಅನಂತರಾಮಯ್ಯ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಮುನ್ನುಡಿ

ಭಾರತೀಯ ಸಮಾಜದ ಐತಿಹಾಸಿಕ ಮೂಲಗಳು, ಭಾವನಾತ್ಮಕ ತಳಹದಿಗಳು ಮತ್ತು ಸಾಮಾಜಿಕ ವ್ಯವಸ್ಥೆಗಳ ಬಗೆಗೆ ಸ್ವಲ್ಪವಾದರೂ ತಿಳಿದುಕೊಳ್ಳಲು ಬಯಸುವ ಕಿರಿಯ ಓದುಗರನ್ನು ಗಮನದಲ್ಲಿಟ್ಟುಕೊಂಡು ಈ ಪುಸ್ತಕವನ್ನು ರಚಿಸಲಾಗಿದೆ. ಕೊನೆಯ ಅಧ್ಯಾಯದಲ್ಲಿ ಪರಿವರ್ತನೆಯ ಮುಖ್ಯ ಪ್ರವೃತ್ತಿಗಳನ್ನು ಚರ್ಚಿಸಿದೆ. ಕೃತಿಗೆ ಅಗತ್ಯವಾದ ಮಾಹಿತಿಗೆ, ವ್ಯಾಖ್ಯಾನಗಳಿಗೆ, ಇತಿಹಾಸ, ಪುರಾತತ್ವ ಶಾಸ್ತ್ರ, ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರಗಳಂತಹ ವಿವಿಧ ಮೂಲಗಳನ್ನು ಅವಲಂಬಿಸಲಾಗಿದೆ. ಈ ಅಧ್ಯಯನ ಕ್ಷೇತ್ರಗಳು ಒದಗಿಸುವ ಒಳನೋಟಗಳು ಭಾರತದ ಸಾಮಾಜಿಕ ವಾಸ್ತವತೆಯನ್ನು ಬೆಳಕಿಗೆ ತರಲು ಅತ್ಯಗತ್ಯವಾದವೆಂದು ನನ್ನ ನಂಬಿಕೆ.

ಭಾರತಕ್ಕೆ ದೀರ್ಘವಾದ ಇತಿಹಾಸವಿದೆ ಮತ್ತು ಅದರ ಸಾಮಾಜಿಕ ರಚನೆ ತುಂಬ ಜಟಿಲವಾಗಿದೆ. ಅದರ ವೈವಿಧ್ಯಪೂರ್ವಕ ವಿನ್ಯಾಸಗಳು ಹೇಗಿವೆಯೆಂದರೆ ಎಲ್ಲವನ್ನೂ ಅಡಕವಾಗಿ ಒಂದು ಕ್ಯಾಪ್ಸೂಲ್ ರೂಪದಲ್ಲಿ ಹೇಳಿಬಿಡಲು ಸಾಧ್ಯವೇ ಇಲ್ಲ. ಪ್ರಸ್ತುತ ಗಾತ್ರದ ಪುಸ್ತಕದಲ್ಲಂತೂ ಸ್ಥಳೀಯ ಮತ್ತು ಪ್ರಾದೇಶಿಕ ಆಚಾರ ವ್ಯವಹಾರಗಳು ಹಾಗೂ ಸಾಮಾಜಿಕ ರೂಪಗಳನ್ನು ಕುರಿತು ವ್ಯವಹರಿಸುವುದು ಸಾಧ್ಯವಿಲ್ಲವೆಂಬುದು ಸ್ಪಷ್ಟವೇ ಆಗಿದೆ. ಆದರೂ ಭಾರತೀಯ ಸಮಾಜದ ಲಕ್ಷಣಪ್ರಾಯವಾಗಿರುವ ವೈವಿಧ್ಯಗಳನ್ನು ನಿರೂಪಿಸಲು ಪ್ರಯತ್ನವನ್ನೇನೋ ಮಾಡಲಾಗಿದೆ. ಏಕತಾ ಸಾಧಕ ಅಂಶಗಳನ್ನೂ ಪರಿಶೀಲಿಸಲಾಗಿದೆ. ಕೃತಿಯು ಓದುಗನನ್ನು ಗೊಂದಲಕ್ಕೆ ಬೀಳಿಸುವುದಿಲ್ಲ ಎಂದು ನಾನು ಆಶಿಸುತ್ತೇನೆ.

ಭಾಷೆಯನ್ನು ಕುರಿತು ಒಂದು ಮಾತು. ಅನೇಕ ದಶಕಗಳಿಂದಲೂ ಬುದ್ಧಿವಂತ ಓದುಗನನ್ನು ದಿಗ್ಭ್ರಮೆಗೊಳಿಸುವಂತಹ ಒಂದು ಶಬ್ದಾಡಂಬರವನ್ನು ಸಮಾಜ ವಿಜ್ಞಾನವು ಬೆಳೆಸಿಕೊಂಡು ಬಂದಿದೆ. ಈ ಪುಸ್ತಕದಲ್ಲಾದರೆ ಸರಳವಾದ ತೊಡಕಿಲ್ಲದ ಶೈಲಿಯನ್ನು ಬಳಸಲು ಉದ್ದಕ್ಕೂ ಪ್ರಯತ್ನಿಸಲಾಗಿದೆ. ತೀರಾ ಅಗತ್ಯವಾದ ಸಂದರ್ಭದಲ್ಲಿ ಕೆಲವು ಪಾರಿಭಾಷಿಕ ಶಬ್ದಗಳನ್ನು ಬಳಸಿದ್ದರೂ, ಮೊದಲ ಬಾರಿ ಉಪಯೋಗವಾದಾಗಲೋ, ಅಥವಾ ಕೋಶದಲ್ಲೋ ಅವುಗಳನ್ನು ವಿವರಿಸಿದೆ.

ಸಮಗ್ರ ಇತಿಹಾಸ ಮತ್ತು ಸಮಾಜಶಾಸ್ತ್ರಗಳು ಸ್ವಲ್ಪ ಮಟ್ಟಿಗೆ ಪುನರ್ ರಚನೆಯೇ.

ಅತ್ಯಂತ ವಸ್ತುನಿಷ್ಠ ಲೇಖಕರೆನಿಸಿಕೊಂಡವರ ಸ್ವಂತ ಅಭಿಪ್ರಾಯಗಳೂ ವಿಚಾರಗಳೂ ಅಲ್ಲಿ ಪ್ರತಿಬಿಂಬಿತವಾಗುತ್ತವೆ. ವ್ಯಕ್ತಿನಿಷ್ಠವಾದ ಅಂಶಗಳು ಈ ಪುಸ್ತಕದಲ್ಲಿ ನುಸುಳಿರಬಹುದಾದರೂ ನಾನು ಯಾವುದೇ ಒಂದು ವೈಚಾರಿಕ ನಿಲುವಿಗೆ ಹೊಂದಿಕೊಳ್ಳುವಂತೆ ವಾಸ್ತವಾಂಶಗಳನ್ನು ತಿರುಚಿಲ್ಲ ಎಂದು ಹೇಳಬಲ್ಲೆ. ಪುಸ್ತಕದ ಕೊನೆಗೆ ಕೊಟ್ಟಿರುವ ಮುಂದಿನ ಓದಿಕೆ ಪಟ್ಟಿಯು ನನ್ನದಕ್ಕಿಂತ ಬೇರೆ ಅಭಿಪ್ರಾಯಗಳನ್ನೂ ಓದುಗನು ತಿಳಿದುಕೊಳ್ಳಲು ಸಹಾಯವಾಗಲಿ ಎಂಬ ಉದ್ದೇಶದಿಂದ ಕೊಟ್ಟಿರುವುದಾಗಿದೆ.

ಜ್ಞಾನದ ಮುಖ್ಯ ಕರ್ತವ್ಯಗಳಲ್ಲೊಂದು ಮಾನಸಿಕ ದಿಗಂತಗಳನ್ನು ವಿಸ್ತರಿಸುವುದು. ಈ ಪುಸ್ತಕದ ಗುರಿಯೂ ಅದೇ ಆಗಿದೆ. ಭಾರತದ ಸಮಾಜ ಚೇತನದ ಅರಿವು ಪಡೆದು ನಮ್ಮ ದೇಶದ ಭೂತ, ವರ್ತಮಾನಗಳ ಬಗೆಗೆ ಆಲೋಚನೆಯನ್ನು ಪ್ರಚೋದಿಸಲು ಅಗತ್ಯವಾದ ವಿಮರ್ಶನ ಪ್ರಜ್ಞೆಯನ್ನು ಇದು ಮೂಡಿಸುತ್ತದೆ ಎಂದು ಆಶಿಸುತ್ತೇನೆ. ಮಬ್ಬು ಹರಿಸಿ ಬೆಳಕಿಗೆ ತರುವುದರಿಂದ ಇತಿಹಾಸವನ್ನೂ, ಪರಂಪರೆಯನ್ನೂ ಚೆನ್ನಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗುತ್ತದೆ.

ಈ ಕೃತಿಯ ಬಗೆಗೆ ರಚನಾತ್ಮಕವಾದ ಸಂಪಾದಕೀಯ ಸಲಹೆಯನ್ನಿತ್ತ ಶ್ರೀ ರವಿ ದಯಾಳರಿಗೆ ಆಭಾರಿಯಾಗಿದ್ದೇನೆ.

ದೆಹಲಿ
ಜುಲೈ 1990

**ಶ್ಯಾಮಾಚರಣ ದುಬೆ**

# ಪರಿವಿಡಿ

# ಭಾರತೀಯ ಸಮಾಜದ ರಚನೆ

ಭಾರತೀಯ ಸಮಾಜವು ಬಹು ಪ್ರಾಚೀನವಾದದ್ದು ಮತ್ತು ಅತ್ಯಂತ ಸಂಕೀರ್ಣ ರಚನೆಯುಳ್ಳದ್ದು. ಒಂದು ಅಂದಾಜಿನ ಪ್ರಕಾರ, ನಮಗೆ ತಿಳಿದಿರುವ ಮೊತ್ತಮೊದಲ ನಾಗರಿಕತೆಯ ಕಾಲದಿಂದ ಮೊದಲುಗೊಂಡು ಸುಮಾರು ಐದು ಸಾವಿರ ವರ್ಷಗಳ ಸುದೀರ್ಘ ಕಾಲಾವಧಿಯನ್ನು ಅದು ಕ್ರಮಿಸಿದೆ. ಈ ಅವಧಿಯಲ್ಲಿ ಬೇರೆ ಬೇರೆ ಲಕ್ಷಣದ, ಬೇರೆ ಬೇರೆ ಭಾಷಾ ವರ್ಗಗಳಿಗೆ ಸೇರಿದ ಅನೇಕಾನೇಕ ವಲಸಿಗರು ಬಂದು ಭಾರತದ ಜನವರ್ಗದಲ್ಲಿ ಸೇರಿಹೋಗಿದ್ದಾರೆ. ಅದರ ವೈವಿಧ್ಯ ಸಮೃದ್ಧಿ ಮತ್ತು ಸತ್ವಗಳಿಗೆ ಮಹತ್ತರ ಕೊಡುಗೆ ನೀಡಿದ್ದಾರೆ.

ಸಮಕಾಲೀನ ಭಾರತದಲ್ಲಿ ಸಾಮಾಜಿಕ ವಿಕಾಸದ ಹಲವು ವಿಭಿನ್ನ ಸ್ತರಗಳು ಒಟ್ಟೊಟ್ಟಿಗೆ ಇರುವುದನ್ನು ನೋಡಬಹುದು. ಬೇಟೆಯಾಡಿ ಆಹಾರ ಸಂಗ್ರಹಿಸುವವರು; ಹಾರೆ ಗುದ್ದಲಿ ಬಳಸಿ (ನೇಗಿಲನ್ನು ಉಪಯೋಗಿಸದೆ) ಬೆಳೆಯುವ ಅಲೆಮಾರಿ ಬೇಸಾಯಗಾರರು; ಅಲೆಮಾರಿಗಳು (ಕುರಿ, ಮೇಕೆ, ಹಸು ಕರುಗಳನ್ನು ಸಾಕುವವರು, ವ್ಯಾಪಾರಿಗಳು, ಕುಶಲಕರ್ಮಿಗಳು ಇತ್ಯಾದಿ); ನೇಗಿಲನ್ನು ಬಳಸಿ ಬೇಸಾಯ ಮಾಡುವ ರೈತರು; ಕಮ್ಮಾರ ಚಮ್ಮಾರ ಮೊದಲಾದ ಕರ್ಮಚಾರಿಗಳು; ಪ್ರಾಚೀನ ಪರಂಪರೆಯುಳ್ಳ ಜಮೀನುದಾರರು ಮತ್ತು ಇತರ ಶ್ರೀಮಂತವರ್ಗದ ಜನ ಮೊದಲಾದವರನ್ನು ಕಾಣಬಹುದು. ಜಗತ್ತಿನ ಪ್ರಮುಖ ಧರ್ಮಗಳಲ್ಲಿ ಹಲವನ್ನು ಇಲ್ಲಿ ನೋಡಬಹುದು. ಹಿಂದೂ ಧರ್ಮ, ಇಸ್ಲಾಂ, ಕ್ರೈಸ್ತಧರ್ಮ, ಬೌದ್ಧಧರ್ಮಗಳಲ್ಲದೆ ನಂಬಿಕೆಯಲ್ಲೂ ಆಚಾರದಲ್ಲೂ ಬೆರಗುಗೊಳಿಸುವಷ್ಟು ವೈವಿಧ್ಯವುಳ್ಳ ಅಸಂಖ್ಯಾತ ಪಂಥಗಳು, ಪಂಗಡಗಳು ಇಲ್ಲಿ ಕಾಣಸುತ್ತವೆ. ಇವುಗಳ ಜೊತೆಗೆ ಆಧುನಿಕವಾದ ಶೈಕ್ಷಣಿಕ ಒಲವಿನ ಅಧಿಕಾರಶಾಹಿ, ಔದ್ಯಮಿಕ, ವೈಜ್ಞಾನಿಕ ಗಣ್ಯವರ್ಗಗಳು ಇವೆ. ಭೂತ, ವರ್ತಮಾನ, ಭವಿಷ್ಯತ್ತುಗಳು ಜೊತೆಜೊತೆಯಾಗಿ ಇಲ್ಲಿ ಜೀವಿಸುತ್ತಿರುವುದನ್ನು ನೋಡುತ್ತೇವೆ. ವಿಕಾಸದ ಪ್ರಕ್ರಿಯೆಯಲ್ಲಿ ಭಾರತೀಯ ಸಮಾಜವು ಬಹುಳತ್ವದ ಸ್ಥಿರ ವಿನ್ಯಾಸಗಳುಳ್ಳ ಒಂದು ಸಮ್ಮಿಶ್ರ ಸಂಸ್ಕೃತಿಯನ್ನು ಸಂಪಾದಿಸಿಕೊಂಡಿದೆ.

ಭಾರತದ ಅತಿ ಪ್ರಾಚೀನ ನಿವಾಸಿಗಳು ಯಾರು ಎಂದು ಗುರುತಿಸುವುದು ಕಷ್ಟದ ಕೆಲಸ. ಅವರ ಬಗೆಗೆ ಲಿಖಿತ ದಾಖಲೆಗಳಾವುವೂ ದೊರಕದುದು ಅಚ್ಚರಿಯೇನಲ್ಲ.

ಏಕೆಂದರೆ ಆ ಸಮಯದಲ್ಲಿ ಇನ್ನೂ ಬರವಣಿಗೆಯ ಆವಿಷ್ಕಾರವಾಗಿರಲಿಲ್ಲ. ಜನತೆಯಲ್ಲಿ ಹರಿದು ಬಂದ ಕಂಠೋಕ್ತ ಪರಂಪರೆಯಿಂದಲೂ ಹೆಚ್ಚಿನ ಪ್ರಯೋಜನವಾಗುವುದಿಲ್ಲ. ಏಕೆಂದರೆ ಕೂಡಿಸಿ ಕಳೆದು, ಕೂಡಿಸಿ ಕಳೆದು, ಇತಿಹಾಸವನ್ನು ಗುರುತಿಸಲು ಅದು ವಿಶ್ವಾಸಾರ್ಹ ಆಧಾರವಾಗದೆ ಹೋಗಿದೆ. ಪ್ರಾಗೈತಿಹಾಸಿಕ ಸಾಕ್ಷ್ಯಾಧಾರಗಳು, ಇಡೀ ಕಥೆಯನ್ನು ಹೇಳಲಾರವಾದರೂ, ಹೆಚ್ಚು ವಿಶ್ವಾಸಾರ್ಹವಾದವು. ಬದುಕಿನ ಅನೇಕಾನೇಕ ಅತಿ ಸೂಕ್ಷ್ಮ ವಿವರಗಳು ಕಾಲದ ಧಾಳಿಯನ್ನು ಎದುರಿಸಿ ನಿಲ್ಲಲಾರವು. ಭಾರತದಲ್ಲಿ ಅತ್ಯಂತ ಪ್ರಾಚೀನ ಮಾನವ ಚಟುವಟಿಕೆಯು ಎರಡನೆಯ ಹಿಮಪ್ರವಾಹ ಅಂತರ್‌ಯುಗ, ಅಂದರೆ, ಕ್ರಿ.ಪೂ. 400,000 ಮತ್ತು 200,000ನೆಯ ವರ್ಷಗಳ ನಡುವಣ ಅವಧಿಯಲ್ಲಿ ಕಾಣಿಸುತ್ತದೆ ಎಂದು ಈಗ ನಮಗೆ ತಿಳಿದಿದೆ. ಆಗ ಶಿಲೆಯ ಉಪಕರಣಗಳು ಬಳಕೆಯಲ್ಲಿದ್ದುವು. ದೇಶದ ಬೇರೆ ಬೇರೆ ಭಾಗಗಳಲ್ಲಿನ ಗುಹಾಚಿತ್ರಗಳು ಆ ಪ್ರಾಚೀನಯುಗದ ಜನಜೀವನ, ಪರಿಸರ, ಅವರ ಸೌಂದರ್ಯಪ್ರಜ್ಞೆ, ಸೃಜನಶೀಲತೆ ಹಾಗೂ ಬಹುಶಃ ಆ ಕಾಲದ ತಾತ್ವಿಕ ಚಿಂತನೆ ಇವುಗಳನ್ನು ಬಿಂಬಿಸುತ್ತವೆ. ಸ್ಮಾರಕ ಶಿಲೆಗಳು – ಬಹುತೇಕ ಮೃತರ ದೇಹಗಳನ್ನು ಸಮಾಧಿ ಮಾಡಿ ಇರಿಸಿದ ಸ್ಮಾರಕವಾದ ಬೃಹತ್ ಶಿಲೆಗಳು ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಕಂಡುಬರುತ್ತವೆ. ಇವು ಆ ಕಾಲದಲ್ಲಿ ಕಬ್ಬಿಣ, ಕಂಚು, ಮತ್ತು ಚಿನ್ನ ಸಹ ಉಪಯೋಗದಲ್ಲಿದ್ದುದನ್ನು ತಿಳಿಸಿಕೊಡುತ್ತವೆ. ಆಗ ಜನರು ಹೇಗೆ ಬದುಕಿದ್ದರು, ಯಾವ ಬೆಳೆಗಳನ್ನು ಬೆಳೆಯುತ್ತಿದ್ದರು, ಏನು ತಿನ್ನುತ್ತಿದ್ದರು ಮುಂತಾದ ವಿಚಾರಗಳಲ್ಲಿ ಹೆಚ್ಚಿನ ಮಾಹಿತಿಯನ್ನು ನೂತನ ಪ್ರಾಕ್ತನಶಾಸ್ತ್ರವು ವಿಶದಪಡಿಸತೊಡಗಿದೆ. ಆದರೆ ಇಲ್ಲಿಗೆ ಮೊತ್ತಮೊದಲು ಬಂದವರು ಯಾರು ಎಂಬುದನ್ನಾಗಲಿ, ಮಿಕ್ಕವರು ಯಾವ ಕ್ರಮದಲ್ಲಿ ಈ ನಾಡನ್ನು ಪ್ರವೇಶಿಸಿದರು ಎಂಬುದನ್ನಾಗಲಿ ಅದು ಹೇಳುವುದಿಲ್ಲ.

ಭಾರತೀಯ ಜನತೆಯಲ್ಲಿ, ಮಾನವ ಶಾಸ್ತ್ರೀಯ ಲಕ್ಷಣಗಳು ಅಥವಾ ಜನವರ್ಗಗಳು ಒದಗಿಸುವ ಮಾಹಿತಿಯ ಆಧಾರದಿಂದ, ಅತ್ಯಂತ ಮೂಲನಿವಾಸಿಗಳಾಗಿದ್ದವರು ಯಾರು ಎಂಬುದನ್ನು ಊಹಿಸಬಹುದಾಗಿದೆ. ಈ ವಿಷಯದಲ್ಲಿ ಅತ್ಯಂತ ಅಧಿಕೃತವಾಗಿ ಹೇಳಿರುವುದು ಮತ್ತು ವ್ಯಾಪಕವಾಗಿ ಸ್ವೀಕೃತವಾಗಿರುವುದು ಬಿ.ಎಸ್. ಗುಹಾ ಅವರು ಮಾಡಿರುವ ವರ್ಗೀಕರಣ. ಅವರು ಭಾರತ ಜನಕೋಟಿಯಲ್ಲಿ ಮುಖ್ಯವಾದ ಆರು ಜನಾಂಗಿಕ ವರ್ಗಗಳನ್ನು ಗುರುತಿಸಿದರು. ಅವು ನೆಗ್ರಿಟೋ, ಪ್ರೋಟೋ–ಆಸ್ಟ್ರಲಾಯ್ಡ್, ಮಂಗೋಲಾಯ್ಡ್, ಮೆಡಿಟರೇನಿಯನ್, ಪಾಶ್ಚಾತ್ಯ ಬ್ರಾಕೀಸೇಫಲ್ಸ್, ಮತ್ತು ನಾರ್ಡಿಕ್. ಇವರಲ್ಲಿ ಮೊದಲ ಮೂರು ವರ್ಗದವರು ಈ ಉಪಖಂಡದ ಅತಿ ಪ್ರಾಚೀನ ನಿವಾಸಿಗಳು. ಅವರು ಸಣ್ಣಸಣ್ಣ ಪ್ರತ್ಯೇಕ ತಂಡಗಳಾಗಿದ್ದರು. ದಕ್ಷಿಣದಲ್ಲಿ ಕಾಡರ್, ಇರುಳಾ, ಪಣಿಯನ್ ಇವರು; ಅಂಡಮಾನ್ ದ್ವೀಪಸ್ತೋಮದಲ್ಲಿ ಓಂಗೇ ಮತ್ತು ಅಂಡಮಾನೀಸ್ ಇವರು ಸ್ಪಷ್ಟವಾದ ನೆಗ್ರಿಟೋ ಲಕ್ಷಣಗಳನ್ನು ಹೊಂದಿರುವ ಜನವರ್ಗಗಳು. ಈ ವರ್ಗದ ಕೆಲವು ಲಕ್ಷಣಗಳು ರಾಜಮಹಲ್ ಪರ್ವತಪ್ರದೇಶದ

ಅಂಗಾಮಿ ನಾಗಾ ಹಾಗೂ ಬಾಗಡಿಗಳಲ್ಲೂ ಗೋಚರಿಸುತ್ತವೆ. ಪಶ್ಚಿಮ ಕರಾವಳಿಯಲ್ಲಿಯೂ ನೆಗ್ರಿಟೋ ಲಕ್ಷಣಗಳನ್ನು ಸ್ಪಷ್ಟವಾಗಿ ಹೊಂದಿರುವ ಕೆಲವು ವರ್ಗಗಳು ಕಾಣಿಸುತ್ತವೆ. ಆದರೆ ಬಹುಶಃ ಅವರು ಮುಂದೆ ಅರಬ್ ವರ್ತಕರ ಜೊತೆಯಲ್ಲಿ ಭಾರತಕ್ಕೆ ಬಂದವರನ್ನು ಪ್ರತಿನಿಧಿಸುತ್ತಾರೆಂದು ತೋರುತ್ತದೆ. ಭಾರತದ ಸಾಂಸ್ಕೃತಿಕ ವಸ್ತ್ರದ ನೆಯಿಗೆಯಲ್ಲಿ ನೆಗ್ರಿಟೋ ಅಂಶದ ಕೊಡುಗೆ ಎಷ್ಟು ಎಂಬುದು ನಮಗೆ ಗೊತ್ತಾಗುವುದಿಲ್ಲ. ಮೂಲ ಆಸ್ಟ್ರಲಾಯ್ಡ್ ವರ್ಗವು ಸಂಖ್ಯಾದೃಷ್ಟಿಯಿಂದ ಹೆಚ್ಚು ಮಹತ್ವದ್ದಾಗಿದೆ; ಮಧ್ಯಭಾರತದ ಬಹುತೇಕ ವರ್ಗಗಳು ಅದಕ್ಕೆ ಸೇರುತ್ತವೆ. ಇವರನ್ನು ಇಂಡೋ–ಆರ್ಯನರು, ಅನಾ, ದಾಸ, ದಸ್ಯು, ನಿಷಾದ ಮೊದಲಾದ ಹೀನಾಯವಾದ ಪದಗಳಿಂದ ಬಣ್ಣಿಸಿದ್ದಾರೆ. ಮಂಗೋಲಾಯ್ಡ್ ವರ್ಗವನ್ನು ಎರಡು ಶಾಖೆಗಳಾಗಿ ವಿಭಜಿಸಲಾಗಿದೆ. ಅವು ಪೇಲಿಯೊ–ಮಂಗೋಲಾಯ್ಡ್ ಮತ್ತು ಟಿಬೆಟೊ – ಮಂಗೋಲಾಯ್ಡ್. ಹಿಮಾಲಯ ಪ್ರದೇಶ ಹಾಗೂ ಈಶಾನ್ಯ ಪ್ರದೇಶದ ಬುಡಕಟ್ಟುಗಳು ಮಂಗೋಲಾಯ್ಡ್ ಮೂಲದವು. ಅಸ್ಸಾಂ, ಪಶ್ಚಿಮ ಬಂಗಾಳ, ಮಣಿಪುರ ಮತ್ತು ತ್ರಿಪುರ ಈ ಪೂರ್ವ ರಾಜ್ಯಗಳ ಜನರಲ್ಲಿ ಕೆಲಮಟ್ಟಿಗೆ ಮಂಗೋಲಾಯ್ಡ್ ಲಕ್ಷಣಗಳನ್ನು ಕಾಣಬಹುದಾಗಿದೆ. ಈ ಕುಲವರ್ಗಗಳನ್ನು ಆದಿ ವರ್ಗಗಳು ಎಂದು ಹೇಳಬಹುದು; ಬಹುಶಃ ನೆಗ್ರಿಟೋ ಜನರು ಬಂದ ನಂತರ ಪ್ರೋಟೋ ಆಸ್ಟ್ರಲಾಯ್ಡ್ ಜನರು ಬಂದಿರಬೇಕು.

ಭಾರತಕ್ಕೆ ಆಮೇಲೆ ಬಂದವರು ಮೆಡಿಟರೇನಿಯನ್ನರು, ಪಶ್ಚಿಮ ಬ್ರಾಕೀಸೀಫಲರು (ಇವರಲ್ಲಿ ಉಪವಿಭಾಗಗಳೆಂದರೆ, ಆಲ್ಪಿನಾಯ್ಡ್ ಡಿನಾರಿಕ್ ಮತ್ತು ಆರ್ಮೆನಾಯ್ಡ್ ವರ್ಗಗಳು), ಮತ್ತು ನಾರ್ಡಿಕ್ ಜನರು (ಇಂಡೋ–ಆರ್ಯನರು). ನಮ್ಮ ದ್ರಾವಿಡಭಾಷೆ ಮತ್ತು ಸಂಸ್ಕೃತಿಗಳಿಗೆ ಮೆಡಿಟರೇನಿಯನ್ನರೊಂದಿಗೆ ಸಂಬಂಧವಿದೆ. ಉತ್ತರ ಭಾರತದ ಹಾಗೂ ಪಶ್ಚಿಮ ಭಾರತದ ಕೆಲ ಜನವರ್ಗಗಳಲ್ಲಿ ಆಲ್ಪಿನಾಯ್ಡ್ ಮತ್ತು ಡಿನಾರಿಕ್ ಲಕ್ಷಣಗಳು ಕಾಣುತ್ತವೆ. ಪಾರ್ಸಿಗಳಾದರೋ ಆರ್ಮೆನಾಯ್ಡ್ ವರ್ಗಕ್ಕೆ ಸೇರಿದವರು. ಭಾರತಕ್ಕೆ ಬಂದ ಅತ್ಯಂತ ಮುಖ್ಯ ಕುಲವರ್ಗಗಳಲ್ಲಿ ಕೊನೆಯವರು ನಾರ್ಡಿಕರು. ಅವರು ಭಾರತದ ಸಂಸ್ಕೃತಿಯ ಮೇಲೂ ಸಮಾಜದ ಮೇಲೂ ಅಗಾಧವಾದ ಪ್ರಭಾವ ಬೀರಿದರು. ಆದರೆ ಅವರು ಬರುವುದಕ್ಕೂ ಮೊದಲು ಭಾರತದಲ್ಲಿ ಒಂದು ವಿಶಿಷ್ಟವಾದ ನಾಗರಿಕತೆಯು ನಿಧಾನವಾಗಿ ರೂಪುಗೊಂಡಿತ್ತು, ಅದು ಸಿಂಧೂ ಕಣಿವೆಯ ನಾಗರಿಕತೆ ಎಂದು ಹೆಸರಾಗಿದೆ.

ಭಾರತಕ್ಕೆ ಬೇರೆ ಬೇರೆ ಕುಲವರ್ಗಗಳು ಬಂದದ್ದು, ಆರ್ಯರು ಬರುವುದಕ್ಕಿಂತ ಮುಂಚಿತವಾಗಿ ಸಿಂಧೂಕಣಿವೆಯ ನಾಗರಿಕತೆ ಇದ್ದದ್ದು, ಈ ನಿರೂಪಣೆಗೆ ಆಧಾರ ಮಾನವಕುಲ ಶಾಸ್ತ್ರ ಪ್ರಾಕ್ತನ ಶಾಸ್ತ್ರ ಹಾಗೂ ಇತಿಹಾಸಗಳಲ್ಲಿ ಸಾಮಾನ್ಯವಾಗಿ ಅಂಗೀಕೃತವಾಗಿರುವ ಸಿದ್ಧಾಂತಗಳನ್ನು ಅವಲಂಬಿಸಿರುವುದಾಗಿದೆ. ಈ ಅಭಿಪ್ರಾಯಗಳ ಬಗೆಗೆ ಈಗ ವಿವಾದಗಳೇನೋ ಎದ್ದಿವೆ. ಕೆಲವು ಖಂಡಿತವಾದಿಗಳಾದ ವಿದ್ವಾಂಸರು ಭಾರತಕ್ಕೆ ಆರ್ಯರ ಆಕ್ರಮಣ ಎಂಬ ಕಲ್ಪನೆಯನ್ನೇ ಪುನರ್‌ಪರಿಶೀಲಿಸಬೇಕಾಗಿದೆ ಎಂದೂ, ಸಿಂಧೂಕಣಿವೆಯ

ನಾಗರಿಕತೆಯು ಆರ್ಯರ ಹಾಗೂ ಆರ್ಯಪೂರ್ವ ಮೂಲನಿವಾಸಿಗಳ ಕೂಡು ಸೃಷ್ಟಿ ಎಂದೂ ನಂಬುತ್ತಾರೆ. ಲೋಥಾಳ್ ಅನ್ನು ಕುರಿತ ತಮ್ಮ ಸಂಶೋಧನೆಯಿಂದ ಪ್ರಸಿದ್ಧರಾಗಿರುವ ಪ್ರಾಕ್ತನ ತಜ್ಞ ಎಸ್.ಆರ್. ರಾವ್ ತಮ್ಮ ಭಾಷಣಗಳಲ್ಲೂ ಬರವಣಿಗೆಗಳಲ್ಲೂ ಒಂದು ಅಂಶವನ್ನು ಸ್ಪಷ್ಟಪಡಿಸಿದ್ದಾರೆ. ಅದೆಂದರೆ, ಸಿಂಧೂ ಕಣಿವೆಯ ನಾಗರಿಕತೆಯ ಜನ ಬಹು–ಕುಲಮಿಶ್ರಿತ ಜನರು. ವ್ಯಾಪಕವಾಗಿ ನಡೆಸಿರುವ ಉತ್ಖನನಗಳಲ್ಲಿ ಕಂಡುಬಂದಿರುವ ಮೂಳೆ ಅವಶೇಷಗಳಿಂದ ಇದು ತಿಳಿದುಬರುತ್ತದೆ. ಆ ನಾಗರಿಕತೆಯೇ ಬೇರೆ ಬೇರೆ ಕುಲವಾಹಿನಿಗಳ ಕೂಡುಗೆಗಳ ಬೆಸುಗೆಯನ್ನು ಪ್ರತಿನಿಧಿಸುತ್ತದೆ ಎಂದು ಕೂಡ ಅವರು ಅಭಿಪ್ರಾಯಪಡುತ್ತಾರೆ.

ಮುಂದೆ ಕೊಟ್ಟಿರುವ ಸಿಂಧೂ ಕಣಿವೆಯ ನಾಗರಿಕತೆಯ ರೂಪರೇಷೆಗೆ ಆಧಾರವಾದರೂ ಅದನ್ನು ಕುರಿತು ಬಹುಮಟ್ಟಿಗೆ ರೂಢಿಗತವಾದ, ಅಂಗೀಕೃತವಾದ ದೃಷ್ಟಿ. ಇದಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಇನ್ನೂ ಚರ್ಚಿಸಿ ಸಮರ್ಥನೆಯ ಒರೆಗಲ್ಲಿಗೆ ತಿಕ್ಕಿ ನೋಡಬೇಕಾಗಿದೆ. ಹಾಗೆಂದು ಅದನ್ನು ಲಘುವಾಗಿ ಪರಿಗಣಿಸಿಬಿಡುವಂತಿಲ್ಲ. ಅದು ಮುಂದೆ ಭಾರತದ ಮೊತ್ತಮೊದಲ ನಗರೀಕರಣವನ್ನು ಕುರಿತ ಅಧ್ಯಾಯಗಳನ್ನು ಬರೆಯುವುದಕ್ಕೆ ದಾರಿಯಾದೀತು.

ಸಿಂಧೂ ಕಣಿವೆಯ ನಾಗರಿಕತೆಗೆ ಮುಖ್ಯವಾಗಿ ಮೊಹೆಂಜೊದಾರೋ ಮತ್ತು ಹರಪ್ಪ ನಗರಗಳು ಸಂಬಂಧಪಟ್ಟಿವೆ (ಈಗ ಈ ನಗರಗಳು ಪಾಕಿಸ್ತಾನದ ಸಿಂಧ್ ಪ್ರಾಂತ್ಯದಲ್ಲಿವೆ). ಈ ನಾಗರಿಕತೆಯನ್ನು ಮೊದಲು ಪರಿಶೋಧಿಸಿದ್ದು ಈ ನಗರಗಳಲ್ಲಿ, ಆ ಮೇಲಿನ ಉತ್ಖನನಗಳಿಂದ ಅದರ ವ್ಯಾಪ್ತಿ ಇನ್ನೂ ಮೂಲವಾಗಿತ್ತೆಂಬುದು ತಿಳಿದುಬಂದಿದೆ. ಈ ನಾಗರಿಕತೆಯ ಇತರ ಕೆಲವು ಮುಖ್ಯ ನಿವೇಶನಗಳೆಂದರೆ ಕೋಟ್‌ದಿಜಿ (ಸಿಂಧ್, ಪಾಕಿಸ್ತಾನ್), ಕಾಲಿಬಾಂಗನ್ (ರಾಜಾಸ್ಥಾನ), ರೋಪಾರ್ (ಭಾರತದಲ್ಲಿ ಪಂಜಾಬ್), ಮತ್ತು ಲೊಥಾಳ್ (ಗುಜರಾತ್): ಬಂದರು ನಗರವಾದ್ದರಿಂದ ಲೊಥಾಳ್‌ಗೆ ಇನ್ನೂ ಹೆಚ್ಚಿನ ಪ್ರಾಮುಖ್ಯತೆಯಿದೆ.

ಈ ನಾಗರಿಕತೆಯು ಸುಮಾರು ಕ್ರಿ.ಪೂ. 2500ರಲ್ಲಿ ಕಾಣಿಸಿಕೊಂಡಿತು. ಸುಮಾರು ಕ್ರಿ.ಪೂ. 2300 ವೇಳೆಗೆ ಉಚ್ಛ್ರಾಯ ಸ್ಥಿತಿಯಲ್ಲಿದ್ದು, ಆಮೇಲೆ ಕ್ರಿ.ಪೂ. 1700 ವೇಳೆಗೆ ಅವನತಿ ಹೊಂದಿರಬಹುದು ಎಂದು ಭಾವಿಸಲಾಗಿದೆ. ಈ ನಾಗರಿಕತೆಗೆ ಸಂಬಂಧಿಸಿದಂತೆ ದೊರಕಿರುವ ಅಸ್ಥಿಅವಶೇಷಗಳಲ್ಲಿ ಪ್ರೋಟೋಆಸ್ಟ್ರಲಾಯ್ಡ್, ಮೆಡಿಟರೇನಿಯನ್, ಆಲ್ಪೈನ್ ಮತ್ತು ಮಂಗೋಲಾಯ್ಡ್ ಕುಲಗಳ ಅಂಶಗಳು ಕಂಡುಬಂದಿದ್ದು ಅವರೆಲ್ಲರೂ ಅದರ ಬೆಳವಣಿಗೆಗೆ ತಂತಮ್ಮ ಕೊಡುಗೆ ಸಲ್ಲಿಸಿದ್ದಾರೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಅದೊಂದು ಪಟ್ಟಣ ನಾಗರಿಕತೆ. ಅದರ ನಗರ ಯೋಜನೆಯಲ್ಲಿ ಅಪ್ರತಿಮವಾದ ಸಾಮರ್ಥ್ಯ ಮತ್ತು ಕೌಶಲಗಳು ವ್ಯಕ್ತಗೊಂಡಿವೆ. ನಗರಗಳನ್ನು ಅಚ್ಚುಕಟ್ಟಾಗಿ ಯೋಜಿಸಲಾಗಿತ್ತು. ಮನೆಗಳು ವಿಶಾಲವಾಗಿದ್ದುವು, ನಿರ್ಮಾಣದಲ್ಲಿ ಅತ್ಯುತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಬಳಸಲಾಗಿತ್ತು. ಅವರು ಗೂಳಿ, ಎಮ್ಮೆ, ಒಂಟೆ, ಆನೆ ಇತ್ಯಾದಿ ಅನೇಕ ಪ್ರಾಣಿಗಳನ್ನು

ಸಾಕಿಕೊಂಡಿದ್ದರು; ಕರಾವಳಿಯ ಒಳನಾಡಿನಲ್ಲಿ ಅಪಾರ ಪ್ರಮಾಣದ ಧಾನ್ಯಗಳನ್ನು ಬೆಳೆದು ಅವುಗಳನ್ನು ನಗರದಲ್ಲಿ ಕಟ್ಟಿದ್ದ ವಿಶಾಲ ಉಗ್ರಾಣಗಳಲ್ಲಿ ಶೇಖರಿಸಿಡುತ್ತಿದ್ದರು. ಭಾರತ ಉಪಖಂಡದ ಬೇರೆ ಬೇರೆ ಭಾಗಗಳಲ್ಲಿ ಹಾಗೂ ಪರ್ಷಿಯನ್ ಕೊಲ್ಲಿ ದೇಶಗಳಲ್ಲಿ ಲಾಭದಾಯಕವಾದ ವ್ಯಾಪಾರ ವಾಣಿಜ್ಯ ಚಟುವಟಿಕೆಗಳನ್ನು ಅವರು ಹೊಂದಿದ್ದರು. ಮೆಸಪೊಟೇಮಿಯದೊಂದಿಗೂ ವ್ಯಾಪಾರ ಸಂಬಂಧವಿತ್ತು. ಜನರಲ್ಲಿ ಕೆಲವರು ತುಂಬ ಶ್ರೀಮಂತರಾಗಿದ್ದಿರಬಹುದು. ಏಕೆಂದರೆ ಅವರು ಚಿನ್ನ, ಬೆಳ್ಳಿ, ತಾಮ್ರ ಹಲವು ಬಗೆಯ ಮಿಶ್ರಲೋಹಗಳು ಮತ್ತು ಅಮೂಲ್ಯ ಹರಳುಗಳ ಆಭರಣಗಳನ್ನು ಧರಿಸುತ್ತಿದ್ದುದು ಗೊತ್ತಾಗಿದೆ. ಕಲೆಗೆ ಹಾಗೂ ಕರಕುಶಲತೆಗೆ ಸಂಬಂಧಿಸಿದಂತೆ ಗಣನೀಯವಾಗಿ ಚಟುವಟಿಕೆಯಿದ್ದುದು ಕಂಡುಬಂದಿದೆ. ನಮ್ಮ ದೃಷ್ಟಿಯಲ್ಲಿ ಅತ್ಯಂತ ಮುಖ್ಯವಾದ ಅಂಶವೆಂದರೆ, ಭಾರತೀಯ ನಾಗರಿಕತೆಗೆ ತಳಹದಿ ಬಿದ್ದುದು ಈ ಸಮಯದಲ್ಲಿ; ಮತ್ತು ಆ ಕಾಲದ ಕೆಲವು ಸಾಂಸ್ಕೃತಿಕ ಅಂಶಗಳು ಇಂದಿಗೂ ಮುಂದುವರಿದು ಬಂದಿವೆ. ಶಿವ ಮತ್ತು ಲಿಂಗ ಆರಾಧನೆ, ಮಾತೃದೇವತಾ ಆರಾಧನೆಗಳನ್ನು ಈ ಕಾಲಾವಧಿಯವರೆಗೆ ಹಿಂದಕ್ಕೆ ಗುರುತಿಸಬಹುದು. ದುರದೃಷ್ಟವಶಾತ್, ಸಿಂಧೂ ಕಣಿವೆ ನಾಗರಿಕತೆಗೆ ಸೇರಿದ ಲಿಪಿಯನ್ನಾಗಲಿ ಮುದ್ರಿಕೆಗಳನ್ನಾಗಲಿ ಇನ್ನೂ ಪೂರ್ತಿಯಾಗಿ ಬಿಡಿಸಿ ಓದಲು ಸಾಧ್ಯವಾಗಿಲ್ಲ. ಆದಾಗಿದ್ದರೆ, ಆ ಕಾಲದ ಅರ್ಥವ್ಯವಸ್ಥೆ, ಧರ್ಮ ಮತ್ತು ಸಮಾಜಗಳ ಬಗೆಗೆ ಹೆಚ್ಚು ಮಾಹಿತಿ ದೊರಕುತ್ತಿತ್ತು.

ಆಮೇಲೆ ಇಂಡೋ– ಆರ್ಯನರು ಬಂದರು, ಆಗಲೇ ಇಲ್ಲಿ ಇದ್ದ ಮೂಲನಿವಾಸಿಗಳೊಂದಿಗೆ ಘರ್ಷಣೆ ನಡೆಯಿತು. ಅವರು ತಮ್ಮದೇ ಆದ ನಾಗರಿಕತೆಯೊಂದನ್ನು ತರಲಿಲ್ಲ; ಮೂಲತಃ ಅವರು ದನಗಾಹಿ ಜನ. ಕಾವ್ಯದ ಬಗೆಗೆ ಆಸಕ್ತಿ, ತಾತ್ವಿಕ ಚಿಂತನೆ, ವಿಸ್ತಾರವಾದ ಧಾರ್ಮಿಕಾಚರಣೆಗಳನ್ನು ಅವರು ಹೊಂದಿದ್ದರು. ಅವರು ಜನಾಂಗವಾದಿಗಳು– ತಾವು ಬಹಳ ಮೇಲ್ಮಟ್ಟದ ಜನರೆಂದು ಭಾವಿಸಿ ಈ ನಾಡಿನ ಮೂಲ ನಿವಾಸಿಗಳನ್ನು ಕೀಳಾಗಿ ನೋಡಿದರು ಎಂಬ ಅರ್ಥದಲ್ಲಿ, ಅವರು ಇಲ್ಲಿನ ಮೂಲನಿವಾಸಿ ಜನರನ್ನು ಅನೇಕ ಹೀನಾಯಕರವಾದ ಹೆಸರುಗಳಿಂದ ಕರೆದರು. ತಮ್ಮ ಪಂಗಡದೊಳಗೇ ಅವರು ವಿವಾಹ ಸಂಬಂಧಗಳನ್ನು ನಡೆಸಬೇಕಾಯಿತು. ಅಂದರೆ ಸ್ವಗೋತ್ರ ವಿವಾಹ ಪದ್ಧತಿಯನ್ನು ಚಾಲ್ತಿಯಲ್ಲಿಟ್ಟರು. ಧಾರ್ಮಿಕಾಚರಣೆಗಳ ಪರಿಶುದ್ಧಿ ಮತ್ತು ಮೈಲಿಗೆ ಎಂಬರ್ಥದ ಮೂಲಭಾವನೆಯನ್ನು ಅವರು ಹೊಂದಿದ್ದರು. ಇವೇ ಅವರ ಸಾಮಾಜಿಕ ಸಂಪರ್ಕಗಳ ಮೇಲೆ, ಅಂತರ್–ಭೋಜನ ಸಂಬಂಧಗಳ ಮೇಲೆ ಪ್ರಭಾವ ಬೀರಿದುವು. ಇದರಿಂದ ವರ್ಣಗಳ ಉದಯವಾಯಿತು. (ವರ್ಣ ಎಂದರೆ, ಅಕ್ಷರಶಃ 'ಬಣ್ಣ' ಎಂದರ್ಥ) ಜಾತಿಯೂ ಆಗ ಹುಟ್ಟಿತು. ಇನ್ನೂ ಮೊದಲು ಬಂದಿದ್ದ ಮಾನವ ಕುಲಗಳ ಪರಸ್ಪರ ಸಂಪರ್ಕ ಕಾರಣವಾಗಿ ಜಾತಿ ಎನ್ನುವುದು ಆ ವೇಳೆಗಾಗಲೇ ಬೀಜ ರೂಪದಲ್ಲಿ ಇದ್ದಿರಬಹುದು. ವಿವಿಧ ಆದಿವಾಸಿ ತಂಡಗಳು ಮತ್ತು ಪ್ರಾಚೀನ ಕುಲವರ್ಗಗಳ ನಡುವೆ ಸಹಪಂಕ್ತಿ ಭೋಜನ ಮತ್ತು ಲೈಂಗಿಕ

ಸಂಬಂಧ ಇವುಗಳಲ್ಲಿ ರೂಢಿಯ ವಿಧಿ ಮತ್ತು ನಿಷೇಧಗಳ ಪ್ರಭಾವವಿದ್ದಿತು. ಇಂಡೋ–ಆರ್ಯನರು ಬಂದ ಮೇಲೆ ಅವುಗಳಿಗೆ ಪರಿಷ್ಕಾರ ಹಾಗೂ ಸಂಕೀರ್ಣತೆ ಬಂದ ಹಾಗಾಯಿತು.

ಭಾರತೀಯ ಸಮಾಜದ ತಾತ್ವಿಕ ಮತ್ತು ಸಾಮಾಜಿಕ ಚೌಕಟ್ಟು ವಾಸ್ತವವಾಗಿ ರೂಪುಗೊಳ್ಳತೊಡಗಿದುದು ಇಂಡೋ ಆರ್ಯನರು ಮತ್ತು ಪ್ರಾಚೀನ ಆದಿನಿವಾಸಿಗಳ ನಡುವೆ ಅಂತರ್‌ಕ್ರಿಯೆಯ ಕ್ಷೇತ್ರ ವಿಶಾಲವಾದಾಗ. ಇಂಡೋ ಆರ್ಯನರಲ್ಲಿ ಮೂರು ವರ್ಗಗಳಿದ್ದುವು. ರಾಜನ್ಯ (ಯೋಧರು ಮತ್ತು ಶ್ರೀಮಂತ ವರ್ಗ); ಬ್ರಾಹ್ಮಣ (ಪುರೋಹಿತರು) ಮತ್ತು ವೈಶ್ಯ (ಬೇಸಾಯಗಾರರು). ರಾಜನ್ಯರಿಗೆ ಮುಂದೆ ಕ್ಷತ್ರಿಯರೆಂದು ಹೆಸರು ಬಂದಿತು. ಬ್ರಾಹ್ಮಣರು ರಾಜನ ಮೇಲೆ ದೈವೀ ಕೃಪೆಯನ್ನು ಸಾಧಿಸಿಕೊಡುವ ತಮ್ಮ ವಿಶೇಷ ಹಕ್ಕನ್ನು ಸ್ಥಾಪಿಸಿದರು. ವೈಶ್ಯರು ಕ್ರಮೇಣ ವ್ಯಾಪಾರ ವಾಣಿಜ್ಯಗಳ ಕಡೆಗೆ ಹೊರಳಿದರು. ಇವರು ದ್ವಿಜರು, ಎರಡು ಸಾರಿ ಹುಟ್ಟಿದವರು. ಮೊದಲು ದೇಹವನ್ನು ಹೊತ್ತು ಹುಟ್ಟಿದ್ದು, ಆಮೇಲೆ ತಮ್ಮ ವರ್ಣಕ್ಕೆ ಸಮುಚಿತವಾದ ದೀಕ್ಷೆ ಪಡೆದು ಮರುಹುಟ್ಟು ಪಡೆದದ್ದು. ಶೂದ್ರರದು ನಾಲ್ಕನೆಯ ವರ್ಣ. ಅವರು ಇಂಡೋ–ಆರ್ಯನ್ ವರ್ಗದಿಂದ ಹೊರಗಿನವರು. ಬಹುಶಃ ಇಂಡೋ–ಆರ್ಯನ್ ಮತ್ತು ದಾಸ (ಆರ್ಯಪೂರ್ವ ಮೂಲನಿವಾಸಿಗಳು) ವರ್ಗಗಳ ಕೂಡುವಿಕೆಯಿಂದ ಬಂದ ಸಂತಾನವಿರಬೇಕು. ಅವರು ಬೇಸಾಯಗಾರರಾದರು, ಆದರೆ ಅವರಿಗೆ ದ್ವಿಜತ್ವ ದೊರಕಲಿಲ್ಲ. ಈ ರೀತಿ ನಾಲ್ಕು ವರ್ಗವುಳ್ಳ ಲಂಬಾಕಾರದ ವರ್ಣ ವ್ಯವಸ್ಥೆಯ ಜೊತೆಗೆ ಐದನೆಯ ಅವರ್ಣ ಅಥವಾ *ಪಂಚಮ* ಎಂಬ ವರ್ಗವಿತ್ತು. ಆವರ ಮಾನವಕುಲಸಂಬಂಧಿಯಾದ ಸ್ಥಾನ ಎಷ್ಟು ಕೆಳಮಟ್ಟದ್ದಾಗಿದ್ದಿತೆಂದರೆ, ಅವರ ವೃತ್ತಿ ಎಷ್ಟು ಹೀನಾಯದ್ದೂ ಮಲಿನಗೊಳಿಸುವಂಥದೂ ಆಗಿತ್ತೆಂದರೆ, ಅವರೊಂದಿಗೆ ಯಾವುದೇ ಬಗೆಯ ದೈಹಿಕ ಸಂಪರ್ಕವನ್ನು ದ್ವಿಜರಿಗೂ, ಶೂದ್ರರಿಗೂ ಕಡ್ಡಾಯವಾಗಿ ನಿಷೇಧಿಸಲಾಯಿತು. ಜಾತಿಗಳನ್ನು ಅವರ ಮೂಲ ಮತ್ತು ಅವರ ವೃತ್ತಿ ಸ್ವರೂಪಗಳಿಗನುಗುಣವಾಗಿ ಕೆಳಗಿನಿಂದ ಮೇಲಕ್ಕೆ ವರ್ಗೀಕರಿಸಿದ ಶ್ರೇಣಿಯಲ್ಲಿ ಅಳವಡಿಸಲಾಯಿತು. ಪ್ರತಿಯೊಂದು ವರ್ಣದಲ್ಲೂ ಜಾತಿಗಳ ಅಧಿಕಾರ ಶ್ರೇಣಿ ರೂಪುಗೊಂಡಿತು. ಜಾತಿಗಳನ್ನು ಹೊಸದಾಗಿ ಹುಟ್ಟಿ ಹಾಕುವುದರ ಬದಲಾಗಿ ಕುಶಲಕರ್ಮಿಗಳು, ಕೆಲಸಗಾರರು ಮತ್ತಿತರ ವ್ಯವಸ್ಥಿತ ವೃತ್ತಿ ಪಂಗಡಗಳ ಜನರನ್ನು ಮೊದಲೇ ಇದ್ದ ಗಿಲ್ಡ್‌ಗಳಲ್ಲಿ ತೊಡಗಿಸಲಾಯಿತು. ಕಾಲದಿಂದ ಕಾಲಕ್ಕೆ ಈ ವ್ಯವಸ್ಥೆಗೆ ಹೊಸ ಹೊಸ ಜಾತಿಗಳನ್ನು ಸೃಷ್ಟಿಸಿ ಕೂಡಿಸಲಾಯಿತು.

ಈ ಉಪಖಂಡದ ಸಂಪ್ರದಾಯ – ಪರಂಪರೆಗಳನ್ನು ಆರ್ಯೀಕರಣಗೊಳಿಸುವ ಈ ಪ್ರಕ್ರಿಯೆ ಸುಲಭವಾದದ್ದಾಗಿರಲಿಲ್ಲ, ಸಮಗ್ರವೂ ಆಗಲಿಲ್ಲ, ಪ್ರಾರಂಭಿಕ ಹಂತದಲ್ಲಿ ಸಾಂಸ್ಕೃತಿಕ ಸಂಘರ್ಷ ಹಾಗೂ ಯುದ್ಧ ಗಣನೀಯ ಪ್ರಮಾಣದಲ್ಲಿ ನಡೆದುದು ತಿಳಿದುಬರುತ್ತದೆ. ಸಿಂಧೂ, ಗಂಗಾ ನದಿಯ ಬಯಲಿನಲ್ಲಿ ಇಂಡೋ ಆರ್ಯನ್ ದೊರೆ ಸುದಾಸನು ಹತ್ತುಜನ ಮಿತ್ರ ರಾಜರೊಂದಿಗೆ ಕಾದಾಡಿದುದರ

ವರದಿಯನ್ನು ಋಗ್ವೇದವು ಕೊಡುತ್ತದೆ. ಕೆಲವು ಇಂಡೋ–ಆರ್ಯನ್ ತಂಡಗಳು ಪಂಚನದ (ಪಂಜಾಬ್)ದಲ್ಲಿನ ತಮ್ಮ ನಿವಾಸಗಳಿಂದ ಹೊರಟು ಪೂರ್ವದಿಕ್ಕಿಗೆ ಬರುವಾಗ ಘರ್ಷಣೆಯಾಯಿತು. ಅದಕ್ಕಿಂತ ಮುಂಚೆಯೂ ಕೂಡ ಅವರಿಗೂ *ಪುರ* ಮತ್ತು *ದುರ್ಗ*ಗಳಲ್ಲಿದ್ದ ಜನರೊಂದಿಗೆ ಘರ್ಷಣೆಯುಂಟಾಗಿತ್ತು, ಆ ಜನರು ತಮ್ಮ ಪರವಾಗಿ ದೈವ ಸಹಾಯವನ್ನು ಕೂಡ ಕೋರಿದ್ದರು. ಹಾಗೆಯೇ ರಾಜಿ, ವಾಸ ಮಾಡಲು ಅವಕಾಶ ಮಾಡಿಕೊಡುವಿಕೆಗಳೂ ಕಂಡುಬಂದುವು. ನಿದರ್ಶನಕ್ಕೆ ಹೇಳುವುದಾದರೆ, ಹತ್ತು ರಾಜರ ಯುದ್ಧವು ಇಂಡೋ ಆರ್ಯನರಿಗೂ, ಮಿಕ್ಕವರಿಗೂ ನಡೆದ ಯುದ್ಧವಲ್ಲ. ಯಕ್ಸುಗಳ ಅರಸ ಭೇಡ ಸುದಾಸನ ಪಕ್ಷಕ್ಕೆ ಬಂದು ಯುದ್ಧ ಮಾಡಿದನು. ಇಂಡೋ–ಆರ್ಯನರು ಕ್ರಮಕ್ರಮವಾಗಿ ದನಗಾಹಿತನದಿಂದ ವ್ಯವಸಾಯ, ಆರ್ಥಿಕತೆಯತ್ತ ಪರಿವರ್ತನೆಗೊಳ್ಳುತ್ತಿದ್ದರು. ಇದರಿಂದಾಗಿ ಮೂಲ ನಿವಾಸಿಗಳೊಂದಿಗೆ ಅವರಿಗೆ ಹೆಚ್ಚಿನ ಸಂಬಂಧ, ಸಾಮರಸ್ಯ ಅಗತ್ಯವಾಯಿತು. ಆ ವೇಳೆಗಾಗಲೆ ಅವರ ನಡುವೆ ಒಂದು ಬಗೆಯ ಸಂಯೋಜನೆಯ ಪ್ರಕ್ರಿಯೆ ಪ್ರಾರಂಭವಾಗಿತ್ತು, ಇಂಡೋ ಆರ್ಯನರು ಪೂರ್ವ ದಿಕ್ಕಿಗೆ ಮಂದೆ, ಮುಂದೆ ಚಲಿಸಿ ವಿಂಧ್ಯವನ್ನು ದಾಟಿ ಮಾಳವ ಪ್ರದೇಶಕ್ಕೆ ಬರುವ ವೇಳೆಗೆ ಈ ಪ್ರವೃತ್ತಿ ಗಟ್ಟಿಗೊಂಡಿತು. ಮುಂದೆ ನಡೆದ ಹೋರಾಟದ ಫಲವಾಗಿ ಪ್ರಾಂತ್ಯ ಸಂಪ್ರದಾಯವು ಹುಟ್ಟಿಕೊಂಡಿತು. ಆರ್ಯೇತರರು ಇಂಡೋ ಆರ್ಯನ್ ಆಚರಣೆಗಳ ಕೆಲವಂಶಗಳನ್ನೂ ಸಮಾಜ ವ್ಯವಸ್ಥೆಯನ್ನು ಕುರಿತ ಸಿದ್ಧಾಂತವನ್ನೂ ತಮ್ಮಲ್ಲಿ ಅಳವಡಿಸಿಕೊಂಡರು. ಆಗಲೂ ತಮ್ಮದೇ ಕುಲ ವೈಶಿಷ್ಟ್ಯವನ್ನೂ ಪ್ರಾದೇಶಿಕ ವೈಶಿಷ್ಟ್ಯವನ್ನೂ ಉಳಿಸಿಕೊಂಡರು. ಬಹುಳತ್ವ ಸ್ಥಿರಗೊಳ್ಳುತ್ತಿತ್ತು, ಒಂದು ಸಾಂಸ್ಕೃತಿಕ ವೈವಿಧ್ಯವು ರೂಪುಗೊಳ್ಳುತ್ತಿತ್ತು.

ಈ ವಿಲೀನಕ್ಕೆ ಮೂರು ಬಗೆಯ ಕಷ್ಟಗಳು ಎದುರಾದುವು. ಮೊದಲನೆಯದಾಗಿ, ಕೆಲವು ಆದಿವಾಸಿ ಬುಡಕಟ್ಟು ವರ್ಗಗಳು ವಿಲೀನಕ್ಕೆ ಒಪ್ಪದೆ ದುರ್ಗಮವಾದ ಕಾಡುಗಳು ಮತ್ತು ಬೆಟ್ಟಗಳಿಗೆ ಹೋಗಿ ಸೇರಿಕೊಂಡರು. ಅವರಲ್ಲಿ ಅನೇಕರು, ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಇತರರೊಂದಿಗೆ ಸಂಸರ್ಗವಿರಿಸಿಕೊಳ್ಳುವಲ್ಲಿ ಸ್ಪಷ್ಟವಾದ ಯಾವುದೇ ನಿಯಮವನ್ನಿಟ್ಟುಕೊಂಡಿಲ್ಲವಾದರೂ, ಇಂದಿಗೂ ತಮ್ಮ ಪ್ರತ್ಯೇಕತೆಯನ್ನೇ ಉಳಿಸಿಕೊಂಡಿದ್ದಾರೆ. ಬಲವಾದ ವೃತ್ತಿ ಸಂಘಗಳ ಪರಂಪರೆಯುಳ್ಳ ಕೆಲವು ಜಾತಿ ಮತ್ತು ಜಾತಿವರ್ಗಗಳ ವಿಷಯದಲ್ಲೂ ಈ ಮಾತು ನಿಜ. ಆಂಧ್ರಪ್ರದೇಶದಲ್ಲಿ ಪಂಚಬ್ರಹ್ಮ–ಐದು ಬಗೆಯ ಕುಶಲಕರ್ಮಿ ವರ್ಗಗಳ ಗುಚ್ಛ –ಒಂದು ಸ್ವತಂತ್ರ ಸಗೋತ್ರ ವಿವಾಹವುಳ್ಳ ವಿಶಿಷ್ಟ ತಂಡವಾಗಿ, ತಮ್ಮದೇ ಧಾರ್ಮಿಕಾಚರಣೆಗಳನ್ನು ಬೆಳೆಸಿಕೊಂಡು ಬ್ರಾಹ್ಮಣ ಪುರೋಹಿತನ ನೆರವು ಕೋರದೆ ಪ್ರವರ್ತಿಸುತ್ತಿದೆ. ಎರಡನೆಯದಾಗಿ ಕೆಲವು ಬಲಿಷ್ಠವಾಗಿದ್ದ ಕುಲ ವರ್ಗಗಳು ಹೀಗೆ ವಿಲೀನಗೊಳ್ಳುವುದರಲ್ಲಿ ವಿಶೇಷವಾದ ಸಮಸ್ಯೆಗಳನ್ನು ತಂದೊಡ್ಡಿದವು. ಆಂಧ್ರ ಪ್ರದೇಶದ ರೆಡ್ಡಿ, ಕೇರಳದ ನಾಯರ್, ತಮಿಳುನಾಡಿನ ಮಾರವ, ಮಹಾರಾಷ್ಟ್ರದಲ್ಲಿ ಮರಾಠಾ – ಇವರು ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಎಷ್ಟು ಪ್ರಬಲವಾಗಿದ್ದ

ವರ್ಗಗಳೆಂದರೆ ಇವರಿಗೆ ಶೂದ್ರ ಸ್ಥಾನಮಾನವನ್ನು ಕೊಡಲು ಸಾಧ್ಯವಿರಲಿಲ್ಲ. ಔಪಚಾರಿಕವಾಗಿ ಇವರನ್ನು ದ್ವಿಜರೆಂದು ಪರಿಗಣಿಸದೇ ಹೋದರೂ ಅವರು ಹೆಚ್ಚುಕಡಿಮೆ ಕ್ಷತ್ರಿಯ–ಸಮೀಪದ ಸ್ಥಾನವನ್ನು ಗಳಿಸಿಕೊಂಡರು. ಮೂರನೆಯದಾಗಿ, ಗ್ರೀಕರು, ಸಿಥಿಯನ್ನರು, ಪಾರ್ಥಿಯನ್ನರು, ಶಕರು, ಕುಶಾನರು, ಹೂಣರು ಮೊದಲಾಗಿ ಮುಂದೆ ಬಂದವರು ದೀರ್ಘಕಾಲ ಅಧಿಕಾರವನ್ನು ಚಲಾಯಿಸಿದರು. ಭಾರತದಲ್ಲೇ ನೆಲೆಸಿದರು. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಲೀನಗೊಳ್ಳಲು ಇಚ್ಛಿಸಿದರು. ಆದರೆ, ಅವರು ಪರಕೀಯರಾದ್ದರಿಂದ ಮ್ಲೇಚ್ಛರೆಂದು ಅವರನ್ನು ಪರಿಗಣಿಸಲಾಯಿತು. ಆದರೇನು, ಅವರಿಗೆ ಅಧಿಕಾರವಿತ್ತು, ಉನ್ನತ ಸ್ಥಾನಮಾನವಿತ್ತು. ಬೌದ್ಧಧರ್ಮದ ಪ್ರಾಬಲ್ಯದಿಂದ ಯಾವ ಪ್ರದೇಶಗಳಲ್ಲಿ ಹಿಂದೂ ಸಾಂಪ್ರದಾಯಿಕತೆಯು ದುರ್ಬಲಗೊಂಡಿತೋ ಆ ಪ್ರದೇಶಗಳಲ್ಲಿ ಕುಶಾನರಂತಹ ಕೆಲವು ವರ್ಗಗಳು ಲೀನಗೊಂಡರು. ಬೌದ್ಧರೂ ಕೂಡ ಮತಾಂತರಿಗಳನ್ನು ಸ್ವೀಕರಿಸಲು ಉತ್ಸುಕರೇ ಆಗಿದ್ದರು. ಹಾಗಾಗಿ ಈ ವಿದೇಶೀಯ ಅಂಶಗಳನ್ನು ಭಾರತೀಯ ಸಮಾಜದೊಳಕ್ಕೆ ಸೇರಿಸಿಕೊಳ್ಳಲಾಯಿತು. ಭಾರತೀಯ ಇತಿಹಾಸದಲ್ಲಿ ಗೌರವಪೂರ್ವಕವಾಗಿ ದಾಖಲು ಮಾಡಿರುವ ಇಬ್ಬರು ಸುಪ್ರಸಿದ್ಧ ಅರಸರು ಮೀನಾಂಡರ್ (ಇಂಡೋ–ಗ್ರೀಕ್ ಮಿಲಿಂದ್, ಕ್ರಿ.ಪೂ. 155–30) ಮತ್ತು ಕಾನಿಷ್ಕ (ಕುಶಾನ ದೊರೆ. ಕ್ರಿ.ಶ. 1ನೆಯ ಶತಮಾನ). ಇಬ್ಬರೂ ಗಮನಾರ್ಹರಾದ ಬೌದ್ಧರು.

ಶಕರೇ ಮೊದಲಾದ ಕೆಲವು ವರ್ಗದವರು ಶೈವರಾಗಿ ಪರಿವರ್ತಿತರಾದರು. ಏಕೆಂದರೆ, ಈ ಪಂಥದಲ್ಲಿ, ವಿಶೇಷವಾಗಿ ಕೆಲವು ಉಪಪಂಗಡಗಳಲ್ಲಿ ಮೂಲದ ಶುದ್ಧತೆ ಹಾಗೂ ಧಾರ್ಮಿಕ ಜೀವನದ ನಿಯಮಗಳು ಅಷ್ಟು ಕಟ್ಟುನಿಟ್ಟಿನವಾಗಿರಲಿಲ್ಲ. ಸುಪ್ರಸಿದ್ಧ ದೊರೆ ರುದ್ರದಾಮನ್ ಈ ಗುಂಪಿಗೆ ಸೇರಿದವನು. ಹೂಣ ಮೂಲವಿದ್ದ ರಾಜಪುತ್ರರನ್ನು ಹಿಂದೂ ಸಮಾಜವು ತನ್ನೊಳಕ್ಕೆ ಸೇರಿಸಿಕೊಂಡಿತು. ಅವರ ಶಕ್ತಿ ಸಾಮರ್ಥ್ಯದ ಕಾರಣವಾಗಿ ಮೇಲುಹಂತದ ಮನ್ನಣೆಯನ್ನು ಕೊಟ್ಟಿತು.

ಭಾರತೀಯ ಸಮಾಜವನ್ನು ಕುರಿತ ಸಾಮಾನ್ಯ ನಿರೂಪಣೆಗಳು ಈಶಾನ್ಯ ಪ್ರದೇಶದ ಬಗೆಗೆ ಹೇಳುವುದು ಬಹಳ ಸ್ವಲ್ಪ; ದಕ್ಷಿಣವನ್ನು ಕುರಿತೂ ಚೂರುಪಾರು ಹೇಳುತ್ತವೆ. ಇದರಿಂದಾಗಿ ದೇಶದ ಸಾಮಾಜಿಕ ಚಿತ್ರವು ಅಸಮರ್ಪಕವೂ ಅಸಮಗ್ರವೂ ಆಗುತ್ತದೆ.

ಈಶಾನ್ಯ ಭಾಗದ ಮಂಗೋಲಾಯ್ಡ್ ವರ್ಗದ ಜನರು ಕೆಲವೆಡೆ ತಮ್ಮ ಮೂಲ ಆದಿವಾಸೀ ಲಕ್ಷಣಗಳನ್ನು ಉಳಿಸಿಕೊಂಡಿದ್ದಾರೆ, ಇನ್ನು ಹಲವೆಡೆ ಅರ್ಧಮರ್ಧವಾಗಿಯೋ ಪೂರ್ಣವಾಗಿಯೋ ಹಿಂದೂ ಸಮಾಜದಲ್ಲಿ ವಿಲೀನ ಹೊಂದಿಬಿಟ್ಟಿದ್ದಾರೆ. ಬುಡಕಟ್ಟು ಪಂಗಡಗಳಾದ ಖಾಸಿ, ಮಿಜೋ ಮತ್ತು ನಾಗಾಗಳು ಈಗ ಕ್ರೈಸ್ತರಾಗಿ ಮತಾಂತರಗೊಂಡಿದ್ದಾರೆ. ಹಾಗಿದ್ದರೂ ಅವರು ತಮ್ಮ ಆದಿವಾಸೀ ಜೀವನ ಲಕ್ಷಣಗಳಲ್ಲಿ ವಿಶಿಷ್ಟವಾದ ಕೆಲವನ್ನು ಇನ್ನೂ ಉಳಿಸಿಕೊಂಡೇ ಇದ್ದಾರೆ. ಈ ಪಂಗಡಗಳು (ಇಂಡೋ–ಮಂಗೋಲಾಯ್ಡ್) ಭಾಷಾಶಾಸ್ತ್ರ ತಜ್ಞರಾದ ಸುನೀತಿ

ಕುಮಾರ ಚಟರ್ಜಿ ಅವರ ಪ್ರಕಾರ, ಕಿರಾತ ಎಂಬ ವರ್ಗದ ಪೀಳಿಗೆಯವರು. ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ಕಿರಾತರ ಹೆಸರು ಪದೇ ಪದೇ ಉಲ್ಲೇಖವಾಗುತ್ತದೆ. ದೇಶದ ಬೇರೆ ಭಾಗಗಳಲ್ಲಿ ಕಾಣಲಾಗದ ಕೆಲವು ಸಾಮಾಜಿಕ ಪ್ರಕ್ರಿಯೆಗಳನ್ನು ಕಿರಾತ ವಲಯವು ನಮಗೆ ತೋರಿಸುತ್ತದೆ.

ಅರುಣಾಚಲ ಪ್ರದೇಶ, ಮೇಘಾಲಯ, ಮಿಜೋರಾಂ ಮತ್ತು ನಾಗಾಲ್ಯಾಂಡ್ ರಾಜ್ಯಗಳನ್ನು ಕಿತ್ತು ಪ್ರತ್ಯೇಕಗೊಳಿಸುವುದಕ್ಕಿಂತ ಮುಂಚಿನ ಅಸ್ಸಾಂ ರಾಜ್ಯವು ಆದಿವಾಸಿ ಕುಲಗಳಿಗೂ, ವಿಭಿನ್ನ ಸಂಸ್ಕೃತಿಗಳಿಗೂ ನೆಲೆಯೊದಗಿಸಿತ್ತು. ಮಣಿಪುರ, ತ್ರಿಪುರ ಮತ್ತು ಪಶ್ಚಿಮ ಬಂಗಾಳದ ಡಾರ್ಜಿಲಿಂಗ್ ಜಿಲ್ಲೆ ಇವುಗಳ ಹೊರತು ಮಿಕ್ಕಂತೆ ಪೂರ್ತಿ ಈಶಾನ್ಯ ಪ್ರದೇಶವನ್ನು ಅದು ವ್ಯಾಪಿಸಿತ್ತು. ಪ್ರಾಚೀನ ಕಾಲದಲ್ಲಿ ಈ ಪ್ರದೇಶವನ್ನು ಪ್ರಾಗ್ಜ್ಯೋತಿಷ ಎಂದು ಕರೆಯಲಾಗುತ್ತಿತ್ತು. ಬಹಳ ವಿಸ್ತಾರವಾದ ಭೂ ಪ್ರದೇಶವನ್ನು ಅದು ವ್ಯಾಪಿಸಿದ್ದಿತು. ರಾಮಾಯಣ ಮತ್ತು ಮಹಾಭಾರತ ಕಾವ್ಯಗಳೂ ಕೆಲವು ಪುರಾಣಗಳೂ ಈ ಹೆಸರಿನ ಪ್ರದೇಶವನ್ನು ಹೇಳುತ್ತವೆ. ಮುಂದೆ ಬಹುಶಃ ಮಧ್ಯಯುಗದಲ್ಲಿ ಅದನ್ನು ಕಾಮರೂಪ ಎಂದು ಕರೆದರು. ಮಾಟಮಂತ್ರ, ತಂತ್ರ ಮೊದಲಾದ ಅಭಿಚಾರ ಕ್ರಿಯೆಗಳಿಗೆ ತವರು ಎಂಬ ಖ್ಯಾತಿಯನ್ನು ಪಡೆಯಿತು. ಗುವಾಹತಿಯ ಬಳಿಯ ಕಾಮಾಖ್ಯ ದೇವಾಲಯವು ಹಿಂದೂ ಧರ್ಮದ ಶಾಕ್ತ ಶಾಖೆಯ ಅತಿದೊಡ್ಡ ನೆಲೆ ಎಂದು ಪರಿಗಣಿಸಲಾಗಿದೆ. ಇನ್ನೂ ಮುಂದೆ ಈ ಪ್ರದೇಶವೇ ಈಗಿನ ಅಸ್ಸಾಂ ಎಂಬ ಹೆಸರು ಪಡೆಯಿತು. ಈ ಹೆಸರಿನ ಮೂಲವನ್ನು ಕುರಿತು ಅನೇಕ ಊಹೆಗಳನ್ನು ಮಾಡಿದ್ದಾರೆ. ಒಂದು ವಿವರಣೆಯ ಪ್ರಕಾರ ಈ ಪ್ರದೇಶದ ಭೂಮಿಯು ಸಮತಟ್ಟಾಗಿಲ್ಲದುದರಿಂದ 'ಅಸಮ'ವಾಗಿದೆ; ಅಥವಾ ಹೋಲಿಕೆಯಿಲ್ಲದಷ್ಟು ಮಹತ್ವದ್ದಾದ್ದರಿಂದ 'ಅಸಮ'. ಇನ್ನೂ ಒಂದು ದೃಷ್ಟಿಯಲ್ಲಿ ಈ ಹೆಸರು 'ಅಹೋಂ' ವಿಜೇತರೊಂದಿಗೆ ಸಂಬಂಧಪಟ್ಟಿದೆ.

ವಾಯುವ್ಯದ ಕಣಿವೆಗಳ ಮೂಲಕ ಭಾರತಕ್ಕೆ ಜನವರ್ಗಗಳು ವಲಸೆ ಬಂದುದನ್ನು ದಾಖಲೆಗಳು ಹೇಳುತ್ತವೆ. ಅಷ್ಟಾಗಿ ಪ್ರಸಿದ್ಧವಾಗಿಲ್ಲದ ವಿಷಯವೆಂದರೆ, ಕಷ್ಟಕರವಾದ ಈಶಾನ್ಯ ಮಾರ್ಗಗಳಿಂದ, ಹೆಚ್ಚಾಗಿ ಅಸ್ಸಾಂ–ಬರ್ಮಾ ಕಣಿವೆಗಳು ಮತ್ತು ಉತ್ತರದ ಭೂತಾನ್, ನೇಪಾಳ, ಟಿಬೆಟ್‌ಗಳ ಮೂಲಕ ಮಂಗೋಲಾಯ್ಡ್ ಪಂಗಡಗಳು ಅಲೆಯಲೆಯಾಗಿ ದೇಶದೊಳಕ್ಕೆ ವಲಸೆ ಬಂದದ್ದು. ಮೊದಮೊದಲು ಅಸ್ಸಾಮಿನಲ್ಲಿ ನೆಲೆಸಿದ ಜನರು ಈ ಮಾರ್ಗಗಳಿಂದ ಬಂದವರು, ವಿಶೇಷವಾಗಿ ಬರ್ಮಾ ಕಣಿವೆಗಳ ಮೂಲಕ ಬಂದವರು. ಮೊದಲು ಕೆಲವು ಪಂಗಡಗಳು ಸಮುದ್ರದ ಮೇಲೆ ಬಂದು ಬಂಗಾಳ ಅಥವಾ ಬರ್ಮಾ ಮೂಲಕ ಭೂಮಾರ್ಗಗಳನ್ನು ಹಿಡಿದು ಅಸ್ಸಾಂ ತಲುಪಿದುವು. ಬಹಳ ಪ್ರಾಚೀನ ಕಾಲದಲ್ಲಿ ನೆಗ್ರಿಟೋ ಮತ್ತು ಆಸ್ಟ್ರಿಕ್ ವರ್ಗದ ಜನರೂ ಬಂದಿರಬಹುದೆಂಬುದಕ್ಕೆ ಭೌತಿಕ ಮಾನವ ಶಾಸ್ತ್ರವು ಕೆಲವು ಪುರಾವೆಗಳನ್ನು ಒದಗಿಸುತ್ತದಾದರೂ ಅವರು ಸಮಾಜದ ಮೇಲೆ, ಸಂಸ್ಕೃತಿಯ ಮೇಲೆ ಯಾವುದೇ ಪ್ರಭಾವ ಬೀರಿದರೆಂದು ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆಸ್ಟ್ರಲಾಯ್ಡ್ ಜನರು ಅಸ್ಸಾಮಿನಲ್ಲಿ ಕಾಣುವುದಿಲ್ಲ. ಆದರೆ ಭೌತಮಾನವ ಶಾಸ್ತ್ರಜ್ಞರು ನಂಬುವಂತೆ

ಇವರು ಮಂಗೋಲಾಯ್ಡರಿಗಿಂತ ಮೊದಲೇ ಬಂದರು, ಆಮೇಲೆ ಬಂದ ಅವರೊಳಗೆ ವಿಲೀನವಾಗಿಬಿಟ್ಟರು. ಆಮೇಲೆ ಅಸ್ಸಾಮಿನ ಪರಂಪರಾಗತ ಸಾಂಸ್ಕೃತಿಕ ಮತ್ತು ರಾಜಕೀಯ ಗಡಿಗಳಿಗಿಂತ ಪಶ್ಚಿಮಕ್ಕಿರುವ ಭಾರತದ ಭೂಭಾಗಗಳಿಂದ ಜನರು ವಲಸೆ ಬಂದರು. ಅವರಲ್ಲಿ ಹಿಂದೂಗಳೂ ಇದ್ದರು, ಮುಸ್ಲಿಮರೂ ಇದ್ದರು. ಪದೇ ಪದೇ ಸೇನಾಕ್ರಮಣಗಳಾಗುತ್ತಿದ್ದುವು, ಜನರು ಉಗ್ರವಾಗಿ ಅದನ್ನು ಪ್ರತಿಭಟಿಸುತ್ತಿದ್ದರು. ಏನೇ ಇರಲಿ ವಲಸಿಗರ ಹರಿವು ಮುಂದುವರಿದೇ ಇತ್ತು. ಅನೇಕ ಅಸ್ಸಾಮಿಯೇತರ ಹಿಂದೂ ಮತ್ತು ಮುಸ್ಲಿಂ ಜನರು ಅಸ್ಸಾಮಿನ ಜನತೆಯಲ್ಲಿ ಬೆರೆತು ಹೋದರು.

ಅಸ್ಸಾಮಿನಲ್ಲಿರುವ ಮಂಗೋಲಾಯ್ಡ್ ವರ್ಗಗಳ ಇತಿಹಾಸ ದೀರ್ಘವಾದದ್ದು, ಸಮಾಜದಲ್ಲಿ ರೂಪುಗೊಂಡ ಅವರ ನೆಲೆ ತುಂಬ ಸಂಕೀರ್ಣವೂ ಆದದ್ದು. ಈ ಎರಡೂ ಬಹು ಸೂಕ್ಷ್ಮವಾದ ಭಾವನೆಗಳನ್ನು ಕೆಣಕುತ್ತವೆಯಾದ್ದರಿಂದ ಅವನ್ನು ಕುರಿತು ಸಾಧಾರಣೀಕರಿಸಿ ಹೇಳುವುದು ಸಂದೇಹಕ್ಕೂ ವಿವಾದಕ್ಕೂ ಎಡೆಗೊಡುತ್ತದೆ. ಒಂದು ವಿಚಾರದಲ್ಲಿ ಭಿನ್ನಮತವಿಲ್ಲ. ಇದೇ ಅಸ್ಸಾಮೀ ಸಂಸ್ಕೃತಿಯ ಹಾಗೂ ಸಮಾಜದ ಮೂಲಾಧಾರವಾಗಿದೆ. ಸಾಂಸ್ಕೃತಿಕ ಸ್ವೀಕಾರಗಳು, ಹೊಂದಾಣಿಕೆಗಳು ನಡೆದಿವೆ, ಬೇಕಾದ ಹಾಗೆ. ಆದರೆ ಈ ಜನ ವರ್ಗಗಳ ಮುದ್ರೆ ಅಚ್ಚಳಿಯದೆ ಉಳಿದಿದೆ.

ಬೋಡೋಗಳು ಅಥವಾ ಬೋರೋಗಳು ಅಸ್ಸಾಮಿನಲ್ಲಿರುವ ಬಹುಮುಖ್ಯವಾದೊಂದು ಪಂಗಡ. ಈ ಜಾತಿವಾಚಕವು ಒಂದು ಬುಡಕಟ್ಟನ್ನು ಸೂಚಿಸುವುದಿಲ್ಲ. ಟಿಬೆಟೋ – ಬರ್ಮನ್ ಕುಟುಂಬಕ್ಕೆ ಸೇರಿದ ಬೋಡೋ ಭಾಷೆಯನ್ನಾಡುವ ಅನೇಕ ಸಮುದಾಯಗಳನ್ನು ಸೂಚಿಸುತ್ತದೆ. ಹಿಂದೊಮ್ಮೆ ತಮ್ಮದೇ ರಾಜ್ಯವನ್ನು ಹೊಂದಿದ್ದ ಬಲಿಷ್ಠ ಜನರಾದ ಕಚಾರಿಗಳೂ ಇದರಲ್ಲಿ ಸೇರುತ್ತಾರೆ. ಹಾಗೆಯೇ ರಾಭಾಗಳು ಕೂಡ. ಎರಡು ವರ್ಗಗಳೂ ವೇಗವಾಗಿ ಹಿಂದೂ ಆಗುತ್ತಿವೆ; ಈಗಾಗಲೇ ಒಂದು ಭಾಗವು ತನ್ನನ್ನು ಹಿಂದೂ ಎಂದು ಹೇಳಿಕೊಳ್ಳುತ್ತದೆ. ವಿವಿಧ ಮೂಲಗಳಿಗೆ ಸೇರಿದ ಈ ಜನರು ಹಿಂದೂ ಧರ್ಮದಲ್ಲಿ ವಿಲೀನಗೊಂಡ ಮೇಲೆ ರಾಜವಂಶಿಗಳು ಎಂದು ತಮ್ಮನ್ನು ಹೊಸದಾಗಿ ಗುರುತಿಸಿಕೊಂಡಿದ್ದಾರೆ. ಅಸ್ಸಾಮಿನ ಬಹು ಭಾಗವನ್ನು ಆಳಿದ, ಈಗ ಹಿಂದೂ ಜಾತಿಯಾಗಿರುವ ಕೋಚ್ ಜನಸಮುದಾಯ ಕೂಡ ಇದರಲ್ಲಿ ಸೇರುತ್ತದೆ. ಇವರೂ ತಮ್ಮ ಪರಂಪರಾಗತ ನಾಮವನ್ನು ತ್ಯಜಿಸಿ ತಮ್ಮನ್ನು ರಾಜವಂಶಿಗಳೆಂದು ಹೇಳಿಕೊಳ್ಳುತ್ತಾರೆ. ಇನ್ನೊಂದು ಬಹುಮುಖ್ಯವಾದ ಗುಂಪೆಂದರೆ; ಇಂಡೋ–ಮಂಗೋಲಾಯ್ಡ್ ಜನವರ್ಗದ್ದು. ಇದರಲ್ಲಿ ಚೂಟಿಯಾ, ದೇವ್ರಿ, ಮಿಶಿಂಗ್ ಮತ್ತು ಮೊರಾನ್ ಗುಂಪುಗಳು ಸೇರುತ್ತವೆ. ಇವರು ಈಗ ಅಸ್ಸಾಮಿನ ಮೇಲುಭಾಗದಲ್ಲಿ ವಾಸಿಸುತ್ತಾರೆ. ಚೂಟಿಯಾಗಳಿಗೆ ಮತ್ತು ಮೊರಾನರಿಗೆ ಹಿಂದೆ ತಮ್ಮವೇ ರಾಜ್ಯಗಳಿದ್ದುವು. ಅವರೀಗ ಇತರ ಜನವರ್ಗಗಳೊಂದಿಗೆ ಬೆರೆತು ಹೋಗಿದ್ದಾರೆ. ಬಹು ಭಾಗ ಜನರು ಹಿಂದೂ ಧರ್ಮಕ್ಕೆ ಪರಿವರ್ತಿತರಾಗಿದ್ದಾರೆ.

ಅಸ್ಸಾಮಿನ ದಕ್ಷಿಣದ ತುದಿಯಲ್ಲಿ ವಾಸಿಸುವ ಕುಕಿ – ಚಿನ್ ಗುಂಪುಗಳು ಮೂರನೆಯ ಗುಂಪಾಗಿದ್ದು ಬರ್ಮೀಯರು ಮತ್ತು ಕಾಚಿನ್‌ರೊಂದಿಗೆ ಭಾಷಾ ಸಂಬಂಧ ಹೊಂದಿದ್ದಾರೆ. ಹಿಂದೂ ಧರ್ಮವನ್ನು ಅಂಗೀಕರಿಸದೆ ಇವರು ತಮ್ಮ ಸಾಂಪ್ರದಾಯಿಕ ಜೀವನ ವಿಧಾನವನ್ನು ಹಾಗೇ ಉಳಿಸಿಕೊಂಡು ಬಂದರು. ಆದರೆ ಈಗ ಇವರಲ್ಲಿ ಹೆಚ್ಚು ಜನ ಕ್ರೈಸ್ತಮತಕ್ಕೆ ಪರಿವರ್ತಿತರಾಗಿದ್ದಾರೆ. ನಾಲ್ಕನೆಯ ಮತ್ತು ಬಹುಶಃ ಅತ್ಯಂತ ಮುಖ್ಯವಾದ ತಂಡ ಅಹೋಂ ಎಂಬ ಹೆಸರಿನ ತಾಯ್ ಅಥವಾ ಶಾನ್ ಮೂಲದ ಜನವರ್ಗ. ಇವರು ಮೊದಲು ಚೈನಾದ ಯನ್ನಾನ್‌ದಿಂದ ಮೇಲು ಬರ್ಮಾಕ್ಕೆ ವಲಸೆ ಬಂದಿರಬಹುದು. ಅಲ್ಲಿಂದ ಅವರ ಒಂದು ಶಾಖೆಯು ಹದಿಮೂರನೆಯ ಶತಮಾನದಲ್ಲಿ ಅಸ್ಸಾಮನ್ನು ಪ್ರವೇಶಿಸಿತು. ಬಹು ಸಮರ್ಥವಾದ ರಾಜ್ಯವನ್ನು ಅಥರು ಕಟ್ಟಿದರು. ಅದರ ದಾಖಲೆಗಳು ಅವರ ಪುರೋಹಿತರು ಮತ್ತು ಗಣ್ಯ ಜನರು ಕಾಪಾಡಿಟ್ಟುಕೊಂಡಿರುವ ಬುರಂಚೀಗಳಲ್ಲಿ, ಅಂದರೆ ಐತಿಹಾಸಿಕ ಕಥನಗಳಲ್ಲಿ ದೊರಕುತ್ತವೆ. ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದವರೆಗೂ ಅವರು ಆಳುತ್ತಿದ್ದರು. ಆಗ ಬ್ರಿಟಿಷರು ಆ ಸಾಮ್ರಾಜ್ಯವನ್ನು ಗೆದ್ದು ವಶಪಡಿಸಿಕೊಂಡರು. ಅಹೋಂ ಜನರು ತಮ್ಮ ತೆಕ್ಕೆಗೆ. ಅನೇಕರನ್ನು ಸೇರಿಸಿಕೊಂಡರು. ಅಹೋಮರಲ್ಲದವರೊಂದಿಗೆ ಮುಕ್ತ ವಿವಾಹ ಸಂಬಂಧ ಇರಿಸಿಕೊಂಡರು, ಅಸ್ಸಾಮೀ ಭಾಷೆಯನ್ನು ತಮ್ಮದಾಗಿಸಿಕೊಂಡರು, ಕ್ರಮೇಣ ಹಿಂದೂ ಆಗುತ್ತಾ ಹೋದರು. ಇತರ ಶಾನ್ ತಂಡಗಳಾದ ಖಾಂಯಾಂಗ್, ಖಾಮ್ತಿ, ತುರಂಗ್, ಐತನ್ ಫಕೆಯಲ್ ಮತ್ತು ಇನ್ನೂ ಅನೇಕರು ಅಸ್ಸಾಮಿಗೆ ಬಂದದ್ದು ಆಮೇಲೆ. ಅವರು ತಾಯ್ ಕುಟುಂಬದ ಭಾಷೆಗಳನ್ನು ಆಡುತ್ತಿದ್ದರು, ಸಾಂಸ್ಕೃತಿಕವಾಗಿ ಅವರ ಮೇಲೆ ಬರ್ಮೀಯರ ಪ್ರಭಾವವಿತ್ತು. ಅವರು ಹಿಂದೂ ಧರ್ಮವನ್ನು ಒಪ್ಪಲಿಲ್ಲ, ಬೌದ್ಧಧರ್ಮವನ್ನು ಅನುಸರಿಸಿದರು. ಅಸ್ಸಾಂ ರಾಜ್ಯವು ಭಾರತದ ಸಾಂಸ್ಕೃತಿಕ ಪ್ರಕ್ರಿಯೆಗಳ ಸ್ವರೂಪ ಏನೆಂಬುದನ್ನೂ, ವಿದೇಶೀ ಜನ ವರ್ಗಗಳನ್ನು ಹಿಂದೂ ಸಮಾಜದೊಳಕ್ಕೆ ಹೇಗೆ ಅರಗಿಸಿಕೊಳ್ಳಲಾಯಿತು ಎಂಬುದನ್ನೂ ಅತ್ಯಂತ ನಾಟಕೀಯವಾಗಿ ಚಿತ್ರಿಸುತ್ತದೆ.

ಅಸ್ಸಾಮಿನ ಸಾಂಸ್ಕೃತಿಕ ವ್ಯಕ್ತಿತ್ವವನ್ನು ರೂಪಿಸಿ, ಆ ಪ್ರದೇಶದ ಭಾರತೀಯ ಸಮಾಜದಲ್ಲಿ ಒಂದು ಪರಿವರ್ತನೆ ತಂದ ಒಬ್ಬ ವ್ಯಕ್ತಿ ಶ್ರೀ ಶಂಕರದೇವ (1449–1569). ಆತ ದಾರ್ಶನಿಕ, ಕವಿ, ಕಲಾವಿದ, ಬೋಧಕ, ಸಮಾಜ ಸುಧಾರಕ ಎಲ್ಲವೂ ಆಗಿದ್ದನು. ಅಸ್ಸಾಮೀ ಸಮಾಜವು ಅವ್ಯವಸ್ಥಿತವಾಗಿರುವುದನ್ನು ಅವನು ಗಮನಿಸಿದನು. ವಿಭಿನ್ನ ಬುಡಕಟ್ಟುಗಳಿಗೆ ಸೇರಿದ ಜನರು ಹಿಂದೂ ಧರ್ಮದೊಳಕ್ಕೆ ತಮ್ಮ ಮೂಲ ನಂಬಿಕೆಗಳನ್ನೂ, ಆಚರಣೆಗಳನ್ನೂ ತಂದಿದ್ದರು; ಅವರ ಸಂಪ್ರದಾಯಗಳ ವೈವಿಧ್ಯ ತುಂಬ ಗೊಂದಲವುಂಟು ಮಾಡುವುದಾಗಿತ್ತು. ಶಾಕ್ತ ಪಂಥಗಳು ಮದ್ಯ ಮಾಂಸ ಮೈಥುನಾದಿಗಳ ಚಟವನ್ನು ಹೆಚ್ಚಿಸಿದ್ದುವು. ಪ್ರಾಣಬಲಿ, ಕೊನೆಗೆ ನರಬಲಿ ಕೂಡ ನಡೆಯುತ್ತಿತ್ತು. ಬಗೆಬಗೆಯಾದ ರಹಸ್ಯಾಚರಣೆಗಳು ಪ್ರಚಲಿತವಾಗಿದ್ದವು. ಬೌದ್ಧಧರ್ಮದ ವಜ್ರಯಾನ ಮತ್ತು ಸಹಜಯಾನ ಪಂಥಗಳಿಗೆ

ಸೇರಿದ ಅನೇಕ ತತ್ವಗಳು ಮತ್ತು ಆಚರಣೆಗಳು – ಕಾಮ ಸಂಬಂಧಿ ಆಚರಣೆಗಳು, ಮಂತ್ರವಾದ, ಅದ್ವೈತ ತತ್ವ ಇವುಗಳ ವಿಚಿತ್ರ ಮಿಶ್ರಣವನ್ನು ವಿಲೀನಗೊಳಿಸಿಕೊಳ್ಳಲಾಯಿತು. ಇವು ಆಗಲೇ ಇದ್ದ ಗೊಂದಲವನ್ನೂ ಅವ್ಯವಸ್ಥೆಯನ್ನೂ ಇನ್ನಷ್ಟು ಹೆಚ್ಚಿಸಿದುವು. ಜಾತಿಗಳನ್ನು ಕಟ್ಟುನಿಟ್ಟಾದ ವಿಧಿ ನಿಷೇಧಗಳು ಮತ್ತು ಆಚರಣೆಗಳಿಂದ ಬಂಧಿಸಲಾಯಿತು. ಕೆಳಹಂತದವರು ಧರ್ಮಗ್ರಂಥಗಳ ಅಧ್ಯಯನ ಮಾಡಕೂಡದೆಂದಾಯಿತು. ಗಣ್ಯ ನೆಲೆಯ ಕಾಯಸ್ಥ ಕುಟುಂಬದಲ್ಲಿ ಜನಿಸಿದ ಶಂಕರದೇವನು ಈ ಗೊಂದಲಮಯ ಪರಿಸ್ಥಿತಿಯನ್ನು ನೇರ್ಪುಗೊಳಿಸಲು ಕ್ರಮಕೈಗೊಂಡನು. ಆತ ಪ್ರವರ್ತಿಸಿದ ಸುಧಾರಿತ ವೈಷ್ಣವ ಧರ್ಮವು ಮುಕ್ತಿ ಮಾರ್ಗವು ಭಕ್ತಿ ಮತ್ತು ಪ್ರಾರ್ಥನೆಗಳಿಂದ ಸಾಧಿತವಾಗುತ್ತದೆಯೇ ಹೊರತು ಪ್ರಾಣಿ ಬಲಿಯಿಂದಲ್ಲ, ಜಟಿಲವಾದ ಆಚರಣೆಗಳಿಂದಲ್ಲ ಎಂದು ಸಾರಿತು. ವಿಗ್ರಹಾರಾಧನೆಯನ್ನು ಅವನು ನಿರಾಕರಿಸಿದನು. ಏಕದೇವವಾದವನ್ನು ಬೋಧಿಸಿದನು. ಅವನ ಮುಖ್ಯ ಉದ್ದೇಶ ಸಮಾಜ ಸುಧಾರಣೆಯಾಗಿತ್ತು, ಬೇಕಾದಷ್ಟು ವಿರೋಧವನ್ನು ಎದುರಿಸಬೇಕಾಗಿ ಬಂದರೂ ಅವನು ಹಿಂಜರಿಯದೆ ಸಹಿಷ್ಣುತೆಯನ್ನು ಬೋಧಿಸಿದನು. ಇತರರ ಧಾರ್ಮಿಕ ಭಾವನೆಗಳಿಗೆ ನೋವುಂಟು ಮಾಡಕೂಡದೆಂದು ತನ್ನ ಅನುಯಾಯಿಗಳಿಗೆ ತಿಳಿಯಹೇಳಿದನು. ಜಾತಿವ್ಯವಸ್ಥೆಯ ಕೆಡುಕುಗಳೆಲ್ಲವನ್ನೂ ತೊಡೆದು ಹಾಕಲು ಸಾಧ್ಯವಾಗಲಿಲ್ಲ ನಿಜ, ಆದರೂ ಅವನು ಅಸ್ಸಾಮೀ ಸಮಾಜವನ್ನು ಒಗ್ಗೂಡಿಸಿ ಅದರಲ್ಲೊಂದು ಸಾಮರಸ್ಯವನ್ನು ತಂದನು.

ಈಶಾನ್ಯ ಭಾರತದಲ್ಲಿನ ಹಿಂದೂ ಧರ್ಮವು ಇನ್ನೂ ಕೆಲವು ಒಗಟುಗಳನ್ನು ನಮ್ಮೆದುರು ಒಡ್ಡುತ್ತದೆ. ಮಣಿಪುರ ಒಂದು ಚಿಕ್ಕದಾದ ಆದರೆ ಸುಸಮೃದ್ಧವಾದ ಕಣಿವೆ. ಅದರ ಸುತ್ತಿನ ಬೆಟ್ಟಗಳಲ್ಲಿ ಆದಿವಾಸಿ ಜನರಿದ್ದಾರೆ. ಮೇತಿ ಅಥವಾ ಹಿಂದೂ ಮಣಿಪುರಿಗಳ ನೆಲೆ ಇದು. ಇವರ ಮೂಲವನ್ನು ಕುರಿತು ಹಲವಾರು ಸಿದ್ಧಾಂತಗಳಿವೆ. ಒಂದರ ಪ್ರಕಾರ, ಇವರು ಹದಿಮೂರು ಮತ್ತು ಹದಿನಾಲ್ಕನೆಯ ಶತಮಾನಗಳಲ್ಲಿ ವಾಯುವ್ಯ ಚೈನಾದಿಂದ ವಲಸೆ ಬಂದ ತಾರ್ತರ್ ಜನರ ವಂಶಿಕರು. ಇನ್ನೊಂದು ಸಿದ್ಧಾಂತದ ಪ್ರಕಾರ, ಒಬ್ಬ ನಾಗಾ ಮುಖಂಡ ಪಾಮ್ಹೀಬಾ ಎನ್ನುವವನು 1714ರಲ್ಲಿ ಮಣಿಪುರದ ಅರಸನಾದನು. ಅವನು ಹಿಂದೂ ಧರ್ಮವನ್ನು ಸ್ವೀಕರಿಸಿದನು ಮತ್ತು ವಿಚಿತ್ರವೋ ಎನ್ನುವಂತೆ ಪರ್ಷಿಯನ್ ಧ್ವನಿ ಬರುವ ಗರೀಬ್‌ನವಾಜ್ – ಬಡವರ ರಕ್ಷಕ – ಎಂಬ ಹೆಸರನ್ನು ಧರಿಸಿದನು. ಇತರರೂ ಅವನನ್ನು ಅನುಸರಿಸಿದರು. ಅರಸರ ಸೇವೆಯಲ್ಲಿದ್ದ ಬ್ರಾಹ್ಮಣರು ಅವರಿಗೆ ಕ್ಷತ್ರಿಯ ಸ್ಥಾನಮಾನವನ್ನು ಕೊಟ್ಟರು. ಆಮೇಲೆ ಬೇರೆ ಕಡೆಯ ಕ್ಷತ್ರಿಯರು ಬಹುತೇಕ ಇದನ್ನು ಒಪ್ಪಿಕೊಂಡರು. ಜಾತಿ ನಿಯಮಗಳನ್ನು ಪಾಲಿಸುತ್ತಾ ಧಾರ್ಮಿಕ ಪರಿಶುದ್ಧಿ ಹೇಳುವ ಕಟ್ಟಳೆಗಳನ್ನು ಇವರು ಆಚರಿಸಿದರು. ಮಣಿಪುರದ ಹಿಂದೂ ಧರ್ಮದಲ್ಲಿ ವಿಶೇಷವಾದೊಂದು ಬನಿಯಿದೆ. ಭಕ್ತಿ ಸಂಗೀತ ಮತ್ತು ನೃತ್ಯದ ಲಲಿತ ಶೈಲಿಯೊಂದು ರೂಪುಗೊಂಡಿದೆ. ತ್ರಿಪುರದಲ್ಲಿ ಹಿಂದೂ ಧರ್ಮ ಹಾಗೂ ಬುಡಕಟ್ಟು ಧರ್ಮಗಳ ಸಾಹಚರ್ಯ ಕಂಡುಬರುತ್ತದೆ. ಹಿಂದೂಗಳು ಹದಿನಾಲ್ಕು ದೇವ ದೇವಿಯರನ್ನು

ಪೂಜಿಸುತ್ತಾರೆ: ಹರ ಅಥವಾ ಶಿವ, ಉಮೆ (ಶಿವನ ಪತ್ನಿ), ಹರಿ ಅಥವಾ ವಿಷ್ಣು, ಲಕ್ಷ್ಮಿ, ಸರಸ್ವತಿ, ಬ್ರಹ್ಮ, ಪೃಥ್ವಿ (ಭೂದೇವಿ), ಸಮುದ್ರ, ಗಂಗಾ, ಅಗ್ನಿ, ಕಾಮದೇವ ಮತ್ತು ಹಿಮಾಲಯ. ಈ ಪಟ್ಟಿಗೆ ಸಂಬಂಧಿಸಿದಂತೆ ಕೆಲವು ಅಸಾಧಾರಣ ಅಂಶಗಳಿವೆ. ಬ್ರಹ್ಮನ ಪೂಜೆ ದೇಶದ ಬೇರೆ ಕಡೆ ಚಾಲ್ತಿಯಲ್ಲಿಲ್ಲ. (ಎಲ್ಲೋ ಅಪರೂಪಕ್ಕೆ ಅಲ್ಲಲ್ಲಿ ಕಂಡುಬರುವುದರ ಹೊರತು). ಪಟ್ಟಿಯಲ್ಲಿ ಬ್ರಹ್ಮನ ನಂತರದ ದೇವದೇವಿಯರನ್ನು ಉತ್ತರ ಹಾಗೂ ದಕ್ಷಿಣ ಭಾರತದ ಬೇರೆ ಭಾಗಗಳಲ್ಲಿ ಪೂಜಿಸುವ ದೇವದೇವತೆಗಳ ಪಟ್ಟಿಗೆ ಸೇರಿಸುವುದಿಲ್ಲ. ಈ ಹದಿನಾಲ್ಕು ದೇವತೆಗಳ ಬೃಹತ್ ವಿಗ್ರಹಗಳು ಬರ್ಮಾದ ರಾಜನ ವಶದಲ್ಲಿದ್ದುವು ಎಂದು ಒಂದು ಪುರಾಣವು ಹೇಳುತ್ತದೆ. ತ್ರಿಪುರದ ಅರಸನು ಸೈನ್ಯವನ್ನು ಕಳಿಸಿದನು. ಯುದ್ಧದಲ್ಲಿ ಬರ್ಮಾದ ರಾಜನು ಸೋತನು. ಆ ಹದಿನಾಲ್ಕು ವಿಗ್ರಹಗಳ ತಲೆಗಳನ್ನು ಮಾತ್ರ ತರಬೇಕೆಂದು ತ್ರಿಪುರದ ರಾಜನು ನಿರ್ಣಯಿಸಿದನು. ಏಕೆಂದರೆ ವಿಗ್ರಹಗಳು ಇಡಿಯಾಗಿ ತರಲು ಸಾಧ್ಯವಾಗದಷ್ಟು ಭಾರವಾಗಿದ್ದವು. ಅವು ಕಲ್ಲಿನ ವಿಗ್ರಹಗಳು. ಹದಿಮೂರಕ್ಕೆ ಚಿನ್ನದ ಕವಚ ಹಾಕಿದೆ, ಒಂದಕ್ಕೆ ಬೆಳ್ಳಿಯ ಕವಚವಿದೆ. ಅರ್ಚಕರೆಲ್ಲರೂ ಬುಡಕಟ್ಟುಗಳಿಗೆ ಸೇರಿದ ತ್ರಿಪುರಿಗಳೇ ಹೊರತು ಬ್ರಾಹ್ಮಣರಲ್ಲ. ಮುಖ್ಯ ಅರ್ಚಕನು ಚಂತಾಯ್ ಎಂದು ಪ್ರಸಿದ್ಧನಾಗಿರುತ್ತಾನೆ. ಅವನ ನಾಲ್ಕುಮಂದಿ ಮುಖ್ಯ ಸಹಾಯಕರ ಹೆಸರು ನಾರಾಯಣ್ ಎಂದಿರುತ್ತದೆ. ಅವರಿಗೆ ಎಂಬತ್ತು ಜನ ಕಿರಿಯ ಅರ್ಚಕರು ಸಹಾಯಕ್ಕಿರುತ್ತಾರೆ; ಇವರನ್ನು ಗಲೀಮ್ ಎಂದು ಕರೆಯುತ್ತಾರೆ. ವಿಗ್ರಹ ಶಿರಗಳನ್ನು ಒಂದು ಭಾರೀ ಕಬ್ಬಿಣದ ಪೆಟ್ಟಿಗೆಯಲ್ಲಿ ಇರಿಸಲಾಗಿದೆ. ಪ್ರತಿದಿನವೂ ಅವುಗಳಲ್ಲಿ ಅನುಕ್ರಮವಾಗಿ ಮೂರು ಶಿರಗಳನ್ನು ಪೂಜಿಸಲಾಗುತ್ತದೆ. ಜೂನ್, ಜುಲೈ ತಿಂಗಳಲ್ಲಿ ನಡೆಯುವ ಖರ್ಚಿ ಉತ್ಸವ ಸಂದರ್ಭದಲ್ಲಿ ಮಾತ್ರ ಎಲ್ಲ ಹದಿನಾಲ್ಕು ಶಿರಗಳನ್ನು ನಾಲ್ಕು ಕಡೆಯೂ ತೆರೆದಿರುವ ಒಂದು ಗುಡಿಸಿಲಿನಲ್ಲಿಟ್ಟು ಪೂಜಿಸಲಾಗುತ್ತದೆ. ಈ ದಿನಗಳಲ್ಲಿ ಭಕ್ತರ ಪರವಾಗಿ ಗಲೀಮರು ಬಹುಸಂಖ್ಯೆಯ ಕುರಿ ಮೇಕೆಗಳನ್ನು ಬಲಿಕೊಡುತ್ತಾರೆ. ಬೇರೆಯೇ ಇನ್ನೊಂದು ಗುಡಿಸಿಲಿನಲ್ಲಿ ಬುರಾಮಾ ಎಂಬ ಇನ್ನೊಂದು ದೇವಿಯ ವಿಗ್ರಹವನ್ನು ಇರಿಸಲಾಗುತ್ತದೆ. ತಮಗೆ ಮಕ್ಕಳಾಗಬೇಕೆಂದು ಬಯಸುವ ಮಹಿಳೆಯರು ಖರ್ಚಿ ಉತ್ಸವದ ಸಮಯದಲ್ಲಿ, ಈ ದೇವಿಗೆ ಕುಂಕುಮವನ್ನು ಅರ್ಪಿಸಿ ಮೇಣದ ಬತ್ತಿಗಳನ್ನು ಉರಿಸುತ್ತಾರೆ. ಈ ಬುಡಕಟ್ಟು ದೇವತೆಯನ್ನು ಎಲ್ಲರೂ ಪೂಜಿಸುತ್ತಾರೆ, ಆಕೆಗೂ ಪ್ರಾಣಿಬಲಿಯುಂಟೇ ಉಂಟು. ಹೀಗೆ ಬುಡಕಟ್ಟು ಸಂಪ್ರದಾಯಗಳು ಹಿಂದೂ ಪರಂಪರೆಯೊಂದಿಗೆ ತಳಕು ಹಾಕಿಕೊಂಡಿವೆ, ಎರಡೂ ಸಮರಸವಾಗಿ ಒಟ್ಟೊಟ್ಟಿಗೆ ವರ್ತಿಸುತ್ತಿವೆ ಎಂಬುದಕ್ಕೆ ತ್ರಿಪುರವು ನಿದರ್ಶನವನ್ನು ಒದಗಿಸುತ್ತದೆ. ಈ ಪರಿಸ್ಥಿತಿಯನ್ನು ಇನ್ನೂ ಆಳವಾಗಿ ತಿಳಿದುಕೊಳ್ಳುವ ಅಗತ್ಯವಿದೆ.

ಆರ್ಯೀಕರಣವಾಗುತ್ತಿದ್ದ ಸಮಯದಲ್ಲಿ ದಕ್ಷಿಣ ಭಾರತದ ಹಿಂದೂ ಜನಾಂಗದ ವಿನ್ಯಾಸವೇನಿತ್ತೋ ಅದರ ಮೇಲೆ ಆಗ ಇದ್ದ ಪ್ರಾದೇಶಿಕ ಸಂಪ್ರದಾಯಗಳ ಬಲವಾದ ಪ್ರಭಾವ ಬಿದ್ದಿತು. ತಮಿಳು ಜನಾಂಗವು ಕ್ರಿ.ಪೂ. 200ರಲ್ಲೇ ಚೆನ್ನಾಗಿ ಸ್ಥಾಪಿತವಾಗಿತ್ತು

ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಪ್ರಾಚೀನ ವ್ಯಾಕರಣ ತೋಲ್‌ಕಾಪ್ಪಿಯಂನಲ್ಲಿ (ಕ್ರಿ.ಶ. 200) ಸಮಾಜ ವ್ಯವಸ್ಥೆಯ ಕಿರುಚಿತ್ರಗಳು ಅಲ್ಲಲ್ಲಿ ಕಾಣಸಿಕೊಳ್ಳುತ್ತವೆ. ಕೃತಿಕಾರನು ಅಲ್ಲಿ ಬೆಟ್ಟಪ್ರದೇಶ, ಅರಣ್ಯ, ಬೇಸಾಯವಾಗುವ ಬಯಲು, ಕರಾವಳಿ ಹಾಗೂ ಮರುಭೂಮಿ ಪ್ರದೇಶಗಳ ಜನಜೀವನವನ್ನು ವರ್ಣಿಸುತ್ತಾನೆ. ಸಂಗಮ್ ಸಾಹಿತ್ಯದ (ಕ್ರಿ.ಪೂ. 200 – ಕ್ರಿ.ಶ. 200) ಸಮೃದ್ಧ ಸಂಚಯದಲ್ಲಿ ಬಿಡಿಬಿಡಿಯಾಗಿದ್ದ ಸಾಮಾಜಿಕ ತುಣುಕುಗಳು ದೊಡ್ಡದಾಗಿ ಸಮರ್ಥರಾದ ರಾಜರ ಕೈಕೆಳಗೆ ಸುವ್ಯವಸ್ಥಿತ ರಾಜ್ಯಗಳಾಗಿ ಉದಯಿಸಿದುದರ ಚಿತ್ರ ದೊರಕುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರ ಮತ್ತು ಮನುವಿನ ಧರ್ಮಶಾಸ್ತ್ರಗಳೊಂದಿಗೆ ಹೋಲಿಕೆಗೆ ನಿಲ್ಲುವ ಶ್ರೇಷ್ಠ ತಮಿಳು ಕೃತಿ ತಿರುಕ್ಕುರಳ್ (ಕ್ರಿ.ಶ. 300) ಬರೆದವನು ತಿರುವಳ್ಳುವರ್, ಕೆಳಜಾತಿಯಾದ ನೇಕಾರ ಪಂಗಡಕ್ಕೆ ಸೇರಿದವನು. ಸಾಮಾಜಿಕವಾಗಿ ಅವನ ಜನನದ ಹೊರತು ಬೇರೆ ಏನೂ ತಿಳಿದಿಲ್ಲ. ಅವನು ಮೈಲಾಪುರದಲ್ಲಿ (ಈಗ ಮದರಾಸಿನ ಒಂದು ಮುಖ್ಯ ಬಡಾವಣೆ) ವಾಸವಾಗಿದ್ದನು, ಕೆಲಸ ಮಾಡುತ್ತಿದ್ದನು. ಅವನಿಗೆ ಹಿಂದೂ ಧರ್ಮ ಮತ್ತು ಜೈನ ಧರ್ಮಗಳ ಪ್ರಾಚೀನ ಶ್ರೇಷ್ಠ ಕೃತಿಗಳ ಪರಿಚಯ ಚೆನ್ನಾಗಿತ್ತು. ತಿರುಕ್ಕುರಳಿನಲ್ಲಿ 133 ಅಧ್ಯಾಯಗಳಿವೆ, ಪ್ರತಿಯೊಂದರಲ್ಲೂ ಹತ್ತು ದ್ವಿಪದಿಗಳಿವೆ. ಹೀಗೆ ಪುಸ್ತಕದಲ್ಲಿ ಒಟ್ಟಿಗೆ 2660 ಪಂಕ್ತಿಗಳು, 1330 ದ್ವಿಪದಿಗಳು ಅಥವಾ *ಕುರಳ್*ಗಳು. ಸಂಕ್ಷೇಪ ಮತ್ತು ಅರ್ಥಗರ್ಭಿತತೆಗಳಿಗೆ ಮಾದರಿಯಾಗುವಂತಹ ರಚನೆಗಳು. ಈ ಕೃತಿಯಲ್ಲಿ ಒತ್ತಿ ಹೇಳುವುದು ಸದ್ಗುಣಗಳ ಬಗೆಗೆ, ಸಂಪತ್ತು ಮತ್ತು ಭೋಗಗಳ ಬಗೆಗೆ. ಮೋಕ್ಷದ ವಿಷಯ ಅಲ್ಲಿ ಬರುವುದೇ ಇಲ್ಲ. ಗೃಹಸ್ಥನ, ಸನ್ಯಾಸಿಯ ಮತ್ತು ಅಧಿಕಾರವನ್ನೂ ಪ್ರಭಾವವನ್ನೂ ಹೊಂದಿರುವ ಜನರ ಜೀವನವನ್ನು ಅದು ವರ್ಣಿಸುತ್ತದೆ. ವೈಯಕ್ತಿಕ ಯಶಸ್ಸು ಮತ್ತು ಸಾಮಾಜಿಕ ಸಾಮರಸ್ಯಗಳಿಗಾಗಿ ನಿಯಮಾವಳಿಯನ್ನು ರೂಪಿಸುತ್ತಾ ಕೃತಿಯು ವ್ಯಕ್ತಿಯ ಸಮಸ್ತ ಚಲನವಲನಗಳ ಮೇಲೂ ಸದಾಕಾಲವೂ ಕಣ್ಣಿಟ್ಟಿರುವ *ಅರಂ* ಅನ್ನೇ ಮನಸ್ಸಿನಲ್ಲಿ ಇಟ್ಟುಕೊಳ್ಳುತ್ತದೆ. ಅದೇ *ಅರಂ* ಸಮಾಜ ಮತ್ತು ರಾಜ್ಯದ ಮೇಲೂ ಕಾವಲು ಕಾಯುತ್ತದೆ. ಅದರ ತತ್ವಗಳನ್ನು ಕಾಯುತ್ತದೆ. ಅದರ ತತ್ವಗಳನ್ನು ಯಾರು ಪರಿಪಾಲಿಸುತ್ತಾರೋ ಅವರಿಗೆ ಲೌಕಿಕ ಹಾಗೂ ಆಧ್ಯಾತ್ಮಿಕ ಸಂಪತ್ತುಗಳೆರಡನ್ನೂ ನೀಡುತ್ತದೆ. ಅದು ಪ್ರೇಮ ಮತ್ತು ನ್ಯಾಯಪರತೆಗಳನ್ನೂ ಒಳಗೊಳ್ಳುತ್ತದೆ; ಧರ್ಮದ ದಾರಿ ತಪ್ಪಿದ ಅರಸನಾಗಲಿ, ಬಡ ರೈತನಾಗಲಿ *ಅರಂ* ದೃಷ್ಟಿಯಲ್ಲಿ ಇಬ್ಬರೂ ಒಂದೇ. ತಿರುಕ್ಕುರಳನ್ನು ತಮಿಳು ವೇದ ಎಂದು ಪ್ರಶಂಸಿಸಲಾಗಿದೆ. ಅದರಲ್ಲಿ ಧರ್ಮ, ನೀತಿ, ನ್ಯಾಯಪರತೆಗಳ ಬಗೆಗೆ ತಮ್ಮ ಅಂತರ್ವಾಣಿಯೇ ಪಿಸುಗುಟ್ಟುವುದನ್ನು ಜನರು ಗುರುತಿಸುತ್ತಾರೆ. ಪರಕ್ಕಿಂತ, ಇಹಕ್ಕೆ ಹೆಚ್ಚು ಪ್ರಾಧಾನ್ಯ ಕೊಟ್ಟ ತಿರುಕ್ಕುರಳ್ ಶಾಶ್ವತವಾದ ಮೌಲ್ಯವನ್ನು ಹೊಂದಿರುವ ಕೃತಿ ಎಂದು ಹೇಳಬಹುದು.

ಭಾರತೀಯ ಸಾಮಾಜಿಕ ವ್ಯವಸ್ಥೆ ಕಟ್ಟುನಿಟ್ಟಿನದು. ಅನುಲ್ಲಂಘನೀಯ ಸೀಮಾರೇಖೆಗಳನ್ನುಳ್ಳದ್ದು ಎಂದು ನಂಬಲಾಗಿದೆ ಮತ್ತು ಹಾಗೆಂದೇ

ವರ್ಣಿಸಲಾಗುತ್ತಿದೆ. ಕೆಲವು ದೃಷ್ಟಿಗಳಿಂದ, ಆದರ ವಿಕಾಸದ ಕೆಲವು ಹಂತಗಳಲ್ಲಿ ಈ ಮಾತು ಸತ್ಯವಾಗಿತ್ತು. ಆದರೆ ಇದಕ್ಕೆ ಹಲವು ಅಪವಾದಗಳಿದ್ದೇ ಇದ್ದುವು. ಜನಕ ಒಬ್ಬ ಕ್ಷತ್ರಿಯ ರಾಜ. ಅವನ ಸಂತತನ ಮತ್ತು ವಿದ್ವತ್ತಿಗೆ ಮಣಿದು ಅವನ ಪದತಲದಲ್ಲಿ ಬ್ರಾಹ್ಮಣರೂ ಕುಳಿತು ಕಲಿತರು. ಇನ್ನೊಬ್ಬ ಕ್ಷತ್ರಿಯ ರಾಜ ವಿಶ್ವಾಮಿತ್ರನನ್ನು ಬ್ರಹ್ಮರ್ಷಿಯೆಂದು ಪರಿಗಣಿಸಲಾಯಿತು. ಅವನು ಅನೇಕ ವೇದ, ಮಂತ್ರಗಳಿಗೆ ಮೂಲಪುರುಷನಾದನು. ಅವನು ಪುರೋಹಿತಷಾಹಿಯ ಪಾರಮ್ಯವನ್ನು ಅಲ್ಲಗಳೆದರೂ, ವರ್ಣವ್ಯವಸ್ಥೆಗೆ ಸೇರದೇ ಇದ್ದವರಿಗೂ ಯಜ್ಞಗಳನ್ನು ಮಾಡಿಸುತ್ತಿದ್ದರೂ, ಅವನ ಸ್ಥಾನಮಾನ ಅಲುಗಾಡದೆ ಉಳಿದೇ ಇದೆ. ವಾಲ್ಮೀಕಿ ಸಮಾಜದ ಕೆಳಮಟ್ಟದಲ್ಲಿದ್ದವನು. ರಾಮಾಯಣ ಮಹಾಕಾವ್ಯದ ಕರ್ತೃವಾಗಿ ಅವನು ಗೌರವಾನ್ವಿತನಾಗಿದ್ದಾನೆ. ಮತ್ತೊಂದು ಬೃಹತ್ ಮಹಾಕಾವ್ಯ ಮಹಾಭಾರತದ ಕರ್ತೃ ವ್ಯಾಸ ಒಬ್ಬ ಬೆಸ್ತ ಕನ್ಯೆಯ ಮಗ. ದಾರ್ಶನಿಕನೂ ಧರ್ಮಜ್ಞನೂ ಆದ ವಿದುರ ಒಬ್ಬ ದಾಸಿಯ ಮಗ. ಪುರಾಣಗಳು ಹೇಳುವಂತೆ ಕೃಷ್ಣನು ವಿವಾಹ ಮಾಡಿಕೊಂಡ ರುಕ್ಮಿಣಿ ಅರುಣಾಚಲ ಪ್ರದೇಶಕ್ಕೆ ಸೇರಿದವಳು. ಭೀಮನು ಮದುವೆಯಾದ ಹಿಡಿಂಬೆ ನಾಗ ಜನಾಂಗದವಳು. ಅರ್ಜುನನು ಮಣಿಪುರದ ಚಿತ್ರಾಂಗದೆಯನ್ನೂ, ನಾಗಾಲ್ಯಾಂಡಿನ ಉಲೂಪಿಯನ್ನೂ ವಿವಾಹವಾದನು. ಇತರ ಪುರಾಣಗಳ ಹಲವು ವಧುಗಳಿಗೂ ಇತರ ಪ್ರದೇಶಗಳನ್ನು ಉಲ್ಲೇಖಿಸುತ್ತಾರೆ. ಈ ಸಂದರ್ಭದಲ್ಲಿ ಗಮನಿಸಬೇಕಾದ ಮುಖ್ಯವಾದ ವಿಚಾರವೆಂದರೆ, ಧರ್ಮದ ಉನ್ನತ ಸ್ತರಗಳಲ್ಲೂ ಹೀಗೆ ಸಂಭವಿಸಬಹುದೆಂದು ಜನರು ಭಾವಿಸಿದ್ದರು, ಹಾಗೆ ನಡೆದದ್ದೂ ಉಂಟು ಎನ್ನುವುದು.

ಹಿಂದೂ ಧರ್ಮಕ್ಕೆ ಮುಖ್ಯ ಆಧಾರ ಸಾಮಗ್ರಿ ಬಂದಿರುವುದು ವೇದಗಳು, ಬ್ರಾಹ್ಮಣಗಳು, ಅರಣ್ಯಕಗಳು, ಉಪನಿಷತ್ತುಗಳಿಂದ; ಶ್ರೌತ, ಗೃಹ್ಯ, ಧರ್ಮಸೂತ್ರಗಳಿಂದ. ನಾಲ್ಕು ವೇದಗಳಲ್ಲಿ ಋಗ್ವೇದವೇ ಅತ್ಯಂತ ಪ್ರಾಚೀನವಾದುದು. ಆದರ ಕೆಲವು ಮಂತ್ರಗಳು ಕ್ರಿ.ಪೂ. 1000ಕ್ಕಿಂತಲೂ ಹಿಂದೆ ರಚಿತವಾದುವೆಂದು ನಂಬಲಾಗಿದೆ. ಇತರ ಮೂರು ವೇದಗಳು – ಸಾಮ, ಯಜುರ್ ಮತ್ತು ಅಥರ್ವ ವೇದಗಳು ಮುಂದೆ ರಚಿತವಾದುವು. ಋಗ್ವೇದದಲ್ಲೂ ಘಟನೆಗಳ ನಿರೂಪಣೆ ಬರುತ್ತದೆ. ಆದರಲ್ಲಿ 1028 ಮಂತ್ರಗಳು ಆರ್ಯ ದೇವರುಗಳಿಗೆ ಸಂಬಂಧಿಸಿದುವು. ಬ್ರಾಹ್ಮಣಗಳು ಆಚರಣೆಗಳು, ಯಜ್ಞಯಾಗಾದಿಗಳನ್ನು ಕುರಿತ ವೈದಿಕ ಗ್ರಂಥಗಳು. ಋಗ್ವೇದಕ್ಕೆ ಎರಡು ಬ್ರಾಹ್ಮಣಗಳಿವೆ. ಯಜುರ್ ಮತ್ತು ಅಥರ್ವ ವೇದಗಳಿಗೆ ಒಂದೊಂದು ಬ್ರಾಹ್ಮಣಗಳೂ, ಸಾಮವೇದಕ್ಕೆ ಎಂಟು ಬ್ರಾಹ್ಮಣಗಳೂ ಇವೆ. ಧರ್ಮ ಮತ್ತು ತತ್ವವನ್ನು ಕುರಿತ ಮಹಾ ನಿಬಂಧಗಳೇ ಅರಣ್ಯಕಗಳು. ಅವು ಧಾರ್ಮಿಕಾಚರಣೆಗಳಿಂದ ಅಮೂರ್ತವಾದ ದಾರ್ಶನಿಕ ಚಿಂತನೆಗಳಿಗೆ ಒತ್ತು ವರ್ಗಾವಣೆಗೊಂಡುದನ್ನು ತೋರಿಸುತ್ತವೆ. ವೇದಗಳಿಂದಲೇ ರೂಪುಗೊಂಡ ಉಪನಿಷತ್ತುಗಳು ಅಮೂರ್ತವಾದ ತಾತ್ವಿಕ ಚಿಂತನೆಯನ್ನು ಒಳಗೊಂಡಿದ್ದು

ಅದ್ವೈತ ದರ್ಶನಕ್ಕೆ ತಳಹದಿಯನ್ನು ಒದಗಿಸಿವೆ. ವೇದಗಳ ಉಪ ಅಂಗ ಭಾಗಗಳೇ ವೇದಾಂಗಗಳು. ಮೇಲೆ ಹೇಳಿದ ಶ್ರೌತ, ಗೃಹ್ಯ ಮತ್ತು ಧರ್ಮಸೂತ್ರಗಳು ಕಲ್ಪದ ಭಾಗಗಳು. ಅದೊಂದು ಮುಖ್ಯವಾದ ವೇದಾಂಗ. ಗೃಹ್ಯಸೂತ್ರಗಳು ವಿಶೇಷ ಮಹತ್ವವುಳ್ಳವುಗಳು. ಏಕೆಂದರೆ, ಹಿಂದೂಗಳಿಗೆ ವಿಶಿಷ್ಟ ಕರ್ತವ್ಯಗಳಾದ ಗೃಹ ಆಚರಣೆಗಳನ್ನು ಅವು ವಿವರಿಸುತ್ತವೆ. ಪುರಾಣಗಳೂ ಬಹು ಮುಖ್ಯವಾದವೇ. ಭಾರತದ ಮೊದಲನೆಯ ಅರಸ, ಬ್ರಹ್ಮನ ಪುತ್ರ ಸ್ವಯಂಭು ಮನುವಿನ ವಂಶಿಕರ ಪೌರಾಣಿಕ ಇತಿಹಾಸವನ್ನು ಪುರಾಣಗಳು ಚಿತ್ರಿಸುತ್ತವೆ. ಅವು ಹೇಳುವ ಕಥೆಯು ರಾಮಾಯಣ ಮತ್ತು ಮಹಾಭಾರತ ಕಾಲದವರೆಗೂ ಬರುತ್ತದೆ. ಮುಂದುವರಿದು ಇತಿಹಾಸ ಕಾಲದ ಕೆಲವು ರಾಜವಂಶಗಳವರೆಗೂ ನಿರೂಪಣೆ ದೊರಕುತ್ತದೆ. ಇತಿಹಾಸ ಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳ ಕಾಲವನ್ನು ಖಚಿತವಾಗಿ ನಿರ್ಧರಿಸಲು ಸಾಧ್ಯವಾಗಿಲ್ಲ. ಮಹಾಭಾರತದಲ್ಲಿ ವರ್ಣಿಸಿರುವ ಯುದ್ಧ ಕ್ರಿ.ಪೂ. 3102ರಲ್ಲಿ ನಡೆದಿರಬೇಕೆಂದು ಕೆಲವರು ವಿದ್ವಾಂಸರು ಅಭಿಪ್ರಾಯಪಡುತ್ತಾರಾದರೂ ಸುಮಾರು ಕ್ರಿ.ಪೂ. 950ರಲ್ಲಿ ನಡೆಯಿತೆಂದು ಹೇಳಬಹುದಾಗಿದೆ. ಭಾರತೀಯ ಸಾಮಾಜಿಕ ವ್ಯವಸ್ಥೆಯ ಮೇಲೆ ಗಣನೀಯ ಪ್ರಭಾವ ಬೀರಿದ ಇನ್ನೆರಡು ಕೃತಿಗಳೆಂದರೆ ಕೌಟಿಲ್ಯನ ಅರ್ಥಶಾಸ್ತ್ರ (ಕ್ರಿ.ಪೂ. 321–300) ಮತ್ತು ಮನುಸ್ಮೃತಿ (ಮನುವಿನ ನಿಯಮಗಳು ಕ್ರಿ.ಶ. 100–200). ಕೌಟಿಲ್ಯನು ಮುಖ್ಯವಾಗಿ ರಾಜ್ಯಾಡಳಿತವನ್ನು ಹೇಳುತ್ತಾನೆ. ಆದರೆ ಅವನ ಕೃತಿಯು ಸಮಾಜದ ನಿಯಂತ್ರಕ ವ್ಯವಸ್ಥೆಯನ್ನೂ ಅಲ್ಲಲ್ಲಿ ಸೂಚಿಸುತ್ತದೆ. ಮನುವಾದರೋ ಸಮಗ್ರವಾಗಿ ಸಾಮಾಜಿಕ ನೀತಿ ಸಂಹಿತೆಯನ್ನು ಒದಗಿಸುತ್ತಾನೆ. ಹಿಂದೂ ಸಮಾಜದ ರಚನೆಗೆ ಅಗತ್ಯವಾದ ಒಂದು ಚೌಕಟ್ಟನ್ನು ಅವನ ಕೃತಿ ಕೊಟ್ಟಿದೆ. ಆದರೆ ಪ್ರಾದೇಶಿಕ ಮತ್ತು ಜಾತೀಯ ವೈವಿಧ್ಯಗಳು ಉಳಿದುಕೊಂಡೇ ಬಂದುವು. ಮನು ಹಾಕಿಕೊಟ್ಟ ಧಾರ್ಮಿಕ ನಿಬಂಧನೆಗಳೆಲ್ಲವನ್ನೂ ಇಡೀ ಹಿಂದೂ ಸಮುದಾಯವು ಎಂದಾದರೂ ಅನುಸರಿಸಿತ್ತು ಎಂಬುದನ್ನು ನಂಬುವುದು ಕಷ್ಟ.

ಹಿಂದೂ ಧರ್ಮ ಎಂದು ಯಾವುದನ್ನು ಹೇಳುತ್ತೇವೋ ಅದು ಗಣನೀಯ ಪ್ರಮಾಣದ ಸಂಘರ್ಷ ಹಾಗೂ ಸಾಕಷ್ಟು ಔದಾರ್ಯ ಮತ್ತು ಮಧ್ಯಮಾರ್ಗಾನುಸರಣೆ ಈ ಇಮ್ಮುಖ ಪ್ರಕ್ರಿಯೆಯಿಂದ ಬಲಿಯಿತು. ಹಿಂದೂ ಎಂಬ ಪದವನ್ನು ಕ್ರಿ.ಶ. 8ನೆಯ ಶತಮಾನದ ಸುಮಾರಿಗೆ ಭಾರತಕ್ಕೆ ನುಗ್ಗಿದ ಅರಬ್ಬರು ಸಿಂಧೂ (ಇಂಡಸ್) ನದಿಯ ಆಚೆಗೆ ವಾಸ ಮಾಡುತ್ತಿರುವ ಜನ ಎಂದು ಹೇಳಲು ಬಳಸಿದರು. ಅದಕ್ಕೆ ಧಾರ್ಮಿಕವಾದ ಅರ್ಥ ಸಂಬಂಧವೇನೂ ಇರಲಿಲ್ಲ. ಪ್ರಾಚೀನ ಮತ್ತು ಮೊದಮೊದಲ ಮಧ್ಯಕಾಲೀನ ಸಾಹಿತ್ಯದಲ್ಲಿ ಈ ಪದ ಉಲ್ಲೇಖಿತವಾಗಿಲ್ಲ. ಈ ಧರ್ಮದಲ್ಲಿ ಅನೇಕ ವೈದಿಕ ದೇವತೆಗಳಿಗೆ ಹಿಂಬಡ್ತಿ ಕೊಡಲಾಗಿತ್ತು. ವರುಣ (ಮಳೆ) ಮತ್ತು ವಾಯು (ಗಾಳಿ) ಮೊದಲ ಪ್ರಾಮುಖ್ಯತೆಯ ಕಾಂತಿಯನ್ನು ಕಳೆದುಕೊಂಡರು. ದಿಕ್ಪಾಲರ (ದಿಕ್ಕುಗಳ ರಕ್ಷಕರ) ಕೆಳಮಟ್ಟದ ಸ್ಥಾನಗಳಿಗೆ ಅವರನ್ನು ತಳ್ಳಲಾಯಿತು. ಅಗ್ನಿ (ಬೆಂಕಿ) ಮತ್ತು ಮಿತ್ರ

(ಸೂರ್ಯ) ಕೂಡ ಬಹುಮಟ್ಟಿಗೆ ಪ್ರಾಧಾನ್ಯ ಕಳೆದುಕೊಂಡರು, ಬಹುಮಟ್ಟಿಗೆ ಸಾಂಕೇತಿಕ ಮಹತ್ವವನ್ನು ಉಳಿಸಿಕೊಂಡರು. ಇಂದ್ರನ ಗತಿ ಇನ್ನೂ ಕೀಳಾಯಿತು. ಮೊದಲಿಗೆ ಅವನನ್ನು 'ದೇವರ ದೇವ' ಎಂದೂ 'ಸಿಡಿಲಿನ ದೇವತೆ' ಎಂದೂ ಗೌರವಿಸಲಾಗಿತ್ತು. ಆದರೆ ಕಾಲ ಕಳೆದಂತೆ ಅವನನ್ನು ಕೆಳಗಿನ ಸ್ವರ್ಗಲೋಕಗಳಲ್ಲಿ ದರ್ಬಾರು ನಡೆಸುವ ಲಂಪಟನನ್ನಾಗಿ ಚಿತ್ರಿಸಲಾಯಿತು. ಅವನು ಎಷ್ಟು ದುರ್ಬಲನಾದನೆಂದರೆ ಪದೇ ಪದೇ ವಿಷ್ಣುವಿನ ಮತ್ತು ಶಿವನ ರಕ್ಷಣೆಯನ್ನು ಕೋರಬೇಕಾಯಿತು.

ಋಗ್ವೇದವು ಲಿಂಗಪೂಜಕರನ್ನು ಅಪಹಾಸ್ಯ ಮಾಡಿದ್ದುವು. ಇಂಡೋ–ಆರ್ಯನ್ ಪವಿತ್ರ ಸ್ಥಾನಗಳಿಗೆ ಅವರು ಪ್ರವೇಶಿಸುವುದನ್ನು ನಿಷೇಧಿಸಿದ್ದುವು. ಆದರೆ ಕಾಲಕ್ರಮದಲ್ಲಿ ರೂಪುಗೊಂಡ ಹೊಸ ವ್ಯವಸ್ಥೆಯಲ್ಲಿ ಶಿವನು ಹಿಂದೂಗಳ ಎರಡು ಮುಖ್ಯ ಪಂಥಗಳಲ್ಲೊಂದರ ಮುಖ್ಯ ದೇವತೆಯಾದನು. ಲಿಂಗಪೂಜೆ ಮುಂದುವರಿಯಿತು. ಫಲವಂತಿಕೆ ಪಂಥಗಳ ಆಚರಣೆ ವ್ಯಾಪಕವಾಯಿತು. ಅನೇಕ ಆರ್ಯೇತರ ನಂಬಿಕೆಗಳು, ದೇವತೆಗಳು ಮತ್ತು ಧಾರ್ಮಿಕಾಚರಣೆಗಳನ್ನು ಜನಪ್ರಿಯ ಹಿಂದೂ ಧರ್ಮದೊಳಕ್ಕೆ ಅಳವಡಿಸಿಕೊಳ್ಳಲಾಯಿತು. ಹಿಂದೂಧರ್ಮವು ಭಾರತದ ಪೂರ್ವಪ್ರಾಂತಗಳಿಗೆ ಹರಡಿದುದರಿಂದಲೂ *ಆರ್ಯಾವರ್ತ* ಹಾಗೂ *ದಕ್ಷಿಣಾಪಥಗ*ಳ ನಡುವಣ ತಡೆ ಮುರಿದುಬಿದ್ದುದರಿಂದಲೂ ಒಂದು ಒಕ್ಕೂಟರೂಪದ ಹಿಂದೂ ಧರ್ಮ ರೂಪುಗೊಂಡಿತು. ಸ್ಥೂಲವಾದ ಸಿದ್ಧಾಂತಗಳನ್ನೂ ಆಚರಣೆಗಳನ್ನೂ ಸುಮಾರಾಗಿ ಒಪ್ಪಿಕೊಳ್ಳಲಾಯಿತು. ಆದರೂ ಸ್ಥಳೀಯ, ಪ್ರಾದೇಶಿಕ ಮತ್ತು ಜಾತಿ ಪದ್ಧತಿಯ ಭಿನ್ನ ಆಚರಣೆಗಳು ಕೆಲವಾರು ಸುಧಾರಣೆಗಳೊಂದಿಗೆ ಚಾಲ್ತಿಯಲ್ಲಿರಲು ಈ ಒಪ್ಪಿಗೆ ಅಡ್ಡಿ ಬರಲಿಲ್ಲ. ಸಡಿಲವಾದ ರಚನೆಯಿದ್ದುದರಿಂದ ಹಿಂದೂ ಧರ್ಮ ಹಲವು ನಾಸ್ತಿಕ ಸಿದ್ಧಾಂತಗಳ, ಪಂಗಡಗಳ, ಪಂಥಗಳ, ಬೆಳವಣಿಗೆಯನ್ನೂ ಒಪ್ಪಿಕೊಂಡಿತು. ಪೂರ್ವ ನಿರ್ಧಾರಣವಾದವನ್ನು ಸಂಪೂರ್ಣವಾಗಿ ಒಪ್ಪಿಕೊಂಡ ಅಜೀವಿಕರ ದರ್ಶನ, ಪೂರ್ಣ ಭೌತಿಕವಾದವನ್ನು ಬೋಧಿಸಿದ ಲೋಕಾಯತ ಅಥವಾ ಚಾರ್ವಾಕ ಮತ್ತು ವಿಧವಿಧವಾದ ತಾಂತ್ರಿಕ ಪಂಥಗಳು ಇಂಥವು. ಅದು ಕೆಲಮಟ್ಟಿನ ಭಿನ್ನಮತವನ್ನೂ ಸುಧಾರಣೆಯನ್ನೂ ಕೂಡ ಒಪ್ಪಿಕೊಂಡಿತು. ಹೀಗೆ ಭಿನ್ನಮತ ಮೂಲವಾಗಿ ಹುಟ್ಟಿದ ಜೈನಧರ್ಮ ರಾಷ್ಟ್ರಾದ್ಯಂತ ಹರಡಿತು. ಹಿಂದೂ ಧರ್ಮದಲ್ಲಿ ಹಗುರ ರಚನೆಯಿದ್ದುದರಿಂದಾಗಿ ಅದರಿಂದಲೇ ಬೌದ್ಧ ಧರ್ಮವು ಹುಟ್ಟಿ ಕ್ರಮೇಣ ಜಾಗತಿಕ ಧರ್ಮಗಳಲ್ಲೊಂದಾಗಿ ಬೆಳೆಯಿತು. ಹಿಂದೂಗಳು ಕಾಲಕ್ರಮದಲ್ಲಿ ಬುದ್ಧನನ್ನು ವಿಷ್ಣುವಿನ ಅವತಾರಗಳಲ್ಲೊಂದಾಗಿ ಪರಿಗಣಿಸಿದರು. ಮುಂದೆ ಸಿಖ್ ಧರ್ಮವೂ ಒಂದು ಪ್ರತ್ಯೇಕ ವಿಶಿಷ್ಟ ಧರ್ಮವಾಗಿ ಬೆಳೆಯಿತು. ಅದು ಹಿಂದೂಧರ್ಮ ಹಾಗೂ ಇಸ್ಲಾಂ ಧರ್ಮ ಎರಡರಿಂದಲೂ ಧಾರಾಳವಾಗಿ ತತ್ವಗಳನ್ನು ಪಡೆದುಕೊಂಡು ರೂಪುಗೊಂಡಿತು. ಭಕ್ತಿ ಪಂಥಗಳು ಧರ್ಮದಲ್ಲಾದ ಬದಲಾವಣೆಯ ಇನ್ನೊಂದು ಆಯಾಮವನ್ನು ಪ್ರತಿನಿಧಿಸುತ್ತವೆ. ಅವು ಮೊದಲಿಗೆ ವ್ಯಕ್ತಗೊಂಡ

ಭಿನ್ನಮತವೆನಿಸಿದ್ದುವು. ಆದರೆ ಅವುಗಳಲ್ಲಿ ಹಲವು ಮುಂದೆ ತಮ್ಮದೇ ಕಟ್ಟುನಿಟ್ಟಾದ ನಿಯಮ ನಿಬಂಧನೆಗಳನ್ನು ರೂಢಿಸಿಕೊಂಡು ಹೆಚ್ಚು ಕಡಿಮೆ ಬೇರೆ ಬೇರೆ ಜಾತಿಗಳ ಹಾಗೆ ಪ್ರವರ್ತಿಸತೊಡಗಿದುವು.

ಭಾರತೀಯ ಸಮಾಜದ ರಚನೆಯನ್ನು ಅರ್ಥಮಾಡಿಕೊಳ್ಳಬೇಕಾದರೆ, ಇಲ್ಲಿ ಕ್ರೈಸ್ತಧರ್ಮ ಮತ್ತು ಇಸ್ಲಾಂ ಧರ್ಮಗಳು ಬಹು ದೀರ್ಘಕಾಲದಿಂದ ಇರುವುದನ್ನೂ ಗಮನಕ್ಕೆ ತಂದುಕೊಳ್ಳಬೇಕು. ಇವೆರಡರಲ್ಲಿ ಈ ದೇಶಕ್ಕೆ ಮೊದಲು ಬಂದದ್ದು ಕ್ರೈಸ್ತಧರ್ಮ. ಆದರೂ ಆನಂತರ ಬಂದ ಇಸ್ಲಾಂ ಧರ್ಮವೇ ಸಮಾಜದ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿತು. ಎರಡೂ ಮೊದಲು ಶಾಂತಿಯುತ ಮಾರ್ಗಗಳಿಂದಲೇ ದೇಶದೊಳಕ್ಕೆ ಬಂದುವು. ಆಮೇಲೆ ಇಲ್ಲಿದ್ದ ಆಳುವ ಅರಸರ ಪೋಷಣೆ ಅವಕ್ಕೆ ದೊರಕಿತು. ಇಲ್ಲಿ ಇದ್ದ ಪರಿಸ್ಥಿತಿಯಿಂದ ಎರಡೂ ಪ್ರಭಾವಗೊಂಡುವು. ಎರಡೂ ಒಟ್ಟಿನಲ್ಲಿ ಸಮಾಜದ ಮೇಲೆ ಪ್ರಭಾವ ಬೀರಿದುವು. ಭಾರತೀಯ ಸಂದರ್ಭದಲ್ಲಿ ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳೆರಡೂ ಕೆಲವು ವಿಶೇಷ ಲಕ್ಷಣಗಳನ್ನು ಪಡೆದುಕೊಂಡುವು. ಅವುಗಳನ್ನು ಭಾರತೀಯ ಸಮಾಜದ ವಿದೇಶೀಯ ಅಂಶಗಳೆಂದು ಹೇಳಲು ಸಾಧ್ಯವಾಗುವುದಿಲ್ಲ. ಅವು ಅದರ ಅಂತರ್ಗತ ಅಂಗ ಭಾಗಗಳೇ ಆಗಿಬಿಟ್ಟಿವೆ.

ಭಾರತಕ್ಕೆ ಕ್ರೈಸ್ತ ಧರ್ಮವನ್ನು ತಂದವರು ಸಂತ ಥಾಮಸ್ (ಕ್ರಿ.ಶ. 50) ಮತ್ತು ಸಂತ ಬಾರ್ಥೋಲೋಮ್ಯೂ (ಅದೇ ಕಾಲ) ಎಂದು ನಂಬಲಾಗಿದೆ. ಪರಂಪರೆಯಿಂದ ದೃಢವಾಗಿ ಸ್ಥಾಪಿತವಾಗಿರುವ ವಿಚಾರವೆಂದರೆ, ಜೂದಾಸ್ ಥಾಮಸ್‌ನನ್ನು ಹಬ್ಬನ್ ಎಂಬ ಭಾರತೀಯ ವರ್ತಕನಿಗೆ ಇಪ್ಪತ್ತು ಬೆಳ್ಳಿ ನಾಣ್ಯಗಳಿಗೆ ಮಾರಲಾಯಿತು. ವ್ಯಾಪಾರಿಯು ಕುಶಲನಾದ ಒಬ್ಬ ಬಡಗಿ ಬೇಕೆಂದು ಹುಡುಕುತ್ತಿದ್ದನು. ಭಾರತಕ್ಕೆ ಹೋಗಿ ಅಲ್ಲಿಯ ಜನರನ್ನು ಮತಾಂತರಗೊಳಿಸಲು ಜೂದಾಸನಿಗೆ ಆಸಕ್ತಿಯಿರಲಿಲ್ಲ. *ಆ್ಯಕ್ಟ್ಸ್ ಆಫ್ ಸೇಂಟ್ ಥಾಮಸ್* ಪ್ರಕಾರ, ಜೂದಾಸ್ ಥಾಮಸ್‌ನು ಅಳುಕು ತೋರಿಸಿದ್ದಕ್ಕೆ ಕಾರಣ ಈ ಕೆಲಸಕ್ಕೆ ಅಗತ್ಯವಾದಷ್ಟು ಶಕ್ತಿ ತನಗಿಲ್ಲವೆಂದು ಅವನು ಭಾವಿಸಿದ್ದು. ಅವನೊಬ್ಬ ಹೀಬ್ರೂ. ಧರ್ಮ ಹಾಗೂ ತತ್ವಕ್ಷೇತ್ರಗಳಲ್ಲಿ ತುಂಬ ಹೆಸರುವಾಸಿಯಾಗಿದ್ದ ಭಾರತೀಯರಿಗೆ ಬೋಧನೆ ಮಾಡುವುದಕ್ಕೆ ಅವನಿಗೆ ತಕ್ಕ ಸಿದ್ಧತೆಯಿರಲಿಲ್ಲ. ಒಂದು ದರ್ಶನದಲ್ಲಿ ದೇವರು ಕಾಣಿಸಿಕೊಂಡು ತನ್ನ ಅನುಗ್ರಹದ ಭರವಸೆಯಿತ್ತನು. ಆದರೂ ಅಳುಕುತ್ತಲೇ ಜೂದಾಸ್ ಥಾಮಸನು ಸುದೀರ್ಘ ಪ್ರಯಾಣವನ್ನು ಕೈಗೊಂಡನು. ಅವನು ಪಂಜಾಬಿನಲ್ಲಿ ಗೊಂಡೋಫೋರ್ನೆಸನ ಆಸ್ಥಾನಕ್ಕೆ ಭೇಟಿ ನೀಡಿದನು. ಆ ಅರಸನನ್ನು ಮತಾಂತರಿಸಲು ಪ್ರಯತ್ನಿಸಿದನು. ಗೊಂಡೋಫೋರ್ನೆಸನು ತನಗೆ ದೇವವ್ರತ (ಭಗವಂತನಲ್ಲಿ ಶ್ರದ್ಧೆಯುಳ್ಳವನು) ಎಂದು ಬಿರುದು ಕೊಟ್ಟುಕೊಂಡನು. ದೇವಪುತ್ರ (ಭಗವಂತನ ಮಗ) ಎಂದೋ ದೇವಾನಾಂಪ್ರಿಯ (ಭಗವಂತನಿಗೆ ಪ್ರಿಯನಾದವನು) ಎಂದೋ ಹೆಸರಿಟ್ಟುಕೊಳ್ಳದೆ ದೇವವ್ರತ ಎಂದು ಇಟ್ಟುಕೊಂಡದ್ದರಿಂದ ಸೇಂಟ್ ಥಾಮಸ್‌ನು ತನ್ನ ಉದ್ದೇಶದಲ್ಲಿ ಸಫಲತೆ ಹೊಂದಿದನು ಎಂದು ಹೇಳಲಾಗುತ್ತದೆ. ಆದರೆ ಸಾಕ್ಷ್ಯಾಧಾರಗಳು ಈ

ಮಾತನ್ನು ಸಮರ್ಥಿಸುವುದಿಲ್ಲ. ನಿಸ್ಸಂದೇಹವಾಗಿ ಹೇಳಬಹುದಾದ ವಿಚಾರವೆಂದರೆ, ಥಾಮಸನ ಪ್ರಯತ್ನಗಳಿಂದಾಗಿ ಕೇರಳದಲ್ಲಿ ಕ್ರೈಸ್ತಮತವು ಹರಡಿದ್ದು. ಪೋರ್ಚುಗೀಸರು ಭಾರತಕ್ಕೆ ಬಂದಾಗ, ವಿಭಜಿತ ಕೇರಳದ ಹದಿನೇಳು ರಾಜ್ಯಗಳಲ್ಲಿ ಕ್ರೈಸ್ತಮತವು ಹರಡಿದ್ದುದನ್ನು ಕಂಡರು. ಕೇರಳದಲ್ಲಿ ಹಲವಾರು ಚರ್ಚುಗಳಿದ್ದುವು, ಐವತ್ತು ಕೇಂದ್ರಗಳಿದ್ದುವು, ಒಂದು ಲಕ್ಷ ಕ್ರಿಶ್ಚಿಯನರಿದ್ದರು. ಈ ಅಂಶವನ್ನು ದಾಖಲೆಗಳು ಬೆಂಬಲಿಸುತ್ತವೆ. ಅಲೆಗ್ಸಾಂಡ್ರೈನ್ ಶಾಲೆಗಳ ಮೊದಲನೆಯ ಪ್ರಿನ್ಸಿಪಾಲ್ ಆದ ಪಾಂಟೇನಸ್ ಬಂದಾಗ ಮಲಬಾರ್ ಪ್ರಾಂತದಲ್ಲಿ ಕ್ರೈಸ್ತ ಸಮುದಾಯಗಳು ಬೆಳೆಯುತ್ತಿದ್ದುದನ್ನು ನೋಡಿದನು. ಮುಂಬಯಿಯ ಕಲ್ಯಾಣ್ ಪ್ರದೇಶದಲ್ಲಿ ಕ್ರೈಸ್ತ ಧರ್ಮದ ಮುಖ್ಯ ಕೇಂದ್ರವೊಂದು ಸ್ಥಾಪಿತವಾಯಿತು. ಸೆಂಟ್ ಬಾರ್ಥೊಲೋಮ್ಯು ಸಕ್ರಿಯವಾಗಿದ್ದನು. ಅವರ ಜೊತೆಗೆ ವಿಶೇಷ ಆಹ್ವಾನಿತನಾಗಿದ್ದ ಸ್ಟಾಯಿಕ್ ತತ್ವಶಾಸ್ತ್ರಜ್ಞ ಪಾಂಟೇನಸ್ ಕಲ್ಯಾಣದಲ್ಲಿ ಬ್ರಾಹ್ಮಣರಿಗೆ ಮತ್ತು ಇತರ ದಾರ್ಶನಿಕರಿಗೆ ಬೋಧಿಸುತ್ತಿದ್ದನು. ಅವನು ಎಷ್ಟರಮಟ್ಟಿಗೆ ಪ್ರಭಾವ ಬೀರಿದನೆಂಬುದು ಮಾತ್ರ ತಿಳಿದಿಲ್ಲ.

ಸಮಾಜದಲ್ಲಿ ಸೇಂಟ್ ಥಾಮಸ್ ಕ್ರಿಶ್ಚಿಯನರಿಗೆ ಯಾವ ಸ್ಥಾನವಿತ್ತು? ಹದಿನಾರನೆಯ ಶತಮಾನದಲ್ಲಿ ಪೋರ್ಚುಗೀಸರು ಬಂದಾಗ ಅವರಿಗೆ ನಜರಾಣಿ ಗಳೆಂದು ಹೆಸರಿತ್ತು. ಜಾತಿಗಳ ಶ್ರೇಣಿಯಲ್ಲಿ ಅವರದು ಹೆಚ್ಚು ಕಡಿಮೆ ಬ್ರಾಹ್ಮಣರಿಗೆ ಸಂವಾದಿಯಾದ ಸ್ಥಾನವಾಗಿತ್ತು ಮತ್ತು ನಾಯರ್‌ಗಳಿಗಿಂತಲೂ ಮೇಲಿನವರು ಎಂದು ಅವರನ್ನು ಪರಿಗಣಿಸಿದ್ದರು. ತಮ್ಮ ಗೌರವಾನ್ವಿತ ಸ್ಥಾನ, ಮರ್ಯಾದೆಯನ್ನು ಕಾಪಾಡಿಕೊಳ್ಳುವ ಸಲುವಾಗಿ ಅವರು ನಾಯರರೂ ಸೇರಿದಂತೆ ಕೆಳಜಾತಿಗಳವರನ್ನು ಮುಟ್ಟಿಸಿಕೊಳ್ಳುತ್ತಿರಲಿಲ್ಲ. ಇತರರ ಸಮೀಪಕ್ಕೆ ಹೋಗುವಾಗ ದೂರದಿಂದಲೇ ಜೋರಾಗಿ ಕಿರುಚಿಕೊಳ್ಳುತ್ತಿದ್ದರು. ಇವರ ಆಗಮನವನ್ನು ಅರಿತು ಅವರು ದಾರಿಬಿಟ್ಟು ಹೋಗುತ್ತಿದ್ದರು. ತಮ್ಮ ದಾರಿಗೆ ಅಡ್ಡಬಂದ ಕೆಳಜಾತಿಯವರನ್ನು ಕೊಂದುಹಾಕಲು ಕೂಡ ಅವರಿಗೆ ಅಧಿಕಾರವಿದ್ದಿತು. ಈ ಉನ್ನತ ತರ ಸ್ಥಾನ ಗೌರವದಿಂದಾಗಿ ಅವರು ರಾಜರನ್ನು ಮತಾಂತರಗೊಳಿಸುತ್ತಿದ್ದರು. ಮೇಲುವರ್ಗದ ಜಾತಿಗಳಿಗೆ ಹೆಚ್ಚು ಗಮನ ಕೊಡುತ್ತಿದ್ದರು. ಇದರಿಂದಾಗಿ ಅವರು ತಮ್ಮ ಧರ್ಮವು ಹೇಳುವ ಅತಿಮುಖ್ಯವಾದ ಒಂದು ಸಂದೇಶವನ್ನೇ ತೆಳುವುಗೊಳಿಸಿದಂತಾಗಿತ್ತು. ಹೇಗೇ ಇರಲಿ, ಪ್ರಾರಂಭಕಾಲದ ಕ್ರಿಶ್ಚಿಯನರ ಬಗೆಗೆ ಹಿಂದೂಗಳು ಅಪಾರ ಗೌರವ ಹೊಂದಿದ್ದರು. ಪೋರ್ಚುಗೀಸರು ಬಂದು ಭಾರತದಲ್ಲಿ ಸ್ಥಾಪಿತರಾದಾಗ ಪರಿಸ್ಥಿತಿ ಬದಲಾಗತೊಡಗಿತು. ಪೋರ್ಚುಗೀಸರು ಬಂದು ಭಾರತದಲ್ಲಿ ಸ್ಥಾಪಿತರಾದಾಗ ಪರಿಸ್ಥಿತಿ ಬದಲಾಗತೊಡಗಿತು. ಸಂತ ಫ್ರಾನ್ಸಿಸ್ ಜೇವಿಯರ್ 1542ರಲ್ಲಿ ಗೋವಾಕ್ಕೆ ಬಂದಿಳಿದಾಗ ಅದು ಆಗಲೆ ಕ್ರೈಸ್ತರ ಕೇಂದ್ರವಾಗಿತ್ತು. ಅದಕ್ಕೆ 14 ಚರ್ಚುಗಳೂ, ನೂರಕ್ಕೂ ಮೀರಿ ಕ್ರೈಸ್ತ ಪುರೋಹಿತರಿದ್ದರು. ಸಂತ ಫ್ರಾನ್ಸಿಸ್ ಸೇವಿಯರ್ ಬೋಧನೆಯ ಕಡೆಗೆ ಗಮನವನ್ನು ಕೇಂದ್ರೀಕರಿಸಿದನು. ಆದರೆ ಗೋವಾದ ಆರ್ಚ್ ಬಿಷಪ್ ಆಗಿದ್ದ ಡಾ. ಮೆನೆಜಿಸ್ ಮಲಬಾರಿನ ಕ್ರಿಶ್ಚಿಯನರ ಮೇಲೆ ಆಗಿದ್ದ ಹಿಂದೂ

ಪ್ರಭಾವವನ್ನು ಆಳಿಸಿಹಾಕುವುದರಲ್ಲಿ ನಿರತನಾಗಿದ್ದನು. ಇಟಾಲಿಯನ್ ಜೆಸೂಟ್ ಆಗಿದ್ದ ರಾಬರ್ಟೋ ಡಿ ನೊಬಿಲಿಯ ಜೀವನ ಸಾಧನೆಗಳನ್ನು ಕುರಿತು ಬರೆದ ಕೃತಿಯಲ್ಲಿ ಈ ವಿರೋಧಗಳು, ಉಭಯಸಂಕಟಗಳು ಅತ್ಯುತ್ತಮವಾಗಿ ಚಿತ್ರಿತವಾಗಿವೆ. ಅವನು ಗೋವಾಕ್ಕೆ ಬಂದದ್ದು 1605ರಲ್ಲಿ, ಮದರಾಸಿನ ಮೈಲಾಪುರದಲ್ಲಿ ಸತ್ತದ್ದು 1656ರಲ್ಲಿ. ಅವನು ಹಿಂದೂ ಸನ್ಯಾಸಿಯಂತೆಯೇ ಜೀವಿಸಿದನು. ಕಾವಿಯುಡಿಗೆ ಧರಿಸಿದನು. ಆಹಾರ, ಸಾಮಾಜಿಕ ಸಂಪರ್ಕಗಳಲ್ಲಿ ಪರಿಶುದ್ಧಿಯನ್ನು ಕಟ್ಟುನಿಟ್ಟಾಗಿ ಪಾಲಿಸಿದನು. ಯೂರೋಪಿನ ರಕ್ಷಣೆ ಅವನಿಗೆ ದೊರೆಯಲಿಲ್ಲ; ಅವನು ಕೆಲಸ ಮಾಡುತ್ತಿದ್ದುದು ಯಾವುದೋ ದೂರದ ಕೊಂಪೆಯಲ್ಲಿ; ತಮಿಳು ಮತ್ತಿತರ ಪ್ರಾದೇಶಿಕ ಭಾಷೆಗಳ ಮೂಲಕ ಅವನು ಜನರೊಂದಿಗೆ ಮಾತನಾಡಬೇಕಾಗಿತ್ತು. ಬ್ರಾಹ್ಮಣರೊಂದಿಗೆ ಸಂಸ್ಕೃತದಲ್ಲಿ ಮಾತಾಡುತ್ತಿದ್ದನು. ಆ ಭಾಷೆಯ ಮೇಲೆ ಪ್ರಭುತ್ವ ಸಂಪಾದಿಸಿದ್ದನು. ಹಿಂದೂ ತತ್ವಶಾಸ್ತ್ರ ಮತ್ತು ಧಾರ್ಮಿಕ ಚಿಂತನೆಗಳನ್ನು ಚೆನ್ನಾಗಿ ಅರಿತಿದ್ದನು. ಒಳಗಿನಿಂದಲೇ ಹಿಂದೂಧರ್ಮವನ್ನು ಗೆಲ್ಲಬೇಕೆಂಬುದು ಅವನ ಇಚ್ಛೆಯಾಗಿತ್ತು. ಹಿಂದೂ ಸಮಾಜದ ಮೇಲು ತುದಿಯಿಂದ ಗಣ್ಯರನ್ನು ಮತಾಂತರಿಸಿ, ಆ ಮೂಲಕ ಕ್ರೈಸ್ತಮತವು ವೇಗವಾಗಿ ಹರಡಲು ಅವಕಾಶ ಕಲ್ಪಿಸಬೇಕೆಂದು ಅವನ ಆಸೆಯಾಗಿತ್ತು. ಕೆಳವರ್ಗದ ಜಾತಿಗಳಲ್ಲಿ ಮತಾಂತರಿಗಳಾದವರ ಸಂಪರ್ಕವನ್ನು, ಅವರ ಗುರುಗಳನ್ನೂ ಸಹ ಅವನು ನಿವಾರಿಸಿದನು. ಹದಿನೇಳನೆ ಶತಮಾನದ ಕೊನೆಯ ವೇಳೆಗೆ ಡಿ ನೊಬಿಲಿ ಮತ್ತು ಅವನ ಸಹಚರರು ಒಟ್ಟು 1,50,000 ಜನರನ್ನು ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸಿದ್ದರು. ಆದರೆ ನೊಬಿಲಿಯ ಕಾರ್ಯವಿಧಾನ ಎಲ್ಲರಿಗೂ ಒಪ್ಪಿಗೆಯಾಗಲಿಲ್ಲ. ಹಲವರ ಅಸಮಾಧಾನವನ್ನು ಅವನು ಕಟ್ಟಿಕೊಂಡನು. ಚರ್ಚ್ ಹಾಗೂ ಸ್ಥಳೀಯ ಆಡಳಿತಗಳಿಂದ ವಿಚಾರಣೆಗೆ ಒಳಪಡಬೇಕಾಯಿತು.

ಭಾರತದಲ್ಲಿ ಕ್ರೈಸ್ತ ಧರ್ಮದ ಮುಂದಿನ ಬೆಳವಣಿಗೆ ಹೆಚ್ಚು ಪ್ರಸಿದ್ಧವಾಗಿದೆ. ಚರ್ಚು ಪೋರ್ಚುಗೀಸ್, ಡಚ್, ಬ್ರಿಟಿಷ್ ಮತ್ತು ಫ್ರೆಂಚ್‌ರೊಂದಿಗೆ ಸಂಪರ್ಕ ಹೊಂದಿದುದೇ ಅದಕ್ಕೆ ಕಾರಣ. ಗಣನೀಯ ಪ್ರಮಾಣದಲ್ಲಿ ಕ್ರೈಸ್ತ ಧರ್ಮಬೋಧನೆಯ ಕೆಲಸ ಹಾಗೂ ಜನಕಲ್ಯಾಣದ ಕೆಲಸಗಳನ್ನು ವಿವಿಧ ರಾಷ್ಟ್ರಗಳಿಗೆ ಸೇರಿದ, ವಿವಿಧ ಪದವಿಗಳ ಕ್ರೈಸ್ತ ಮಿಷನರಿಗಳು ನಿರ್ವಹಿಸಿದರು. ಕೇರಳ ಮತ್ತು ತಮಿಳುನಾಡುಗಳಲ್ಲದೆ ಭಾರತ ರಾಷ್ಟ್ರದ ಬಹುತೇಕ ರಾಜ್ಯಗಳಲ್ಲಿ ಅಲ್ಲಲ್ಲೇ ಕ್ರೈಸ್ತರ ಬಿಡಿಗುಂಪುಗಳಿವೆ. ಈಶಾನ್ಯ ಬೆಟ್ಟಗಾಡು ಪ್ರದೇಶದ ಕೊನೆಯ ಪಕ್ಕ ಮೂರು ರಾಜ್ಯಗಳಲ್ಲಿ ಗಣನೀಯವಾದ ಕ್ರೈಸ್ತ ಬಹುಮತವಿದೆ. ಛೋಟಾನಾಗಪುರದ ಗುಡ್ಡಗಾಡು ಜನರಲ್ಲಿಯೂ ಸಾಕಷ್ಟು ಸಂಖ್ಯೆಯ ಕ್ರೈಸ್ತರಿದ್ದಾರೆ. ಯೂರೋಪಿಯನ್ ಆಡಳಿತಗಾರರ ಸಂಪರ್ಕದಿಂದಾಗಿ ಕ್ರಿಶ್ಚಿಯನರು ಭಾರತೀಯ ಸಮಾಜದ ಮುಖ್ಯವಾಹಿನಿಯಿಂದ ದೂರವಾಗಿರಬಹುದಾದರೂ, ಅವರು ಅದರೊಂದಿಗೆ ಹಿಂದೆ ಸಾವಯವ ಸಂಬಂಧವನ್ನು ಹೊಂದಿದ್ದವರೇ. ಇನ್ನೊಂದು ವಿಷಯವನ್ನು

ನೆನಪಿನಲ್ಲಿಟ್ಟುಕೊಳ್ಳಬೇಕಾದ್ದು ಅಗತ್ಯ. ಪಶ್ಚಿಮ ಕರಾವಳಿಯಲ್ಲಿ ಕ್ರೈಸ್ತಧರ್ಮವು ಬೌದ್ಧಧರ್ಮದೊಂದಿಗೆ ಜೊತೆ ಜೊತೆಯಾಗೇ ಬೆಳೆಯಿತು. ಬುದ್ಧನ ಚಿತ್ರವು ಕ್ರಿಶ್ಚಿಯನ್ ನಂತರದ ಚಿತ್ರಗಳ ಜೊತೆಯಲ್ಲಿ ಕಂಡುಬರುತ್ತದೆ. ಸಂತ ಜೋಸಫತ್‌ನಂತೆ (ಬೋಧಿಸತ್ವ ಎಂಬುದರ ಅಪಭ್ರಂಶ ಪೆಹೂಲಿ, ಸಿರಿಯಾಕ್ ಮತ್ತು ಗ್ರೀಕ್‌ಗಳಿಂದ ಲ್ಯಾಟಿನ್ನಿಗೆ ಭಾಷಾಂತರವಾಗಿರುವುದರಿಂದ ತಿಳಿದುಬಂದಿರುವಂತೆ) ಬುದ್ಧನು ಕ್ಯಾಥೋಲಿಕ್ ಪರಂಪರೆಯ ಭಾಗವೂ ಆಗಿದ್ದಾನೆ. ಇದರ ಬಗೆಗೆ ಮ್ಯಾಕ್ಸ್‌ಮುಲ್ಲರ್ ಹೀಗೆ ಹೇಳಿದ್ದಾನೆ. "ರಾಜನೂ ಸನ್ಯಾಸಿಯೂ ಸಂತನೂ ಆದ ಸೇಂಟ್ ಜೋಸಫೆಟನಿಗೆ ಸಲ್ಲಬೇಕಾದ ಗೌರವ ಮರ್ಯಾದೆಗಳನ್ನು ಬುದ್ಧನ. ನೆನಪಿಗೆ ಸಲ್ಲಿಸಿರುವುದಕ್ಕಾಗಿ ಗ್ರೀಕ್ ಅಥವಾ ರೋಮನ್ ಚರ್ಚಿನಲ್ಲಿ ಯಾರೊಬ್ಬರೂ ಲಜ್ಜಿಪಡಬೇಕಾಗಿಲ್ಲ."

ಭಾರತದಲ್ಲಿ ಇಸ್ಲಾಂಧರ್ಮಕ್ಕೆ ಸಂಬಂಧಿಸಿದ ಕೆಲವು ಪಡಿಯಚ್ಚಿನಂತಹ ಅಚ್ಚುಭಾವನೆಗಳು ಉಳಿದುಕೊಂಡು ಬಂದಿವೆ. ಮೊದಲನೆಯದು ಇಸ್ಲಾಂಧರ್ಮವನ್ನು ಕತ್ತಿಯ ಮೊನೆಯಿಂದ ಹರಡಲಾಯಿತು ಎಂಬುದು. ಎರಡನೆಯದು, ಆಗ ಭಾರತೀಯ ಸಮಾಜ ಎಷ್ಟು ಅವನತಿಗೊಂಡಿತ್ತೆಂದರೆ ಇಸ್ಲಾಂ ಧರ್ಮದ ಸಶಸ್ತ್ರ ಧಾಳಿಯನ್ನು ಅದು ತಡೆಯಲಾಗಲಿಲ್ಲ ಎಂಬುದು. ಮೂರನೆಯದು ಇಸ್ಲಾಂ ಧರ್ಮಕ್ಕೂ, ಹಿಂದೂ ಧರ್ಮಕ್ಕೂ ದೀರ್ಘಕಾಲಿಕ ಸಂಘರ್ಷ ನಡೆಯಿತು ಎಂಬುದು. ಇಸ್ಲಾಮಿಕ್ ಆಡಳಿತದ ಮುಖ್ಯ ಉದ್ದೇಶವೇ ಧರ್ಮದ ಪ್ರಸಾರ ಎಂಬುದು. ನಾಲ್ಕನೆಯದು, ಇಸ್ಲಾಮಿಕ್ ಆಳಿಕೆಯುದ್ದಕ್ಕೂ ಎಲ್ಲ ಮುಸ್ಲಿಮರೂ ಮಿಕ್ಕವರಿಗಿಂತ ಉನ್ನತವಾದ ಸೌಲಭ್ಯಗಳನ್ನು ಪಡೆದ ವರ್ಗವಾಗಿದ್ದರು, ಮುಸ್ಲಿಮೇತರರಿಗೆ ಹೋಲಿಸಿದರೆ ಮೇಲಿನ ಸ್ಥಾನದಲ್ಲಿದ್ದರು ಎನ್ನುವುದು. ಈ ನಾಲ್ಕು ಅಂಶಗಳೂ ಸರಿಯಲ್ಲ, ಇಲ್ಲವೇ ಹೆಚ್ಚೆಂದರೆ ಭಾಗಶಃ ಸರಿ.

ಇಸ್ಲಾಂ ಧರ್ಮವು ಮೊದಲು ಶಾಂತಿಯುತವಾದ ವಿಧಾನಗಳಿಂದ ಭಾರತಕ್ಕೆ ಬಂದಿತು. ಅನೇಕ ವೇಳೆ ಹಿಂದೂ ಅರಸರ ಪ್ರೋತ್ಸಾಹದಿಂದ ಇದು ಸಾಧ್ಯವಾಯಿತು. ಉತ್ತರ ಕರಾವಳಿ ಪ್ರದೇಶದಲ್ಲಿ ಬಲ್‌ಹಾರಾ ರಾಜವಂಶ ಹಾಗೂ ಮಲಬಾರ್ ಕರಾವಳಿಯಲ್ಲಿ ಜಾಮೊರಿನ್ ವಂಶದವರು ಮುಸ್ಲಿಂ ವರ್ತಕರನ್ನು ಸ್ವಾಗತಿಸಿ, ಅವರು ಅನ್‌ಹಲ್‌ವಾರಾ, ಕಲ್ಲಿಕೋಟೆ ಮತ್ತು ಕ್ವಿಲಾನ್ ನಂತಹ ಸ್ಥಳಗಳಲ್ಲಿ ನೆಲೆಸಲು ಪ್ರೋತ್ಸಾಹಕೊಟ್ಟರು. ಯಾವ ತೊಂದರೆಯೂ ಇಲ್ಲದೆ ಅವರು ಮಸೀದಿಗಳನ್ನು ಕಟ್ಟಿಕೊಂಡು ತಮ್ಮ ಧರ್ಮಾಚರಣೆ ಮಾಡಿಕೊಳ್ಳಲು ಅವಕಾಶವಾಗಿತ್ತು. ಅರಬ್ ಮತ್ತು ಪರ್ಷಿಯನ್ ವರ್ತಕರು ಕರಾವಳಿಯಲ್ಲಿ ನೆಲೆಸಿ ಮುಸ್ಲಿಮೇತರ ಸ್ತ್ರೀಯರನ್ನು ಮದುವೆಯಾದರು. ಕೊಂಕಣದ ನವಾಯಿತ್ ಅಥವಾ ನಾತಿಯಾ ಸಮಾಜ ಮತ್ತು ಮಲಬಾರ್ ಕರಾವಳಿಯ ಮಾಪಿಳ್ಳ ಅಥವಾ ಮೋಪ್ಲಾ ಸಮಾಜ ಹುಟ್ಟಿಕೊಂಡದ್ದು ಹೀಗೆ. ಐತಿಹ್ಯಗಳು ಇಸ್ಲಾಂ ಪ್ರಸಾರವಾದದ್ದು ಇನ್ನೂ ಮೊದಲೇ ಎಂದು ಹೇಳಿಕೊಂಡರೂ, ಕ್ರಿ.ಶ. ಎಂಟನೆಯ ಶತಮಾನದಲ್ಲಿ ಮುಸ್ಲಿಮರು ಭಾರತದಲ್ಲಿ

ವಾಸ ಮಾಡುತ್ತಿದ್ದರು ಎಂದು ಐತಿಹಾಸಿಕ ದಾಖಲೆಗಳು ಸೂಚಿಸುತ್ತವೆ. ಹದಿನಾಲ್ಕನೆಯ ಶತಮಾನದ ಪ್ರಾರಂಭದಲ್ಲಿ ಇಲ್ಲಿಗೆ ಬಂದಿದ್ದ ಪ್ರವಾಸಿ ಇಬ್ನ್ ಬತೂತ ಮಲಬಾರಿನ ನಗರಗಳಲ್ಲಿ ಇಸ್ಲಾಂಧರ್ಮಕ್ಕೆ ಸೇರಿದ ಶ್ರೀಮಂತ ವರ್ತಕರು ತುಂಬಿಹೋಗಿದ್ದುದನ್ನು, ಕಣ್ಣು ಸೆಳೆಯುವಂತಹ ಮಸೀದಿಗಳನ್ನು ನಿರ್ಮಿಸಿದ್ದುದನ್ನು ಕಂಡನು. ಪೂರ್ವತೀರದ ತಮಿಳುನಾಡಿನಲ್ಲಿನ ಲಬ್ಬಾಯಿಗಳು ಅರಬ್ಬರು ತಮಿಳು ಸ್ತ್ರೀಯರೊಂದಿಗೆ ಕೂಡಿದುದರಿಂದ ಹುಟ್ಟಿದ ಜನರು; ಆ ಅರಬ್ಬರು ಹಡಗು ಒಡೆದು ಅಲ್ಲಿ ಬಂದು ಸೇರಿರಬಹುದು, ಅಥವಾ ಇರಾಕಿನಿಂದ ಹೊರದೂಡಲ್ಪಟ್ಟವರಾಗಿರಬಹುದು ಎಂದು ಹೇಳಲಾಗಿದೆ.

ಅಲ್ಲಿಂದಿಲ್ಲಿಗೆ ಪ್ರವಾಸ ಮಾಡುತ್ತಾ ಧರ್ಮ ಪ್ರಚಾರ ಮಾಡಿದ ಉಪದೇಶಕರ ಕೆಲಸವನ್ನೂ ಇಲ್ಲಿ ಉಲ್ಲೇಖಿಸುವುದು ಅಗತ್ಯ. ಇಸ್ಲಾಂ ಧರ್ಮವು ಈ ನಾಡಿನಲ್ಲಿ ಶಾಂತಿಯುತವಾಗಿ ಹರಡುವುದಕ್ಕೆ ಅವರು ತುಂಬಾ ಸಹಾಯ ಮಾಡಿದರು. ಅವರು ಬರತೊಡಗಿದ್ದು ಕ್ರಿ.ಶ. ಹನ್ನೊಂದನೆಯ ಶತಮಾನದಿಂದ ಮುಂದಕ್ಕೆ. ಅವರು ಸ್ವಂತ ಇಚ್ಛೆಯಿಂದ ಭಾರತಕ್ಕೆ ಬಂದರು. ಅವರಲ್ಲಿ ಕೆಲವರು ದೊಡ್ಡ ವಿದ್ವಾಂಸರು. ಇಸ್ಲಾಂ ಧರ್ಮವನ್ನು ಹರಡಬೇಕು ಎಂಬ ವೈಯಕ್ತಿಕ ಆಕಾಂಕ್ಷೆ ಹೊಂದಿದ್ದವರು. ಈ ಮಿಶನರಿಗಳಲ್ಲಿ ಎಲ್ಲೋ ಕೆಲವರನ್ನು ಮಾತ್ರ ಆಕ್ರಮಣಕಾರರು ತಮ್ಮೊಂದಿಗೆ ಕರೆತಂದಿದ್ದರು. ಹೀಗೆ ಭಾರತಕ್ಕೆ ಶಾಂತಿಯುತ ಮಾರ್ಗದಲ್ಲಿ ಬಂದ ಮೊದಲ ಮುಸ್ಲಿಂ ಉಪದೇಶಕರಲ್ಲಿ ಬುಖಾರಾದ ಶೇಖ್ ಇಸ್ಮಾಯಿಲ್ ಒಬ್ಬ. ಕ್ರಿ.ಶ. 1005ರಲ್ಲಿ ಅವನು ಇಲ್ಲಿಗೆ ಬಂದು ಲಾಹೋರಿನಲ್ಲಿ ನೆಲೆಸಿದನು. ಧರ್ಮವನ್ನು ಕುರಿತಂತೆ ಹಾಗೂ ಲೌಕಿಕ ವಿದ್ಯೆಯಲ್ಲಿ ಅವನು ಸಾಕಷ್ಟು ಪರಿಣತನಾಗಿದ್ದನು. ಶ್ರೋತೃಗಳ ಮೇಲೆ ಬಲವಾದ ಪ್ರಭಾವ ಬೀರುವ ಶಕ್ತಿ ಅವನಿಗಿತ್ತು. ಅಬ್ದ್ ಅಲ್ಲಾಹ್ ಕ್ರಿ.ಶ. 1067ರಲ್ಲಿ ಯೆಮೆನ್‌ನಿಂದ ಬಂದನು. ಇವನು ಗುಜರಾತ್ ಪ್ರಾಂತದಲ್ಲಿ ಧರ್ಮಪ್ರಚಾರ ಮಾಡಿದನು. ಇವನನ್ನು ಬೋಹ್ರಾಗಳಲ್ಲಿ ಮೊದಲನೆಯ ಪ್ರಚಾರಕ ಎಂದು ಪರಿಗಣಿಸುತ್ತಾರೆ. ಇಂತಹ ಧರ್ಮ ಪ್ರಚಾರಕರ ಪಟ್ಟಿ ದೀರ್ಘವಾಗಿದೆ. ಇಂದಿಗೂ ಉಳಿದುಕೊಂಡಿರುವಂತಹ ಆಳವಾದ ಪ್ರಭಾವ ಬೀರಿದ ಕೆಲವು ಹೆಸರುಗಳನ್ನು ಒಟ್ಟಿಗೆ ಇಲ್ಲಿ ಉಲ್ಲೇಖಿಸಬಹುದು. ನೂರುದ್ದೀನ್ ಒಬ್ಬ. ಹಿಂದೂ ಭಾವನೆಗೆ ಅನುಗುಣವಾಗಿ ನೂರ್ ಸತಗರ್ ಎಂದೇ ಇವನು ಪ್ರಸಿದ್ಧನಾಗಿದ್ದಾನೆ. ಪರ್ಷಿಯದಿಂದ ಹನ್ನೆರಡನೆಯ ಶತಮಾನದಲ್ಲಿ ಗುಜರಾತಿಗೆ ಬಂದನು. ಇವನನ್ನು ಖೋಜರು ತಮ್ಮ ಮೊದಲನೆಯ ಮತ ಪ್ರಚಾರಕನೆಂದು ಗೌರವಿಸುತ್ತಾರೆ. ಬುಖಾರಾದ ಸಯ್ಯಿದ್ ಜಲಾಲುದ್ದೀನ್ (ಕ್ರಿ.ಶ.1190–1291) ಮತ್ತು ಅವನ ವಂಶಿಕರು ಮೊದಲು ಸಿಂಧ್ ಪ್ರಾಂತದಲ್ಲಿ ಕೆಲಸ ಮಾಡಿದರು. ಅನಂತರ ಚಟುವಟಿಕೆಗಳನ್ನು ಪಂಜಾಬಿಗೆ ವಿಸ್ತರಿಸಿದರು. ಅವರಲ್ಲಿ ಅತ್ಯಂತ ಮುಖ್ಯನಾದ ಖ್ವಾಜಾ ಮುಯಿನುದ್ದೀನ್ ಚಿಷ್ಟಿ ಪೂರ್ವ ಪರ್ಷಿಯದವನು. ಅಜಮೀರಿನಲ್ಲಿ ಕೆಲಸ ಮಾಡುತ್ತಿದ್ದು ಅಲ್ಲೇ ಕ್ರಿ.ಶ. 1236ರಲ್ಲಿ ತೀರಿಕೊಂಡನು. ಇಂದಿಗೂ ಅವನ ಸಮಾಧಿಯು ಭಾರತ–ಪಾಕ್ ಉಪಖಂಡದ ವಿವಿಧ ಭಾಗಗಳಿಂದ ಭಾರೀ

ಸಂಖ್ಯೆಯಲ್ಲಿ ಮುಸ್ಲಿಂ ಮತ್ತು ಮುಸ್ಲಿಮೇತರ ಭಕ್ತರನ್ನು ಆಕರ್ಷಿಸುತ್ತಿದೆ. ಬು-ಅಲಿ ಕಲಂದರ್ ಆದೇ ಶತಮಾನದಲ್ಲಿ ಭಾರತಕ್ಕೆ ಬಂದನು. ಪಾಣಿಪತ್‌ನಲ್ಲಿ ನೆಲೆಸಿ ಅನೇಕರನ್ನು ಮತಾಂತರಗೊಳಿಸಿದನು. ಆವನಿಂದ ಧರ್ಮಾಂತರಗೊಂಡವರಲ್ಲಿ ರಜಪೂತರೂ ಕೆಲವರು ಇದ್ದರು. ಬಂಗಾಳದಲ್ಲಿ ಹಲವರು ಮುಸ್ಲಿಂ ಸಾಧು, ಸಂತರ ಸಮಾಧಿಗಳಿವೆ, ಮಸೀದಿಗಳಿವೆ. ಅವುಗಳಲ್ಲಿ ಅತ್ಯಂತ ಪ್ರಾಚೀನವಾದದ್ದು ಶೇಖ್ ಜಲಾಲುದ್ದೀನ್ ತಬ್ರೀಜಿಯದು. ಅವನು ಕ್ರಿ.ಶ. 1244ರಲ್ಲಿ ಮರಣ ಹೊಂದಿದನು. ಅವನ ಸಮಾಧಿ ಎಲ್ಲಿದೆಯೋ ತಿಳಿಯದು. ಆದರೆ ಅವನಿಗಾಗಿ ಕಟ್ಟಿದ ದೇವಾಲಯಕ್ಕೆ ಇಂದೂ ಭಾರೀ ಸಂಖ್ಯೆಯಲ್ಲಿ ಜನರು ಯಾತ್ರೆ ಹೋಗುತ್ತಾರೆ. ಹದಿಮೂರು ಮತ್ತು ಹದಿನಾಲ್ಕನೆಯ ಶತಮಾನಗಳಲ್ಲಿ ಅನೇಕ ಪ್ರಚಾರಕರು ಪಂಜಾಬ್, ಕಾಶ್ಮೀರ, ದಖ್ಖಿನ್, ಪೂರ್ವ ಮತ್ತು ಪಶ್ಚಿಮಭಾರತ ಪ್ರದೇಶಗಳಲ್ಲಿ ತಮ್ಮ ಕಾರ್ಯದಲ್ಲಿ ನಿರತರಾಗಿದ್ದರು. ಅವರಲ್ಲಿ ತುಂಬ ಪ್ರಸಿದ್ಧರಾಗಿದ್ದವರು ಬಾಬಾ ಫರೀದುದ್ದೀನ್ ಮತ್ತು ಅಹಮದ್ ಕಲೀರ್ (ಇವನಿಗೆ ಮುಖದುವಮ್-ಇ-ಜಹಾನಿಯನ್ ಎಂದೂ ಹೆಸರು). ಇವರಿಬ್ಬರೂ ಮುಖ್ಯವಾಗಿ ಪಂಜಾಬಿನಲ್ಲಿ ಕಾರ್ಯ ನಿರತರಾಗಿದ್ದರು. ಬುಲ್‌ಬುಲ್‌ಷಹಾ ಕಾಶ್ಮೀರದಲ್ಲಿ ಚಟುವಟಿಕೆಗಳನ್ನು ನಡೆಸಿದ್ದನು. ದಖ್ಖಿನ್ ಪ್ರಾಂತದಲ್ಲಿ ಮಹಮ್ಮದ್ ಗೀಸೂ ದರಾಜ್ ಮತ್ತು ಪೀರ್ ಮಹಾಬೀರ್ ಖಾಮ್‌ದಯಾತ್ ಪ್ರಸಿದ್ಧರು. ಹೀಗೆ ಪಟ್ಟಿಗೆ ಕೊನೆಯೇ ಇಲ್ಲ, ಏಕೆಂದರೆ ಮುಸ್ಲಿಮ್ ಪೀರರ, ಸಂತರ ಸಮಾಧಿಗಳು, ಮಂದಿರಗಳು ದೇಶಾದ್ಯಂತ ಹರಡಿಕೊಂಡಿವೆ. ಇಲ್ಲಿ ಒತ್ತು ಕೊಟ್ಟು ಹೇಳಬೇಕಾದ ವಿಷಯವೆಂದರೆ, ಈ ಪ್ರಚಾರಕರು ಇಸ್ಲಾಂ ಸಂದೇಶವನ್ನು ಪ್ರೇಮದ ಮೂಲಕ, ಆಡಳಿತ ಶಸ್ತ್ರಬಲದ ನೆರವಿಲ್ಲದೆ ಸಾರಿದರು ಎಂಬುದು. ಕತ್ತಿಯೂ ಸಾವಿರಾರು ಜನರನ್ನು ಮತಾಂತರಿಸಿರಬಹುದು, ಇಲ್ಲವೆಂದಲ್ಲ. ಆದರೆ ಜೊತೆಯಲ್ಲೇ ಆ ವಿಧಾನವು ದ್ವೇಷವನ್ನೂ ಬೆಳೆಸಿತು. ಪೀರರು, ಸಂತರಾದರೆ ಪ್ರೇಮಪೂರ್ವಕ ಒತ್ತಾಯದ ದಾರಿ ಹಿಡಿದರು. ಆದ್ದರಿಂದಲೇ ಇಂದಿಗೂ ಮುಸ್ಲಿಮೇತರರಲ್ಲೂ ಅವರ ಬಗೆಗೆ ಭಕ್ತಿ ಗೌರವಗಳು ವ್ಯಕ್ತವಾಗುತ್ತಿವೆ.

ಸ್ಥಾಪನೆಗೊಂಡ ಒಂದೇ ಶತಮಾನದಲ್ಲಿ ಇಸ್ಲಾಂ ರಾಜಕೀಯವಾಗಿ ಸ್ಪರ್ಧಿಸಬಲ್ಲ ಶಕ್ತಿಯಾಗಿ ಬೆಳೆಯಿತು. ಪ್ರವಾದಿ ಮಹಮ್ಮದನು ಮೆಕ್ಕಾದಿಂದ ಮದೀನಾಕ್ಕೆ ಹೋದ ನೂರು ವರ್ಷಗಳೊಳಗೆ ಇಸ್ಲಾಂ ಆಡಳಿತೆಯು ಚೈನಾದ ಗಡಿಯಿಂದ ಸ್ಪೆಯಿನಿನ ಅಟ್ಲಾಂಟಿಕ್ ತೀರದವರೆಗೆ ವಿಸ್ತರಿಸಿತು. ಆದರೆ ಆ ವಿಸ್ತಾರಕ ಅವಧಿಯಲ್ಲಿ ಅದು ಭಾರತದಲ್ಲಿ ಅಂತಹ ಮಹತ್ವದ ಪ್ರಯೋಜನವನ್ನೇನೂ ಕಾಣಲಿಲ್ಲ. ಕ್ರಿ.ಶ. 712ರಲ್ಲಿ ಮಹಮ್ಮದ್ ಬಿನ್ ಕಾಸೀಮ್ ಸಿಂಧನ್ನು ಗೆದ್ದನು. ಆದರೆ ಇಸ್ಲಾಮಿಕ್ ಸಾಮ್ರಾಜ್ಯವು ಭಾರತದಲ್ಲಿ ಹೆಚ್ಚಾಗಿ ಪ್ರಸರಿಸಲಿಲ್ಲ. ಕ್ರಿ.ಶ. 725ರಲ್ಲಿ ಸಿಂಧ್ ಪ್ರದೇಶದ ಗವರ್ನರ್ ಜುನ್ನಾದನು ಬ್ರೋಚ್, ಗುಜರಾತ್ ಮತ್ತು ಮಾಳವಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಳ್ಳಲು ಪ್ರಯತ್ನಿಸಿದನು. ಮೊದಮೊದಲು ಕೆಲವು ಯುದ್ಧಗಳಲ್ಲಿ ಅವನು ಜಯಗಳಿಸಿದನಾದರೂ ತನ್ನ ಉದ್ದೇಶವನ್ನು ನೆರವೇರಿಸಿಕೊಳ್ಳುವಲ್ಲಿ

ಅಸಮರ್ಥನಾದನು. ಮಾಳವವನ್ನು ಗೆಲ್ಲಲು ಮಾಡಿದ ಪ್ರಯತ್ನವನ್ನು ಗುರ್ಜರ ದೊರೆ ನಾಗಭಟನು ವಿಫಲಗೊಳಿಸಿ ಅವನನ್ನು ಸೋಲಿಸಿ ಹಿಂದಕ್ಕಟ್ಟಿದನು. ಆರು ವರ್ಷಗಳ ನಂತರ, ಕ್ರಿ.ಶ. 731ರಲ್ಲಿ ಜುನ್ಯಾದನ ನಂತರ ಪಟ್ಟಕ್ಕೆ ಬಂದ ತಮೀಂ ಮಾಳವವನ್ನು ಒತ್ತುವರಿ ಮಾಡಿಕೊಂಡು ದಖ್ಖನಿನ ಒಂದು ಭಾಗವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ಕ್ರಿ.ಶ. 738ರಲ್ಲಿ ಅವನನ್ನು ಚಾಲುಕ್ಯ ರಾಜನು ನಿರ್ಣಾಯಕವಾಗಿ ಸೋಲಿಸಿದನು. ಈ ಯದ್ಧದ ಫಲಿತಾಂಶವು ಭಾರತವನ್ನು ಸುಮಾರು 275ವರ್ಷಗಳ ಕಾಲ ಮುಖ್ಯ ಆಕ್ರಮಣಗಳಾಗದಂತೆ ರಕ್ಷಿಸಿತು ಎಂದು ಕೆ.ಎಂ. ಪಣಿಕ್ಕರ್ ಅಭಿಪ್ರಾಯಪಡುತ್ತಾರೆ. ಈ ಅವಧಿಯಲ್ಲಿ ನಡೆದ ಒಂದೇ ಒಂದು ಆಕ್ರಮಣವೆಂದರೆ ಕ್ರಿ.ಶ. 883ರಲ್ಲಿ ಇಮಾಂ ಬಿನ್ ಮುಸ್ಸಾ ಕಚ್ ಮೇಲೆ ನಡೆಸಿದ ಆಕ್ರಮಣ. ಸಿಂಧ್ ಪ್ರದೇಶದ ಈ ಗವರ್ನರನನ್ನು ಮಿಹಿರಭೋಜನು ಸೋಲಿಸಿದನು.

ಸುಮಾರು ಮೂರು ಶತಮಾನಗಳ ಕಾಲ ಇಸ್ಲಾಮಿಕ್ ಆಕ್ರಮಣಕಾರರ ಹಂಚಿಕೆಯನ್ನು ಯಶಸ್ವಿಯಾಗಿ ತಡೆದು ವಿಫಲಗೊಳಿಸಲಾಯಿತು. ಅಲ್ಲಿಂದ ಮುಂದಕ್ಕೆ ತಡೆದುಕೊಳ್ಳಲಾಗಲಿಲ್ಲ. ಆ ಮೊದಲು ಜಗತ್ತಿನ ಅರ್ಧಭಾಗದಲ್ಲಿ ಏನಾಗಿತ್ತೋ ಅದೇ ಈಗ ಭಾರತದಲ್ಲೂ ಪುನರುಕ್ತವಾಯಿತು.

ಈ ಹಂತದಲ್ಲಿ ವಾಯವ್ಯ ಮಾರ್ಗದಿಂದ ಭಾರತದ ಪ್ರದೇಶಗಳ ಮೇಲೆ ನಡೆದ ಆಕ್ರಮಣಗಳನ್ನೂ ಹಲವು ಶತಮಾನಗಳ ಕಾಲ ದೆಹಲಿಯಿಂದ ಅಥವಾ ಆಗ್ರಾದಿಂದ ಆಳಿದ ಮುಸ್ಲಿಂ ರಾಜವಂಶಗಳ ಸ್ಥೂಲಪಟ್ಟಿಯನ್ನೂ ಹೀಗೆ ಒದಗಿಸುವುದು ಉಪಯುಕ್ತವಾಗುತ್ತದೆ:

| | |
|---|---|
| ಕ್ರಿ.ಶ. 712 | ಸಿಂಧ್ ಮೇಲೆ ಅರಬ್ ವಿಜಯ |
| 997–1030 | (ಟರ್ಕಿ ಮೂಲದ) ಘಜನಿ ಮಹಮೂದನ ಆಕ್ರಮಣಗಳು. |
| 1192 | ಮಹಮ್ಮದ್ ಘೋರಿ (ಟರ್ಕಿಷ್ ಆಫ್‌ಘನ್) ಪೃಥ್ವೀರಾಜ ಚೌಹಾಣನನ್ನು ಸೋಲಿಸಿದ್ದು. |
| 1206 | ಕುತುಬ್ ಉದ್ದೀನ್ ಐಬಕ್ (ಟರ್ಕಿಯ ಆಫ್‌ಘನ್) ಸ್ಥಾಪಿಸಿದ ಗುಲಾಮಿ ವಂಶ. |
| 1296–1316 | ಅಲ್ಲಾವುದ್ದೀನ್ ಖಿಲ್ಜಿಯ ಆಳ್ವಿಕೆ. |
| 1325–51 | (ಟರ್ಕಿ ಮೂಲದ) ಮಹಮ್ಮದ್ ಬಿನ್ ತುಘಲಕನ ಆಳ್ವಿಕೆ |
| 1414–50 | ದೆಹಲಿಯಲ್ಲಿ ಸಯ್ಯಿದರ ಆಳ್ವಿಕೆ (ಮೊದಲನೆಯ ಸಯ್ಯಿದ್ ಸುಲ್ತಾನನು ತೈಮೂರ್ ನೇಮಿಸಿದವನು) |
| 1451 | ಬುಹಲುಲ್ ಲೋದಿ (ಆಫ್‌ಘನ್ ಮೂಲ; ಲೋದಿಗಳು 1526ರವರೆಗೆ ರಾಜ್ಯವಾಳಿದರು) |

1526 ಮೊದಲನೆಯ ಪಾಣಿಪತ್ ಕದನ; ಬಾಬರನು ಮೊಗಲ್ ಸಾಮ್ರಾಜ್ಯವನ್ನು ಸ್ಥಾಪಿಸಿದ್ದು (13 ಮತ್ತು 14ನೇ ಶತಕದ ಮೊದಲಲ್ಲಿ ಮಂಗೋಲರು ಹಾಗೂ 1398ರಲ್ಲಿ ತೈಮೂರನು ಮುಖ್ಯವಾದ ಆಕ್ರಮಣಗಳನ್ನು ನಡೆಸಿದರು).

ಘಜನಿಯು ಈ ದೇಶದ ಮೇಲೆ ಆಕ್ರಮಣ ಮಾಡುವ ಹೊತ್ತಿಗೆ ಭಾರತದಲ್ಲಿ, ಸಾಮಾಜಿಕ – ರಾಜಕೀಯ ಪರಿಸ್ಥಿತಿಗಳು ಬದಲಾಗಿದ್ದುವು. ರಾಜ್ಯಗಳ ನಡುವೆ ಪರಸ್ಪರ ಆಂತರಿಕ ಹೋರಾಟ, ಯುದ್ಧಗಳು ಭಾರತದ ಪ್ರತಿಭಟನಾ ಶಕ್ತಿಯನ್ನು ಕುಗ್ಗಿಸಿದ್ದುವು. ಆದರೂ ಸವಾಲನ್ನು ಎದುರಿಸಲು ಉಗ್ರ ಪ್ರಯತ್ನಗಳು ಕೆಲವು ನಡೆದುವು. ಉದಾಹರಣೆಗೆ, ಘಜನಿ ಮಹಮ್ಮದನು ಸೋಮನಾಥ ದೇವಾಲಯವನ್ನು ಮುತ್ತಿದಾಗ ಧಾರಾ ನಗರದ ಪರಮಾರ ದೊರೆ ಭೋಜನು ಕಾಥೇವಾಡಕ್ಕೆ. ಸೈನ್ಯದೊಂದಿಗೆ ಹೋಗಿ ಮಹಮ್ಮದನು ಹಿಂದಿರುಗಿ ಬರುವ ದಾರಿಯನ್ನು ತಡೆಗಟ್ಟಿದನು. ಅವನಿಗೆ ಭಾರೀ ಹಾನಿಯುಂಟಾಗುವ ಹಾಗೆ ಮಾಡಿದನು. ಕೊನೆಗೆ ನೀರಿನ ಹೆಸರೇ ಇಲ್ಲದ ಮರುಭೂಮಿಯ ಹಾದಿಯಲ್ಲಿ ಅವನು ಹೋಗಬೇಕಾಯಿತು. ಅಪಾರ ಕಷ್ಟ, ನಷ್ಟಗಳನ್ನನುಭವಿಸಬೇಕಾಯಿತು. ಈಗಾಗಲೇ ನಾವು ನೋಡಿರುವಂತೆ ಭಾರತವು ಇನ್ನೂ ಹಲವಾರು ಆಕ್ರಮಣಗಳನ್ನು ಕಂಡಿತು. ಶಕರು, ಕುಶಾನರು ಮತ್ತು ಹೂಣರು ಮಧ್ಯ ಏಷ್ಯಾದಿಂದ ಬಂದರು. ಪ್ರಾರಂಭದಲ್ಲಿ ಘರ್ಷಣೆಗಳಾದರೂ ಆಮೇಲೆ ಅವರು ಭಾರತೀಯ ಸಮಾಜದಲ್ಲಿ ವಿಲೀನಹೊಂದಿಬಿಟ್ಟರು. ಇಸ್ಲಾಮಿಕ್ ಆಕ್ರಮಣಕಾರಿಗಳೊಂದಿಗೆ ಆದ ಸಂಘರ್ಷವಾದರೋ ದೀರ್ಘಕಾಲಿಕವಾಗಿತ್ತು, ಅವರು ತಮ್ಮದೇ ಧರ್ಮವೊಂದನ್ನು ತಂದಿದ್ದುದರಿಂದಲೂ, ತಮ್ಮ ಧರ್ಮವು ಮಾತ್ರವೇ ಸತ್ಯವಾದದ್ದೆಂದು ಅವರು ನಂಬಿದ್ದುದರಿಂದಲೂ ಅದು ಹೆಚ್ಚು ಕಹಿಯಾಗಿತ್ತು, ಬಿರುಕು ಉಂಟಾಯಿತು. ಅದೇ ಸಮಯಕ್ಕೆ ಬಿರುಕು ಮುಚ್ಚಿ ಹೊಂದಾಣಿಕೆಗೊಳಿಸುವ ಪ್ರಯತ್ನಗಳೂ ನಡೆದಿದ್ದುವು. ಭಾರತದ ಮುಸ್ಲಿಂ ಅರಸರು ಇಲ್ಲಿದ್ದುದು ಇಸ್ಲಾಂ ಪ್ರಚಾರವೊಂದಕ್ಕೆ ಮಾತ್ರವೇ ಅಲ್ಲ, ಅವರಿಗೆ ಇನ್ನು ಹಲವು ಆಸಕ್ತಿಗಳಿದ್ದುವು. ಅವರಲ್ಲಿ ಕೆಲವರು ಇತರರಿಗಿಂತ ಗಂಭೀರವಾಗಿ ಸಮಾಜವನ್ನು ಇಸ್ಲಾಮೀಕರಿಸುವ ಕಾರ್ಯವನ್ನು ಕೈಗೆತ್ತಿಕೊಂಡರು. ಜಿಜಿಯಾ (ಮತ ತೆರಿಗೆ) ತಲೆಗಂದಾಯ, ಖರಾಜ್ (ಭೂಮಿ ಮತ್ತಿತರ ಆಸ್ತಿಗಳ ಮೇಲಿನ ತೆರಿಗೆ) ಜೊತೆಗೆ ಸೇರಿತು. ಕೆಲವು ಅರಸರು ಬಹಳ ಕ್ರೂರವಾಗಿ ಈ ತೆರಿಗೆ ವಸೂಲಿ ನಡೆಸಿದರು. ಕೆಲವರು ಮಾತ್ರ ಸ್ವಲ್ಪ ಸಡಿಲತೆ ತೋರಿಸಿದರು.

ತಾತ್ವಿಕವಾಗಿ ಇಸ್ಲಾಂಧರ್ಮದ ಪ್ರಕಾರ ಇಸ್ಲಾಮಿಕ್ ಆಳ್ವಿಕೆಯಲ್ಲಿ ಮುಸ್ಲಿಮೇತರ ಜನರಿಗೆ ಮೂರು ಆಯ್ಕೆಗಳಿದ್ದುವು; ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡು ಅದನ್ನನುಸರಿಸುವುದು; ಮುಸ್ಲಿಂ ಆಡಳಿತವನ್ನು ಒಪ್ಪಿಕೊಂಡು ಧಿಮ್ಮಿಗಳಾಗಿ ಜಿಜಿಯಾ ಮತ್ತು ಖರಾಜ್ ತೆರಿಗೆಗಳನ್ನು ಪಾವತಿ ಮಾಡುವುದು; ಅಥವಾ ಹೋರಾಡುವುದು. ತಾಂತ್ರಿಕವಾಗಿ ನೋಡುವುದಾದರೆ, ದರ್ಶಿತಜ್ಞಾನವಿರುವ ಪವಿತ್ರ ಗ್ರಂಥವನ್ನು ಯಾರು ಹೊಂದಿರುವನೋ ಅವನು ಧಿಮ್ಮಿ ಸ್ಥಾನಕ್ಕೆ ಅರ್ಹನು.

ಹಿಂದೂಗಳು ಅಹ್ಲ್–ಉಲ್–ಕಿತಾಬ್ ಅಲ್ಲ. ಆದ್ದರಿಂದ ಅವರಿಗೆ ಉಳಿದಿದ್ದ ಎರಡು ದಾರಿಗಳೆಂದರೆ, ಇಸ್ಲಾಂಧರ್ಮವನ್ನು ಅಂಗೀಕರಿಸುವುದು ಅಥವಾ ಸಾಯುವುದು. ದೀರ್ಘಕಾಲದ ಮುಸ್ಲಿಂ ಆಳಿಕೆಯಿದ್ದರೂ ಜನತೆಯ ಬಹುಭಾಗವು ಹಿಂದೂ ಆಗಿಯೇ ಉಳಿಯಿತು. ಇಸ್ಲಾಮಿನ ಆಗತ್ಯಗಳನ್ನು ಕಟ್ಟುನಿಟ್ಟಾಗಿ ಪಾಲಿಸಿದ್ದರೆ ಇದು ಸಾಧ್ಯವಾಗುತ್ತಿರಲಿಲ್ಲ. ಸೈನ್ಯ, ಸರಕಾರೀ ಆಡಳಿತ ಮತ್ತು ವ್ಯಾಪಾರ, ವಾಣಿಜ್ಯ ಎಲ್ಲವೂ ಹಿಂದೂಗಳ ಪ್ರತ್ಯಕ್ಷ ಮತ್ತು ಪರೋಕ್ಷ ಬೆಂಬಲವನ್ನು ಅವಲಂಬಿಸಿದ್ದಿತು. ಹಾಗಾಗಿ ಜಿಜಿಯಾ ತೆರಿಗೆಯನ್ನು ಕೆಲವೊಮ್ಮೆ ಕಡ್ಡಾಯವಾಗಿ ಜಾರಿಗೊಳಿಸಲಾಗುತ್ತಿತ್ತು; ಕೆಲವೊಮ್ಮೆ ರದ್ದುಪಡಿಸಲಾಗುತ್ತಿತ್ತು. ಮತ್ತೊಬ್ಬ ಮತಾಂಧನು ಮತ್ತೆ ಅದನ್ನು ಜಾರಿಗೆ ತರುತ್ತಿದ್ದನು. ವಾಸ್ತವವಾಗಿ ಇಸ್ಲಾಂ ಭಾರತೀಕರಣಗೊಳ್ಳುತ್ತಿತ್ತು. ಈ ಪ್ರಕ್ರಿಯೆಯಲ್ಲಿ ಭಾರತದಲ್ಲಿ ಅದು ಕೆಲವೊಂದು ನಿರ್ದಿಷ್ಟ ಲಕ್ಷಣಗಳನ್ನು ಪಡೆಯಿತು. ಕಲೆ, ವಾಸ್ತುಶಿಲ್ಪಗಳಲ್ಲಿ, ತತ್ವಶಾಸ್ತ್ರ ಮತ್ತು ಧರ್ಮದ ಕ್ಷೇತ್ರದಲ್ಲಿ, ವೈದ್ಯಕೀಯ ಮತ್ತಿತರ ಲೌಕಿಕ ಜ್ಞಾನದಲ್ಲಿ ಗಣನೀಯ ಪ್ರಮಾಣದ ವಿನಿಮಯ ನಡೆದಿತ್ತು. ಅಕ್ಬರನಂಥ ಚಕ್ರವರ್ತಿಗಳು ವಿವಿಧ ಮತಗಳ ನಡುವೆ ಸಾಮರಸ್ಯದ ಸೇತುವೆ ನಿರ್ಮಿಸಲು ಪ್ರಯತ್ನಿಸಿದುದುಂಟು. ಕ್ರಮೇಣ ಒಂದು ಸಮ್ಮಿಶ್ರ ಸಂಸ್ಕೃತಿ ರೂಪುಗೊಳ್ಳುತ್ತಿತ್ತು.

ಹಿಂದೂ ಆಳಿಕೆಯನ್ನು ಎಂದೂ ಭಾರತದಿಂದ ಸಂಪೂರ್ಣವಾಗಿ ಅಳಿಸಿಹಾಕಲು ಸಾಧ್ಯವಾಗಲಿಲ್ಲ. ಮೊಗಲ್ ಸುಲ್ತಾನರ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಬಹಳ ಪ್ರಭಾವೀ ಶಕ್ತಿಯಾಗಿತ್ತು. ಇನ್ನೂ ಹಲವು ಪ್ರದೇಶಗಳಲ್ಲಿ, ಅದರಲ್ಲೂ ದಕ್ಷಿಣದಲ್ಲಿ, ಅ–ಹಿಂದೂ ಅರಸರು ಅಲ್ಲಲ್ಲೇ ಮೇಲೆದ್ದು ಸ್ವತಂತ್ರರಾದರು. ಮುಗಲರ ಕಾಲದಲ್ಲಿ ರಾಣಾ ಪ್ರತಾಪನಂತಹ ಅರಸರು ಶರಣಾಗತರಾಗಲು ನಿರಾಕರಿಸಿ ಸಡ್ಡುಹೊಡೆದು ನಿಂತರು. ಇತರರು ಅಲ್ಲಲ್ಲೇ ಹೊಂದಾಣಿಕೆ ಮಾಡಿಕೊಂಡು ಸ್ವಲ್ಪಮಟ್ಟಿನ ಆಂತರಿಕ ಸ್ವಾಯತ್ತತೆ ಅನುಭವಿಸಿದರು.

ಮುಸ್ಲಿಮರು ಎಲ್ಲ ಕಾಲಗಳಲ್ಲೂ ಮೇಲುಮಟ್ಟದಲ್ಲೇ ಇದ್ದರೇ ? ತಾತ್ವಿಕವಾಗಿ ಹೇಳುವುದಾದರೆ ಮುಸ್ಲಿಮರೆಲ್ಲರೂ ಇಸ್ಲಾಮಿಕ್ ರಾಷ್ಟ್ರದ ಪ್ರಜೆಗಳಾಗಿದ್ದರು; ಇತರ ಧರ್ಮಗಳ ಅನುಯಾಯಿಗಳು ಇದಕ್ಕೆ ಸೇರಿರಲಿಲ್ಲ. ಆದರೆ ಮುಸ್ಲಿಂ ಸಮಾಜದ ಒಳಗೆಯೇ ಆಂತರಿಕ ವಿಭೇದವಿದ್ದಿತು. ಉದಾಹರಣೆಗೆ ನೋಡಿ, ಅಶ್ರಫ್ (ವಿದೇಶೀ ಮೂಲದ ವರ್ಗಗಳ ವಂಶಿಕರು) ಮತ್ತು ಅಜ್ಲಫ್ (ಕೆಳಮಟ್ಟದ ಹಿಂದು ಜಾತಿಗಳಿಂದ ಮತಾಂತರಗೊಂಡು ಮುಸ್ಲಿಮರಾದವರು) ಇವರ ನಡುವೆ ಇದ್ದ ಭಿನ್ನತೆ. ಅಜ್ಲಫರಿಗೆ ಕೆಳಮಟ್ಟದ ಸಾಮಾಜಿಕ ಸ್ಥಾನಮಾನವಿದ್ದುದು ನಿಸ್ಸಂದೇಹ. ನಾವು ಮುಂದೆ ನೋಡುವಂತೆ, ಕೆಳವರ್ಗದ ಅನೇಕ ಜನರು ಇಸ್ಲಾಮಿಗೆ ಮತಾಂತರಗೊಂಡಿದ್ದರೂ ಸಮಾಜದಲ್ಲಿ ಹೆಚ್ಚು ಕಡಮೆ ಹಿಂದಿನದೇ ಸ್ಥಾನಗಳನ್ನು ಉಳಿಸಿಕೊಂಡಿದ್ದರು. ಕೆಲವು ಹಿಂದೂಗಳು ರಾಜಾಸ್ಥಾನಗಳಲ್ಲಿ ಒಳ್ಳೆಯ ಹುದ್ದೆಗಳಲ್ಲಿದ್ದರು. ಸೈನ್ಯದಲ್ಲಿ ದಂಡನಾಯಕರೂ ಆಗಿದ್ದುದುಂಟು. ಹಿಂದೂ ಮತ್ತು ಮುಸ್ಲಿಂ ಶ್ರೀಮಂತವರ್ಗದಲ್ಲಿ ಈ ಅನ್ಯೋನ್ಯ ಪ್ರಕ್ರಿಯೆ ಹೆಚ್ಚು ನಿಕಟವಾಗಿತ್ತು. ಬಡವರಿಗಾದರೆ ಆಡಳಿತ

ನಡೆಸುತ್ತಿರುವ ಜನಾಂಗದ ಧರ್ಮಕ್ಕೆ ಸೇರಿದ್ದೇವೆ ಎಂಬ ಮಾನಸಿಕ ತೃಪ್ತಿ ಮಾತ್ರ. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಅವರು ಹಿಂದುಳಿದೇ ಇದ್ದರು. ಶೋಷಣೆ ಮುಂದುವರಿದೇ ಇತ್ತು.

ಭಾರತದ ಮುಸ್ಲಿಂ ಅರಸರಿಗೆ ಜಾತೀಯ ಸಾಮರಸ್ಯದ ಬೆಲೆ ಗೊತ್ತಿತ್ತು. ಅಂತರ್ಜಾತೀಯ ಸಹಿಷ್ಣುತೆ ಮತ್ತು ಪರಸ್ಪರ ಅರಿವುಗಳ ಮಹತ್ವವನ್ನು ಅವರು ಅರ್ಥ ಮಾಡಿಕೊಂಡಿದ್ದರು. ಬಾಬರನು ತನ್ನ ಮಗ ಹುಮಾಯೂನನಿಗೆ ಬರೆದ ಖಾಸಗಿ ಉಯಿಲಿನಲ್ಲಿ ಏನು ಹೇಳಿದ್ದಾನೆ ನೋಡಿ:

"ಮಗು, ಭಾರತದಲ್ಲಿ ಬೇಕಾದಷ್ಟು ಧರ್ಮಗಳಿಗೆ ಸೇರಿದ ಜನರಿದ್ದಾರೆ. ಪರಮೋನ್ನತ ಚಕ್ರವರ್ತಿಯಾದ ಭಗವಂತನು ಈ ದೇಶವನ್ನು ಆಳುವ ಅವಕಾಶವನ್ನು ನಿನಗೆ ಒದಗಿಸಿರುವುದಕ್ಕಾಗಿ ನೀನು ಅವನಿಗೆ ಕೃತಜ್ಞನಾಗಿರಬೇಕು. ಆದ್ದರಿಂದ ನೀನು ಈ ಅಂಶಗಳನ್ನು ಕಡ್ಡಾಯವಾಗಿ ಪಾಲಿಸಬೇಕು.

1. "ಧಾರ್ಮಿಕ ಪೂರ್ವಗ್ರಹಗಳು ನಿನ್ನ ಮನಸ್ಸನ್ನು ಕದಡದಿರಲಿ. ಪಕ್ಷಪಾತವಿಲ್ಲದಂತೆ ನ್ಯಾಯವಿತರಣೆ ಮಾಡು. ಎಲ್ಲ ಜನವರ್ಗಗಳ ಸೂಕ್ಷ್ಮ ಸಂವೇದನೆಗಳಿಗೂ, ಧಾರ್ಮಿಕಾಚರಣೆಗಳಿಗೂ ಸೂಕ್ತ ಗೌರವ ಕೊಡು.
2. "ನಿರ್ದಿಷ್ಟವಾಗಿ ಹೇಳಬೇಕೆಂದರೆ ಗೋವಧೆ ಮಾಡಬೇಡ. ಇದರಿಂದ ಭಾರತದ ಜನರ ಹೃದಯಗಳನ್ನು ನೀನು ಗೆಲ್ಲಬಹುದು. ಆದರಿಂದ ಅವರೊಂದಿಗೆ ನೀನು ಕೃತಜ್ಞತೆಯ ಬಂಧನಕ್ಕೆ ಒಳಪಡುವಂತಾಗುತ್ತದೆ.
3. "ಯಾವುದೇ ಧರ್ಮದ ಪೂಜಾ ಸ್ಥಾನಗಳನ್ನು ಎಂದಿಗೂ ಹಾಳುಗೆಡವಬೇಡ, ನಾಶಮಾಡಬೇಡ; ನ್ಯಾಯವನ್ನೂ, ಧರ್ಮವನ್ನೂ ಪ್ರೀತಿಸು. ರಾಜನಿಗೂ ಅವನ ಪ್ರಜೆಗಳಿಗೂ ಸಂಬಂಧ ಆತ್ಮೀಯವಾಗಲಿ. ಈ ನಾಡಿನಲ್ಲಿ ಶಾಂತಿ, ತೃಪ್ತಿ ನೆಲೆಗೊಳ್ಳಲಿ.
4. "ಇಸ್ಲಾಮಿನ ಪ್ರಸಾರವನ್ನು ಪ್ರೇಮ ಮತ್ತು ದಾಕ್ಷಿಣ್ಯಗಳ ಖಡ್ಗದಿಂದ ಮಾಡುವುದು ಉತ್ತಮ, ದಮನಕಾರಿಯಾದ ಖಡ್ಗದಿಂದಲ್ಲ.
5. "ಷಿಯಾಗಳಿಗೂ, ಸುನ್ನಿಗಳಿಗೂ ಇರುವ ಪರಸ್ಪರ ಭಿನ್ನತೆಯನ್ನೂ, ಅಂತಃಕಲಹವನ್ನೂ ಅಲಕ್ಷಿಸು. ಇಲ್ಲದೇ ಹೋದರೆ ಅವರು ಇಸ್ಲಾಮಿನ ದೌರ್ಬಲ್ಯಕ್ಕೆ ಕಾರಣರಾಗಿಬಿಡುತ್ತಾರೆ.
6. "ನಿನ್ನ ಪ್ರಜೆಗಳ ವಿಶಿಷ್ಟ, ವಿಚಿತ್ರ ವರ್ತನೆಗಳನ್ನು, ವರ್ಷದ ವಿಭಿನ್ನ ಋತುಮಾನಗಳನ್ನು ಹೇಗೋ ಹಾಗೆ ಸಹಿಸು. ಆದರಿಂದ ರಾಜ್ಯವು ರೋಗಮುಕ್ತವಾಗಿ ಉಳಿಯುತ್ತದೆ."

ಮಧ್ಯ ಏಷ್ಯಾದಿಂದ ಬಂದವರಲ್ಲದೆ ಇನ್ನೂ ಇತರ ವಿದೇಶೀ ಶಕ್ತಿಗಳು ಭಾರತಕ್ಕೆ ಬಂದುವು. ಪೋರ್ಚುಗೀಸರು 1499ರಲ್ಲಿ ಭಾರತದ ಜಲಭಾಗಕ್ಕೆ ನೌಕಾಶಕ್ತಿಯಾಗಿ ಕಾಲಿಟ್ಟರು. ಪಶ್ಚಿಮ ಕರಾವಳಿಯಲ್ಲಿ ಅವರು ಸಣ್ಣ ಪುಟ್ಟ ರಾಜ್ಯಗಳನ್ನು ನಿರ್ಮಿಸಿಕೊಂಡರು. ಸಾಗರೋತ್ತರ ವಾಣಿಜ್ಯದ ಬಹುಭಾಗ ಅವರದೇ ಆಗಿತ್ತು. ಹದಿನೇಳನೆಯ ಶತಮಾನದ ಪ್ರಾರಂಭದಲ್ಲಿ ಡಚ್ ಮತ್ತು ಇಂಗ್ಲಿಷ್ ಜನರು ಒಬ್ಬರ

ಹಿಂದೊಬ್ಬರು ಬಂದರು. ಅವರ ಬೆನ್ನಿಗೇ ಫ್ರೆಂಚರು ಬಂದರು. ಅನೇಕ ಕಾರಣಗಳಿಂದ ಡಚ್ಚರು ಪೂರ್ವದಿಕ್ಕಿಗೆ ಸರಿದರು. ಇಂಡೋನೇಶಿಯಾದಲ್ಲಿ ನೆಲೆಗೊಂಡರು. 1641ರಲ್ಲಿ ಮಲಕ್ಕಾ– ಈಗಿನ ಮಲೇಶಿಯಾ–ವನ್ನೂ 1654ರಲ್ಲಿ ಸಿಲೋನನ್ನೂ (ಈಗಿನ ಶ್ರೀಲಂಕಾ) ಗೆದ್ದುಕೊಂಡರು. ಇಂಗ್ಲಿಷ್‌ರಾದರೋ ಭಾರತದಲ್ಲಿ ನೆಲೆಯೂರಿದರು. ಒಂದಲ್ಲ ಒಂದು ಸ್ಥಾನದಿಂದ 1947ಆಗಸ್ಟ್ 14ರ ವರೆಗೂ ಇಲ್ಲಿ ನೆಲೆಸಿದರು. ಇದಕ್ಕೆ ಹೋಲಿಸಿದರೆ ಫ್ರೆಂಚರ ಮಧ್ಯಪ್ರವೇಶ ಅಲ್ಪಕಾಲಿಕವಾದುದಾಗಿತ್ತು, ಅದರ ಪ್ರಭಾವವೂ ಸೀಮಿತವಾಗಿತ್ತು.

ಪೋರ್ಚುಗೀಸರು ಆಡಳಿತದಲ್ಲಾಗಲಿ ರಾಷ್ಟ್ರ ನಿರ್ಮಾಣ ಕಾರ್ಯದಲ್ಲಾಗಲಿ ಪರಿಣತರಾಗಿರಲಿಲ್ಲ. ತಮ್ಮ ವಸಾಹತಿನಲ್ಲಿದ್ದ ಜನರ ಧರ್ಮ, ಪಾಕವಿಧಾನ, ಸಂಗೀತ, ಉತ್ಸವಗಳು ಇವುಗಳ ಮೇಲೆ ಸ್ವಲ್ಪಮಟ್ಟಿಗೆ ಪ್ರಭಾವ ಬೀರಿದುದೇನೋ ನಿಜ. ಗೋವೆಯ ಸಾಂಸ್ಕೃತಿಕ ಸ್ವರೂಪವನ್ನು ನಿರ್ಮಿಸುವುದರಲ್ಲಿ ಅವರದೂ ಒಂದು ಕೈ ಇತ್ತು. ಗೋವನ್ನರು ರಚನಾತ್ಮಕವಾಗಿ ಇವರ ಅಂಶಗಳನ್ನು ಅಳವಡಿಸಿಕೊಂಡರು ಎಂಬುದೂ ನಿಜ. ಫ್ರೆಂಚ್ ಪ್ರಭಾವವು ಅವರ ಅಂಕೆಯಲ್ಲಿದ್ದ ಪುಟ್ಟ ಪ್ರದೇಶಗಳಿಗಷ್ಟೇ ಸೀಮಿತವಾಗಿದ್ದಿತು. ಇಂಗ್ಲಿಷ್‌ರ ಪ್ರಭಾವ ಬಹು ದೊಡ್ಡದು, ನೇತ್ಯಾತ್ಮಕವಾಗಿಯೂ ಇತ್ಯಾತ್ಮಕವಾಗಿಯೂ ಅದು ತುಂಬ ಗಮನಾರ್ಹವಾಗಿದ್ದಿತು. ಮೊದಮೊದಲು ದೇಶೀಯರೊಂದಿಗೆ ಅವರು ಸ್ನೇಹ ಬೆಳೆಸಿದರು. ಕೆಲವರು ಭಾರತೀಯ ಶ್ರೀಮಂತರೊಡನೆ ಸ್ಪರ್ಧಿಸಿ ನವಾಬರೆನಿಸಿದರು. ನಾಚ್ ಹುಡುಗಿಯರನ್ನು ಪೋಷಿಸಿದರು. ಭಾರತೀಯ ವೇಶ್ಯೆರನ್ನು ಇಟ್ಟುಕೊಂಡರು. ಆಮೇಲೆ ಅವರು ತಮಗೇ ಪ್ರತ್ಯೇಕವಾದ ವಸತಿಗಳಲ್ಲಿ ಇದ್ದುಕೊಂಡು, ಕಂಟೋನ್ಮೆಂಟುಗಳಲ್ಲಿ, ಕ್ಲಬ್‌ಗಳಲ್ಲಿ ವ್ಯವಹರಿಸಬೇಕೆಂದು ಆದೇಶಿಸಲಾಯಿತು. ಅವರು ದೇಶೀಯರೊಂದಿಗೆ ವರ್ತಿಸುತ್ತಿದ್ದ ರೀತಿ ಭಾವನಾತ್ಮಕವಾದುದಾಗಿತ್ತು. ಆದರೆ ಯಾವಾಗ ಇಲ್ಲಿ ಅವರ ಶಕ್ತಿ ಮೇಲುಗೈ ಪಡೆಯಿತೋ, ಆಗ ಅವರ ಅರ್ಥನೀತಿ ಶೋಷಕ ಸ್ವರೂಪದ್ದಾಯಿತು; ದೇಶದ ಸಂಪತ್ತನ್ನು ಸೂರೆಹೊಡೆಯುವಂಥದಾಯಿತು. ಭಾರತೀಯ ಕುಶಲ ಕಲೆಗಳಿಗೆ ಭಾರೀ ಪೆಟ್ಟು ಬಿದ್ದಿತು. ಇಂಗ್ಲಿಷರು ಹೊಸತೊಂದು ಶ್ರೀಮಂತ ವರ್ಗವನ್ನೇ ನಿರ್ಮಿಸಿದರು. ಜೊತೆಗೆ ಸಿವಿಲ್ ಸರ್ವಿಸಿನ ಕೆಳ ಮತ್ತು ಮಧ್ಯಮ ಸ್ತರದ ಅಧಿಕಾರಿಗಳನ್ನು ರೂಪಿಸಿದರು. ಅವರು ತಮಗೆ ಸದಾ ವಿಧೇಯರಾಗಿರುವಂತೆ ಮಾಡಿದರು. ಅವರನ್ನು ಸಂತುಷ್ಟರಾಗಿರಿಸಲು ಪದವಿಗಳು, ಗೌರವಗಳು, ಪುರಸ್ಕಾರಗಳು, ಸನ್ನದುಗಳು ರೂಪುಗೊಂಡುವು. ಥಗೀ (ಕೊರಳಕೊಯ್ಯುವಿಕೆ) ಅಥವಾ ಸತೀ ಪದ್ಧತಿಯಂತಹ ಕ್ರೂರ ಆಚರಣೆಗಳನ್ನು ನಿಷೇಧಿಸುವಂತಹ ಸಂದರ್ಭಗಳನ್ನು ಬಿಟ್ಟರೆ ಮಿಕ್ಕಂತೆ ಸ್ಥಳೀಯ ಆಚಾರ, ವ್ಯವಹಾರಗಳಲ್ಲಿ ಅವರು ತಲೆ ಹಾಕಲಿಲ್ಲ. ಸಮಾನವಾದ ಆಡಳಿತ ವ್ಯವಸ್ಥೆ, ಸಿವಿಲ್ ಪ್ರೊಸೀಜರ್ ಕೋಡ್, ಪೀನಲ್ ಕೋಡುಗಳು, ರೈಲು ಹಾದಿಗಳ ನಿರ್ಮಾಣ ಇವುಗಳಿಂದ ಅವರು ದೇಶವನ್ನು ಒಗ್ಗೂಡಿಸಿದರು. ಈ ವಿದೇಶೀ ಆಡಳಿತಕ್ಕೆ ಪ್ರತಿಸ್ಪಂದಿಸಿದ ಭಾರತೀಯರು ಒಂದು

ಹೊಸ ರೂಪವನ್ನು ತಳೆದರು. ಭಾರತೀಯ ಪುನರುತ್ಥಾನಕ್ಕೆ ಅಗತ್ಯವಾದ ಮೂಲ ಪ್ರೇರಣೆಗಳನ್ನು ಒದಗಿಸಿದರು. ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿದ ಬುದ್ಧಿಜೀವಿ ವರ್ಗವು ಮೊದಲಿಗೆ ಬ್ರಿಟಿಷ್ ಆಡಳಿತಕ್ಕೆ ಪರಮ ವಿಧೇಯವಾದ ವರ್ಗವಾಗಿದ್ದುದು ಕ್ರಮೇಣ ಹೊಸ ನಿಲುವುಗಳನ್ನು ಪಡೆಯಿತು. ಬ್ರಿಟಿಷರ ದುರಾಡಳಿತ ದೌರ್ಜನ್ಯಗಳನ್ನು ಟೀಕಿಸತೊಡಗಿತು. ಸ್ವಾತಂತ್ರ್ಯ ಸಾಧನೆಗೆ ಒಂದು ಆಂದೋಲನವನ್ನು ಪ್ರಾರಂಭಿಸಿತು. ಭಾರತೀಯ ಸಮಾಜವೂ ಕೂಡ ತನ್ನ ದೌರ್ಬಲ್ಯಗಳನ್ನೂ, ದೋಷಗಳನ್ನೂ ಅರಿತುಕೊಳ್ಳತೊಡಗಿತು. ವಿದೇಶೀ ಆಳಿಕೆಗೆ ಪ್ರತಿಸ್ಪಂದಿಸುತ್ತಾ ಭಾರತೀಯ ಸಮಾಜವು ಸುಧಾರಣೆ ಮತ್ತು ಸಾಮಾಜಿಕ ಪರಿವರ್ತನೆಗೆ ಹೊಸ ಹೊಸ ಪ್ರೇರಣೆಗಳನ್ನು ಹುಟ್ಟು ಹಾಕಿತು.

# ವಿವಿಧತೆ ಮತ್ತು ಏಕತೆ

ಭಾರತಕ್ಕೆ ಸಂಬಂಧಿಸಿದಂತೆ ಅನೇಕ ವೇಳೆ ಗಮನಿಸಿರುವ ಒಂದು ಅಂಶ ಅದರ ವಿವಿಧತೆಯಲ್ಲಿನ ಏಕತೆ. ಬಳಸಿ ಬಳಸಿ ಕ್ಲೀಷೆಯಾಗಿರುವ ಇದು ಭಾರತದ ಸ್ವರೂಪದ ಒಂದು ಭಾಗವೇ ಆಗಿಬಿಟ್ಟಿದೆ. ಹಿಂದೆ ವಿದೇಶಗಳಿಂದ ಇಲ್ಲಿಗೆ ಬಂದ ಪ್ರವಾಸಿಗರು ಮೆಗಾಸ್ತನೀಸ್ (ಸು. ಕ್ರಿ.ಪೂ. 315),ಫಾಹಿಯಾನ್ (ಕ್ರಿ.ಶ. 405–11), ಹ್ಯೂಯೆನ್‌ತ್ಸಾಂಗ್ (ಕ್ರಿ.ಶ. 630–44), ಅಲ್ಬೆರೂನಿ (ಕ್ರಿ.ಶ. 1030), ಮಾರ್ಕೊಪೋಲೋ (ಕ್ರಿ.ಶ. 1288–93) ಮತ್ತು ಇಬ್ನ್ ಬತೂತಾ ಇವರು ಈ ಅಂಶವನ್ನು ಗಮನಿಸಿ ದಾಖಲಿಸಿದರು. 1947ರಲ್ಲಿ ಭಾರತ ವಿಭಜನೆಗೊಂಡಾಗ ಸಿಂಧೂ ಕಣಿವೆ ನಾಗರಿಕತೆಯ ಅತ್ಯಂತ ಪ್ರಖ್ಯಾತವಾದ ನಿವೇಶನಗಳು ಭಾರತದ ಕೈತಪ್ಪಿ ಹೋದುವು. ಪ್ರಾಚೀನ ಇಂಡೋ–ಆರ್ಯನರ ಸಂಬಂಧ ಹೊಂದಿದ್ದ ಪಂಚನದ ಪ್ರದೇಶದ ಬಹುಭಾಗವೂ ಹೊರಟುಹೋಯಿತು. ಭೂತಕಾಲದ ವಾಸ್ತವತೆಯಾಗಿಯೂ, ಭವಿಷ್ಯತ್ತಿನ ಆಶೆಯಾಗಿಯೂ ಈ ವಿಷಯವನ್ನು ಎಲ್ಲರೂ ಹೇಳುತ್ತಾ ಬಂದಿದ್ದಾರೆ. ಹತ್ತೊಂಬತ್ತು ನೂರ ಅರವತ್ತು – ಎಪ್ಪತ್ತರ ವರ್ಷಗಳಲ್ಲಿ ಕೇಳಿಬಂದ ಗುಡುಗು, ಎಂಬತ್ತರ ವರ್ಷಗಳಲ್ಲಿ ಕಂಡ ಕ್ಷೋಭೆ (ಮೊದಲು ಈಶಾನ್ಯಭಾಗದಲ್ಲಿ, ಅನಂತರ ತಾತ್ಕಾಲಿಕವಾಗಿ ತಮಿಳುನಾಡಿನಲ್ಲಿ, ಅದೇ ದಶಕದಲ್ಲಿ ಪಂಜಾಬ್, ಈಶಾನ್ಯ ಪ್ರದೇಶ, ಅಸ್ಸಾಂ 'ಗೋರ್ಖಾಲ್ಯಾಂಡ್', 'ಜಾರ್ಖಂಡ್' ಮತ್ತು ಇತರ ಪ್ರದೇಶಗಳಲ್ಲಿ) ಭಾರತದ ಸಾಂಸ್ಕೃತಿಕ ವೈವಿಧ್ಯವನ್ನು ಉಳಿಸಿಕೊಳ್ಳಬೇಕಾದ ಅಗತ್ಯವನ್ನು ಒತ್ತಿ ಹೇಳುತ್ತಿವೆ. ವಿವಿಧ ಕುಲವರ್ಗಗಳು ಮತ್ತು ಸಮುದಾಯಗಳ ವೈಯಕ್ತಿಕ ವಿಶಿಷ್ಟ ಲಕ್ಷಣಗಳು ಸವೆದು ಅಳಿಸಿಹೋಗದ ಹಾಗೆ ಖಚಿತಪಡಿಸಿಕೊಳ್ಳುವ ಅಗತ್ಯವನ್ನು ಸಾರಿವೆ. ಹೀಗೆ ಸಾಂಸ್ಕೃತಿಕ ಬಹುತ್ವವನ್ನು ಒಪ್ಪಿಕೊಳ್ಳುವುದರಿಂದ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸಂಯೋಜಕತೆ ಸಾಮರಸ್ಯಗಳನ್ನು ಪೋಷಿಸುವ ಆದರ್ಶಕ್ಕೆ ಧಕ್ಕೆಯೇನೂ ಉಂಟಾಗುವುದಿಲ್ಲ.

ವೈವಿಧ್ಯದ ಮೂಲಗಳು ಯಾವುವು ? ಅತ್ಯಂತ ಸ್ಪಷ್ಟವಾಗಿ ಕಾಣುವ ಮೂಲಗಳೆಂದರೆ, ಕುಲ, ಧರ್ಮ ಮತ್ತು ಭಾಷಾ ಮೂಲಗಳು. ಒಟ್ಟು ಆರು ಮುಖ್ಯ ಜನಾಂಗಗಳನ್ನು ಮೊದಲನೆಯ ಅಧ್ಯಾಯದಲ್ಲಿ ಸಂಗ್ರಹವಾಗಿ ಚರ್ಚಿಸಿದ್ದಾಗಿದೆ. ಭಾರತ ಜನಸ್ತೋಮದ ಬಹುಭಾಗವು ವಿವಿಧ ಹಂತದ ಜನಾಂಗಿಕ

ಮಿಶ್ರಣವನ್ನು ಪ್ರತಿನಿಧಿಸುತ್ತದೆ ಎಂಬುದನ್ನು ನೆನಪಿನಲ್ಲಿಡಬೇಕು. ಜನಾಂಗ ಮೂಲಗಳು, ಅವೆಷ್ಟೇ ನವುರಾಗಿದ್ದರೂ ಬಹುತೇಕ ಸಮುದಾಯಗಳಲ್ಲಿ ಕುಲಸಂಬಂಧಿಯಾದ ನೆನಪುಗಳ ಭಾಗವಾಗಿರುತ್ತವೆ. ಇವು ಅವರ ವಿಶಿಷ್ಟತೆಯನ್ನೂ ವ್ಯಕ್ತಿತ್ವ ಚಿತ್ರಣವನ್ನೂ ರೂಪಿಸುವುದರಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಆರ್ಯ ಅಥವಾ ದ್ರಾವಿಡ ಜನಾಂಗ ಎಂದು ಹೇಳುವುದು ತಪ್ಪು. ಏಕೆಂದರೆ ಈ ಪದಗಳನ್ನು ಭಾಷಿಕ ಕುಟುಂಬಗಳಿಗೆ ಮಾತ್ರ ಅನ್ವಯಿಸಬಹುದು; ಆದರೆ ಅವು ಎಷ್ಟುಮಟ್ಟಿಗೆ ಚಾಲ್ತಿಯಲ್ಲಿ ಬಂದುಬಿಟ್ಟಿವೆಯೆಂದರೆ ಅವುಗಳನ್ನು ನಿರಾಕರಿಸುವುದು ಶೈಕ್ಷಣಿಕ ತೋರಿಕೆಯಾಗುತ್ತದೆ.

ಧಾರ್ಮಿಕವಾದ ಗಡಿರೇಖೆಗಳನ್ನು ಇನ್ನೂ ಸ್ಪಷ್ಟವಾಗಿ ಎಳೆಯಲಾಗಿದೆ. ಭಾರತದಲ್ಲಿ ಎಂಟು ಮುಖ್ಯ ಧಾರ್ಮಿಕ ಸಮುದಾಯಗಳಿವೆ: ಹಿಂದೂಗಳು (ಶೇ. 82.7– ಇವರಲ್ಲಿ ಗಣನೀಯವಾದ ಭಾಗ, ಸುಮಾರಾಗಿ ಶೇ. 16 ಅನುಸೂಚಿತ ಜಾತಿಗಳು), ಮುಸ್ಲಿಮರು (ಶೇ. 11.8), ಕ್ರಿಶ್ಚಿಯನರು (ಶೇ. 2.6), ಸಿಖ್ಖರು (ಶೇ. 2), ಬೌದ್ಧರು (ಶೇ. 0.7), ಜೈನರು (ಶೇ. 0.4), ಜೊರಾಸ್ಟ್ರಿಯನರು (ಶೇ. 0.3), ಮತ್ತು ಯಹೂದ್ಯರು (0.1), ಮೂಲನಿವಾಸಿ ಬುಡಕಟ್ಟುಗಳು (ಶೇ. 6.9). ಇವರಲ್ಲಿ ಅನೇಕರು ಹಿಂದುಗಳೊಡನೆ ಸಂಬಂಧ ಹೊಂದಿದ್ದಾರೆ. ಗಣನೀಯ ಪ್ರಮಾಣದವರು ಕ್ರೈಸ್ತಧರ್ಮಕ್ಕೆ ಮತಾಂತರಗೊಂಡಿದ್ದಾರೆ. ಕೆಲವರು ಇಸ್ಲಾಂ ಧರ್ಮವನ್ನು ಅಂಗೀಕರಿಸಿದ್ದಾರೆ. ಆದರೆ ಅವರಲ್ಲಿ ಬಹುಪಾಲು ಜನರು ತಮ್ಮ ಬುಡಕಟ್ಟಿನ ವಿಶಿಷ್ಟ ಲಕ್ಷಣಗಳನ್ನು ಇನ್ನೂ ಉಳಿಸಿಕೊಂಡಿದ್ದಾರೆ. ಅನೇಕ ಬುಡಕಟ್ಟುಗಳನ್ನು ಹಿಂದೂ ಧರ್ಮವು ತನ್ನಲ್ಲಿ ಸೇರಿಸಿಕೊಂಡುಬಿಟ್ಟಿದೆ. ಕೆಲವು ಅ–ಹಿಂದೂ ಸಮುದಾಯಗಳು ತಮ್ಮ ಮುಂಚಿನ ಹಿಂದೂ ಅವಶೇಷಗಳನ್ನು ಪ್ರದರ್ಶಿಸುತ್ತವೆ. ಪ್ರತಿಯೊಂದು ಮುಖ್ಯ ಧರ್ಮದಲ್ಲೂ ಧಾರ್ಮಿಕ ಸಿದ್ಧಾಂತಗಳು, ಪಂಗಡ ಪಂಥಗಳ ಪ್ರಕಾರ ಹಲವು ಉಪ ವಿಭಾಗಗಳಾಗಿವೆ. ಇದು ದೇಶೀಯವಾದ ಹಿಂದೂ, ಸಿಖ್, ಬೌದ್ಧ ಮತ್ತು ಜೈನಧರ್ಮಗಳಿಗೂ ಸಮಾನವಾಗೇ ಅನ್ವಯವಾಗುತ್ತದೆ. ಹಿಂದೂಗಳನ್ನು ಮುಖ್ಯವಾಗಿ ಶೈವ (ಶಿವನ ಆರಾಧಕರು), ವೈಷ್ಣವ (ವಿಷ್ಣು ಮತ್ತು ಅವನ ಅವತಾರಗಳ ಪೂಜಕರು), ಶಾಕ್ತ (ಮಾತೃ ದೇವತೆಯ ವಿವಿಧ ರೂಪಗಳ ಆರಾಧನೆ ಮಾಡುವವರು) ಮತ್ತು ಸ್ಮಾರ್ತ (ಶಿವ, ವಿಷ್ಣು ದೇವಿ ಈ ಮೂರು ರೂಪಗಳನ್ನೂ ಪೂಜಿಸುವವರು) – ಎಂದು ವರ್ಗೀಕರಿಸಲಾಗಿದೆ. ಇವರಲ್ಲೂ ಸೈದ್ಧಾಂತಿಕ ಭಿನ್ನತೆಗಳು ಮತ್ತು ಆಚರಣಾ ವಿವರಗಳ ದೃಷ್ಟಿಯಿಂದ ಮತ್ತೆ ಉಪವಿಭಾಗಗಳನ್ನಾಗಿ ಒಡೆಯಬಹುದಾಗಿದೆ. ವಿವಿಧ ಪಂಥ ಪಂಗಡಗಳು ಹಿಂದೂಧರ್ಮದ ಸಂಕೀರ್ಣ ಸ್ವರೂಪಕ್ಕೆ ಇನ್ನಷ್ಟು ಕೂಡಿಸಿವೆ. ಕೆಲವು ಉದಾಹರಣೆಗಳನ್ನು ನೋಡುವುದಾದರೆ, ಕಬೀರ ಪಂಥಿ, ಸತ್ನಾಮಿ, ಮತ್ತು ಲಿಂಗಾಯತ ಈ ಪಂಗಡಗಳು ಅವರು ಹೇಳಿಕೊಳ್ಳುವಂತೆ ಪ್ರತ್ಯೇಕ ಧರ್ಮಗಳಾಗಿವೆಯೋ ? ಅಥವಾ ಹಿಂದೂ ಧರ್ಮದ ಚೌಕಟ್ಟಿನೊಳಗೇ ಬೇರೆ ಬೇರೆ ಜಾತಿಗಳಂತೆ ರೂಪುಗೊಂಡ ಪ್ರತ್ಯೇಕ ರಚನೆಗಳೋ ? ಬ್ರಹ್ಮ ಸಮಾಜ ಮತ್ತು ಆರ್ಯಸಮಾಜಗಳು ಒಂದು ಕಾಲದಲ್ಲಿ ಪ್ರತ್ಯೇಕತೆಯನ್ನು

ಸಾರಿಕೊಳ್ಳುತ್ತಿದ್ದುವು. ಆದರೆ ಈಗ ಅವೂ ಹಿಂದೂ ಧರ್ಮದ ವಿಕಲ್ಪರೂಪಗಳು ಎಂದು ಭಾವಿಸಲಾಗಿದೆ. ಮುಂದೆ ಕಾಣಿಸಿಕೊಂಡ ರಾಧಾಸೋಮಿ, ಪ್ರಣಾಮಿ, ಸ್ವಾಮಿ ನಾರಾಯಣಿ ಮೊದಲಾದ ಪಂಥಗಳು ಹಿಂದೆ ಕಬೀರಪಂಥಿ ಮತ್ತು ಆರ್ಯಸಮಾಜಿಗಳು ಮಾಡುತ್ತಿದ್ದ ಹಾಗೆಯೇ ಜಾತಿ ಆಚರಣೆಗಳಿಗೆ ಅವಕಾಶ ಕೊಟ್ಟಿವೆ. ವಿಶಿಷ್ಟ, ಪರಿಣತ ಆಚರಣೆಗಳು ಮತ್ತು ನಂಬಿಕೆಗಳನ್ನು ಪಂಗಡಗಳು ಹೊಂದಿವೆ. ಎಷ್ಟೋ ಸಾರಿ ಇವು ಒಂದೇ ಒಂದು ಕುಟುಂಬಕ್ಕೆ ಅಥವಾ ಒಬ್ಬ ವ್ಯಕ್ತಿಗೆ ಸೀಮಿತವಾಗಿರುತ್ತವೆ, ಇಡೀ ಜಾತಿಗೆ ವಿಸ್ತರಿಸುವುದಿಲ್ಲ. ಇಂತಹ ಆಚರಣೆಗಳುಳ್ಳ ಪಂಗಡಗಳು ಚಿಕ್ಕದಾಗಿರುತ್ತವೆ; ರಹಸ್ಯವಾಗಿರುತ್ತವೆ. ಅಘೋರಪಂಥ, ಕಾಶ್ಮೀರಶೈವ ಮತ್ತು ಹಲವು ತಾಂತ್ರಿಕ ಪಂಥಗಳನ್ನು ಇದಕ್ಕೆ ಉದಾಹರಣೆಯಾಗಿ ಹೇಳಬಹುದು. ಇವುಗಳನ್ನು ಹಿಂದೂಧರ್ಮವು ಪ್ರೋತ್ಸಾಹಿಸದಿದ್ದರೂ ಸಹಿಸಿಕೊಂಡಿದೆ.

ಭಾರತದ ಮುಸ್ಲಿಮರನ್ನು ಸ್ಥೂಲವಾಗಿ ಸುನ್ನಿ ಮತ್ತು ಷಿಯಾ ಎಂದು ಎರಡು ಪಂಗಡಗಳನ್ನಾಗಿ ವಿಭಜಿಸಲಾಗುತ್ತದೆ. ಇವೆರಡರಲ್ಲಿ ಎರಡನೆಯದು ಚಿಕ್ಕ ಪಂಗಡ. ಆದರೆ ಇರಾನಿನಿಂದ ಹೊರಗೆ ಇರುವ ಅತಿದೊಡ್ಡ ಮುಸ್ಲಿಂ ಪಂಗಡವೆನಿಸುವಷ್ಟರ ಮಟ್ಟಿಗೆ ಇದು ದೊಡ್ಡದಾಗಿದೆ. ಮುಸ್ಲಿಂ ನ್ಯಾಯಾಂಗದ ನಾಲ್ಕು ಪಂಥಗಳಲ್ಲಿ ಭಾರತೀಯ ಸುನ್ನಿಗಳು ಹನೀಫಿ ಪಂಥವನ್ನು ಅನುಸರಿಸುತ್ತಾರೆ. ದಕ್ಷಿಣದಲ್ಲಿ, ವಿಶೇಷತಃ ಮಾಪಿಳ್ಳೆಗಳಲ್ಲಿ ಮತ್ತು ಲಕ್ಷ ದ್ವೀಪದವರಲ್ಲಿ (ಲಕ್ಕಡೀವ್) ಶಫೀ ಪಂಥವು ಆಚರಣೆಯಲ್ಲಿದೆ. ಮೂರನೆಯದಾದ ಮಲ್ಕಿ ಪಂಥವನ್ನು ಗುಜರಾತಿನ ಸುನ್ನಿಗಳು ಅನುಸರಿಸುತ್ತಾರೆ. ನಾಲ್ಕನೆಯ ಹನ್‌ಬಲೀ ಪಂಥದ ಅನುಯಾಯಿಗಳು ಭಾರತದಲ್ಲಿಲ್ಲ. ಶಿಯಾಗಳಿಗೆ ಅವರದೇ ಇಮಾಮೀ ನ್ಯಾಯಪದ್ಧತಿಯಿದೆ. ಇವರನ್ನೂ ಹನ್ನೆರಡು ಇಮಾಂಗಳ ಅನುಯಾಯಿಗಳು ಮತ್ತು ಏಳು ಇಮಾಂಗಳ ಅನುಯಾಯಿಗಳು ಎಂದು ವರ್ಗೀಕರಿಸಲಾಗಿದೆ. ಇಷ್ಟರ ಜೊತೆಗೆ ಹದಿನಾಲ್ಕು ಧಾರ್ಮಿಕ ಪಂಥಗಳಿವೆ. ಇವುಗಳಲ್ಲಿ ಚಿಷ್ಟಿ, ಸುಹ್ರವರ್ದಿ, ಶಟ್ಟರೀ, ಖಾದಿರಿ ಮತ್ತು ನಕ್ಸ್‌ಬಂದಿ ಪಂಥಗಳು ಮುಖ್ಯವಾದವುಗಳು. ವ್ಯವಸ್ಥೆಯಿಲ್ಲದ ಕೆಲವು ಪಂಥಗಳೂ ಇವೆ.

ಭಾರತೀಯ ಕ್ರಿಶ್ಚಿಯನರಲ್ಲಿ ಎರಡು ಮುಖ್ಯ ವಿಭಾಗಗಳು: ರೋಮನ್ ಕೆಥೋಲಿಕರು ಮತ್ತು ಪ್ರಾಟೆಸ್ಟೆಂಟರು. ನಿರ್ದಿಷ್ಟ ನೇಮಿತ ಚರ್ಚುಗಳು ಪಂಥಗಳಾಗಿ ವರ್ತಿಸುತ್ತಿವೆ. ಭಾರತದಲ್ಲಿ ಪ್ರಾರಂಭಕಾಲದ ಕ್ರಿಶ್ಚಿಯನರ ಕೆಲವು ಲಕ್ಷಣಗಳನ್ನು ಈಗಾಗಲೆ ಉಲ್ಲೇಖಿಸಿದ್ದಾಗಿದೆ. ಅವರಲ್ಲಿ ಜಾತಿಯಂತಹ ಕೆಲವು ಗುಂಪುಗಳು ಉಳಿದುಕೊಂಡು ಬಂದಿರುವುದನ್ನು ಮೂರನೆಯ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ.

ಸಿಖ್ ಧರ್ಮವು ಸಮಾನತೆಯನ್ನು ಒತ್ತಿ ಹೇಳುವ ಸಂಯೋಜಕ ಧರ್ಮವಾಗಿದ್ದರೂ, ಅಷ್ಟು ಪ್ರಿಯವಲ್ಲದ 'ಜಾತಿ' ಪದ್ಧತಿಯು ಕೆಲವಂಶಗಳನ್ನು ತೆಗೆದುಹಾಕಲು ಅದು ಸಮರ್ಥವಾಗಿಲ್ಲ. ನಿದರ್ಶನಕ್ಕೆ ಸಿಖ್ ಮತಕ್ಕೆ ಮತಾಂತರಗೊಂಡ ಕೆಳವರ್ಗದ ಜಾತಿಗಳವರನ್ನು ಮಳಬಿಗಳು ಎಂದು

ಕರೆಯುತ್ತಾರೆ. ಅವರು ಪ್ರತ್ಯೇಕವಾದ ಹಳ್ಳಿಗಳಲ್ಲಿ ವಾಸಿಸುತ್ತಾರೆ. ಅವರದೇ ಹಳ್ಳಿಗಳಲ್ಲಿ ಮತ್ತು ನೆರೆಹೊರೆಯ ಗ್ರಾಮಗಳಲ್ಲಿ ಯಾರೂ ಅವರನ್ನು 'ಸರ್ದಾರ್' ಎಂಬ ಗೌರವ ಸೂಚಕ ಪದವನ್ನು ಸೇರಿಸಿ ಸಂಬೋಧಿಸುವುದಿಲ್ಲ. ಆದರೆ ಅವರೂ ಇತರರ ಜೊತೆಗೆ ಸಿಖ್ ದೇವಾಲಯ (ಗುರುದ್ವಾರ) ಗಳಲ್ಲಿ ಪ್ರಾರ್ಥನೆ ಮಾಡುತ್ತಾರೆ. *ಲಾಂಗರ್* (ದೇವಾಲಯದ ಆವರಣದಲ್ಲಿರುವ ಎಲ್ಲರಿಗೂ ಆಹಾರವನ್ನು ವಿತರಿಸುವು)ದಲ್ಲಿ ಭಾಗವಹಿಸುತ್ತಾರೆ. ಅವರನ್ನು ಮುಟ್ಟಿಸಿಕೊಂಡರೆ ಮೈಲಿಗೆ ಎಂದು ಭಾವಿಸುವುದಿಲ್ಲ. ಸ್ವಯಂ ಸಿಖ್ ಆದ, ಸಿಖ್ ಇತಿಹಾಸವನ್ನು ಬರೆದ ಸುಪ್ರಸಿದ್ಧ ಲೇಖಕ ಖುಷವಂತಸಿಂಗ್, ಸಮುದಾಯದೊಳಗೆ ಸಮಾನತೆಯಿದೆಯೆಂದ ಮಾತ್ರಕ್ಕೆ, ಸಾಂಪ್ರದಾಯಿಕ, ಧಾರ್ಮಿಕ ಗಡಿಯನ್ನು ಉಲ್ಲಂಘಿಸಿ ವಿವಾಹಸಂಬಂಧ ನಡೆಯುವುದಿಲ್ಲ ಎಂದು ಅಭಿಪ್ರಾಯಪಡುತ್ತಾರೆ. ಜಾಟರು, ಕ್ಷತ್ರಿಯರು, ಬ್ರಾಹ್ಮಣರು, ಕರಕುಶಲ ಜಾತಿಗಳು ತಮ್ಮ ತಮ್ಮ ವಿಶಿಷ್ಟ ಲಕ್ಷಣಗಳನ್ನು ಇಂದಿಗೂ ಉಳಿಸಿಕೊಂಡು ಪ್ರತ್ಯೇಕವಾಗೇ ಉಳಿದಿದ್ದಾರೆ. ಸ್ವಜಾತಿ ವಿವಾಹವನ್ನು ಜಾರಿಯಲ್ಲಿಟ್ಟುಕೊಂಡಿದ್ದಾರೆ. ಅಂದರೆ ಸಾಮಾನ್ಯವಾಗಿ ಬೇರೆ ಜಾತಿಯವರಿಗೆ ತಮ್ಮ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಡುವುದಿಲ್ಲ. ಗಂಡಸರು, ಹೆಂಗಸರ ನಡುವೆ ಸಂಖ್ಯಾ ಅಸಮತೆಯಿರುವುದರಿಂದ ಮೇಲುಜಾತಿಯವರು ಕೆಳಜಾತಿಯ ಹೆಣ್ಣನ್ನು ತಂದುಕೊಳ್ಳಬಹುದು. ತಮ್ಮ ಜಾತಿಯ ಹೆಣ್ಣನ್ನು ತಮಗಿಂತ ಕೆಳಜಾತಿಗೆ ಕೊಡುವುದಿಲ್ಲ.

ಒಂದು ಕಾಲದಲ್ಲಿ ಬೌದ್ಧಧರ್ಮವು ಭಾರತದಲ್ಲಿ ವ್ಯಾಪಕವಾಗಿ ಹರಡಿತ್ತು. ವೈದಿಕ ಹಿಂದೂಧರ್ಮದ ಪುನರುತ್ಥಾನದ ಅನಂತರ ಅದು ತನ್ನ ತವರು ನಾಡಿನಲ್ಲೇ ಹಿಡಿತ ಕಳೆದುಕೊಂಡಿತು. ಅಲ್ಲಲ್ಲೇ ಬಿಡಿ ತಂಡವಾಗಿ ಉಳಿಯಿತು. ಡಾ. ಅಂಬೇಡ್ಕರ್ ಬಹುತೇಕ ಮಹರ್ ಜಾತಿಯ ಅನುಯಾಯಿಗಳ ಮೂಲಕ ಅದಕ್ಕೆ ಮತ್ತೆ ಪೋಷಣೆ ಕೊಟ್ಟಿದ್ದೇನೋ ನಿಜ. ಆದರೆ ಅವರ ಸ್ಥಾನಮಾನವನ್ನು ಉತ್ತಮಪಡಿಸಲು ಅವರು ಸಮರ್ಥರಾಗಲಿಲ್ಲ. ನವಬೌದ್ಧರು ಎಂದು ಕರೆಯಲ್ಪಡುವ ಜನರಲ್ಲಿ ಮುಚ್ಚುಮರೆಯಿಲ್ಲದೆ ಸ್ಪಷ್ಟವಾದ ಜಾತಿಗಳಿವೆ. ಭಾರತದ ಬೌದ್ಧಧರ್ಮದಲ್ಲಿ ಎರಡು ಸ್ತರದ ರಚನೆಯಿದೆ, ನಾಲ್ಕು ವರ್ಗದ ವರ್ಣ ವ್ಯವಸ್ಥೆಯಲ್ಲ. ಮೇಲಿನ ಸ್ತರದಲ್ಲಿ ಬ್ರಾಹ್ಮಣರು, ಕ್ಷತ್ರಿಯರು ಮತ್ತಿತರ ಕೆಲವು ವರ್ಗದ ಗೃಹಪತಿಗಳು ಇದ್ದರು. ಎರಡನೆಯ ಸ್ತರದಲ್ಲಿ ಆದಿವಾಸಿಗಳು ಮತ್ತು ಗುಡ್ಡಗಾಡು ಜನರಿದ್ದರು. ಹೀನಯಾನ - ಮಹಾಯಾನ ಎಂಬ ವಿಭಜನೆ ಸೈದ್ಧಾಂತಿಕ ಭಿನ್ನತೆಯಿಂದ ಆದದ್ದೇ ಹೊರತು ಸಮಾಜದ ಭಿನ್ನ ಶ್ರೇಣಿಗಳಿಗೆ ಸಂಬಂಧಿಸಿದ್ದಲ್ಲ.

ಒಮ್ಮೆ ಭಾರತದಲ್ಲಿ ಜೈನಧರ್ಮವು ವಿಸ್ತಾರವಾಗಿ ಹರಡಿಕೊಂಡಿದ್ದಿತು. ಈಗ ಈ ಧರ್ಮದ ಅನುಯಾಯಿಗಳ ಸಂಖ್ಯೆ ಚಿಕ್ಕದಾದರೂ, ಉತ್ತರ ಭಾರತ ಮತ್ತು ದಕ್ಷಿಣಗಳೆರಡರಲ್ಲೂ ಇದ್ದಾರೆ. ಇವರಲ್ಲಿ ಎರಡು ಮುಖ್ಯ ವಿಭಾಗಗಳಿವೆ: ದಿಗಂಬರ – ವಸ್ತ್ರವನ್ನು ಧರಿಸದವರು; ಮತ್ತು ಶ್ವೇತಾಂಬರ – ಬಿಳಿಯ ಬಟ್ಟೆ ಧರಿಸುವವರು. ಆಧುನಿಕ ಜೈನ ಸಮಾಜಶಾಸ್ತ್ರಜ್ಞ ಸಂಗವೆ ಅವರ ಪ್ರಕಾರ, ಜೈನ ಸಮುದಾಯದಲ್ಲಿ

ಮುಕ್ತ ವರ್ಗ ವ್ಯವಸ್ಥೆಯಿತ್ತು. ಜನರು ಒಂದು ವರ್ಗದಿಂದ ಇನ್ನೊಂದಕ್ಕೆ ತಮಗಿಷ್ಟ ಬಂದ ಹಾಗೆ ಬದಲಾಯಿಸಿಕೊಳ್ಳುತ್ತಿದ್ದರು. ಅವರಲ್ಲಿ ಅಸ್ಪೃಶ್ಯತೆಯನ್ನು ಆಚರಿಸುವುದಿಲ್ಲ. ಅಂತರ-ಭೋಜನಕ್ಕೆ ಅವಕಾಶವುಂಟು. ಆದರೂ ಜೈನರಲ್ಲಿ ಸ್ವಗೋತ್ರವಿವಾಹ ಪದ್ಧತಿಯುಳ್ಳ ಜಾತಿಗಳಿವೆ. 1314ರ ಒಂದು ದಾಖಲೆಯಲ್ಲಿ ಜೈನ ಸಮಾಜದ ಒಂದು ಶಾಖೆಯಲ್ಲಿ 87 ಜಾತಿಗಳಿದ್ದುದನ್ನು ದಾಖಲಿಸಿದೆ. ಇವುಗಳಲ್ಲಿ 41 ಜಾತಿಗಳಲ್ಲಿ 500ಕ್ಕಿಂತಲೂ ಕಡಮೆ ಜನರಿದ್ದರು. ಇನ್ನೂ ಈಚಿನ ಅಧ್ಯಯನದಲ್ಲಿ ತಲಾ ನೂರಕ್ಕೂ ಕಡಿಮೆ ಜನರಿರುವ ಸುಮಾರು ಅರವತ್ತು ಸ್ವಗೋತ್ರ ವಿವಾಹ ಕ್ರಮವುಳ್ಳ ಪಂಗಡಗಳಿದ್ದುದನ್ನು ಅಂದಾಜು ಮಾಡಲಾಗಿದೆ.

ಪಾರ್ಸಿಗಳದ್ದು ಸಣ್ಣ ಸಮುದಾಯ. ಆದರೆ ಭಾರತದ ಔದ್ಯಮಿಕ ಬೆಳವಣಿಗೆಯಲ್ಲಿ ಅವರು ವಹಿಸಿರುವ ಪಾತ್ರ ಬಹಳ ದೊಡ್ಡದು. ಅವರು ಮೊದಲು ಕ್ರಿ.ಶ. 8ನೇ ಶತಮಾನದಲ್ಲಿ ಪರ್ಷಿಯಾದಿಂದ ಭಾರತಕ್ಕೆ, ಅಲ್ಲಿ ತಮಗಾಗುತ್ತಿದ್ದ ಕಿರುಕುಳವನ್ನು ತಪ್ಪಿಸಿಕೊಳ್ಳಲು ಬಂದರು. ಪಶ್ಚಿಮ ಕರಾವಳಿಯಲ್ಲಿ ಬಂದಿಳಿದ ಮೇಲೆ ಅವರು ಸ್ಥಳೀಯ ಅರಸ ಹಾಗೂ ಗಣ್ಯವ್ಯಕ್ತಿಗಳೊಂದಿಗೆ ಸಭೆ ನಡೆಸಿದರು. ಮಾತಾಡುತ್ತಿದ್ದಾಗಲೇ ಪಾರ್ಸಿತಂಡದ ಮುಖ್ಯಸ್ಥನು ತಮ್ಮ ಅತಿಥೇಯರನ್ನು ಒಂದು ಬಟ್ಟಲು ಹಾಲನ್ನೂ ಸ್ವಲ್ಪ ಸಕ್ಕರೆಯನ್ನೂ ತರಿಸಿಕೊಡಲು ಕೇಳಿದನು. ತಂದಾಗ ಅವನು ಸಕ್ಕರೆಯನ್ನು ಹಾಲಿಗೆ ಬೆರೆಸಿ ಚೆನ್ನಾಗಿ ಕಲಕಿದನು. ಆಗ ಅವನು ಹೇಳಿದನಂತೆ: "ಸಕ್ಕರೆಯು ಹಾಲಿನೊಂದಿಗೆ ಬೆರೆತು ಹೇಗೆ ಅದಕ್ಕೆ ಸಿಹಿಯನ್ನು ನೀಡಿದೆಯೋ, ಹಾಗೆ ನಾವು ನಿಮ್ಮೊಂದಿಗೆ ಬೆರೆಯುತ್ತೇವೆ. ಪರಿಣಾಮವು ಸಿಹಿಯಾಗಿರುತ್ತದೆ." ಅದು ನಡೆದದ್ದೂ ಹಾಗೆಯೇ. ಭಾರತಕ್ಕೆ ಅವರು ನೀಡಿದ ಮಹತ್ತರ ಕೊಡುಗೆಗೂ ಅವರ ಸಂಖ್ಯೆಗೂ ಸಂಬಂಧವೇ ಕಾಣುವುದಿಲ್ಲ, ಅಷ್ಟು ದೊಡ್ಡ ಕೊಡುಗೆಯದು. ಧಾರ್ಮಿಕ ಆಚರಣೆಗಳನ್ನು ಹೊರತುಪಡಿಸಿ ಮಿಕ್ಕಂತೆ ಅವರು ತಮ್ಮ ಪ್ರದೇಶದ ವಣಿಕ ಜನಾಂಗದ ಜೀವನ ವಿಧಾನಗಳನ್ನು ಸಂಪೂರ್ಣವಾಗಿ ಅಳವಡಿಸಿಕೊಂಡರು. 'ಅವರಲ್ಲಿ ಪರಂಪರೆಯಿಂದ ಪುರೋಹಿತರಾಗಿ ಬಂದವರು ಮಾತ್ರ ತಮ್ಮ ತಮ್ಮಲ್ಲೇ ವಿವಾಹ ಸಂಬಂಧವನ್ನು ಬೆಳೆಸುತ್ತಾರೆ; ಪುರೋಹಿತರಲ್ಲದ ಇತರ ಪಾರ್ಸಿಗಳೊಂದಿಗೆ ವಿವಾಹ ನಡೆಸಲು ಮಾಡಿದ ಪ್ರಯತ್ನಗಳಿಗೆ ಹದಿನೆಂಟನೆಯ ಶತಮಾನದಲ್ಲಿ ವಿಪರೀತ ಪ್ರತಿಭಟನೆಯುಂಟಾಯಿತು.

ಜ್ಯೂ ಅಥವಾ ಯಹೂದ್ಯ ಧರ್ಮವು ಕ್ರೈಸ್ತ ಮತ್ತು ಜೊರಾಸ್ಟ್ರಿಯನ್ ಧರ್ಮದಂತೆಯೇ ಭಾರತದಲ್ಲಿ ಸಾವಿರ ವರ್ಷಗಳಿಗಿಂತಲೂ ಹಿಂದಿನಿಂದ ಸ್ಥಾಪಿತವಾಗಿರುವ ಧರ್ಮ. ಸಂಖ್ಯೆಯಲ್ಲಿ ಅಲ್ಪವಾಗಿರುವ ಯಹೂದ್ಯ ಜನವರ್ಗದ ಎರಡು ಮುಖ್ಯವಾದ ನೆಲೆಗಳಿವೆ. ಒಂದು ಕೇರಳದ ಕೊಚ್ಚಿನ್‌ನಲ್ಲಿ, ಇನ್ನೊಂದು ಮಹಾರಾಷ್ಟ್ರದಲ್ಲಿ. ಹದಿನೇಳನೆಯ ಶತಮಾನದಲ್ಲಿ ಕೊಚ್ಚಿನ್ನಿನ ಯಹೂದ್ಯರ ಸಂಖ್ಯೆ ಕೇವಲ 2200 ರಷ್ಟಿತ್ತು. ಆದರೆ ಅವರಿಗೆ ಆನೆಗಳ ಮೇಲೆ ಮತ್ತು ಪಲ್ಲಕ್ಕಿಗಳಲ್ಲಿ ಕುಳಿತು ಹೋಗುವ ವಿಸೇಷ ಸವಲತ್ತು ದೊರಕಿತ್ತು, ರಾಜಛತ್ರಿಯ ಕೆಳಗೆ ಕೊಂಬು,

ಕಹಳೆಗಳೊಂದಿಗೆ ಮೆರವಣಿಗೆ ಹೋಗಬಹುದಾಗಿತ್ತು. ಅವರ ಆಗಮನವನ್ನು ಜೋರಾದ ಗಂಟಲಿನಲ್ಲಿ ಸಾರುತ್ತಾ ಕೆಲವರು ಹೋಗುತ್ತಿದ್ದರು. ಕೆಳಜಾತಿಯವರು ದೂರ ಸರಿದು ಅವರಿಗೆ ದಾರಿ ಮಾಡಿಕೊಡಬೇಕಾಗಿತ್ತು. 1570ರಲ್ಲಿ ಬಂದಿದ್ದ ಒಬ್ಬ ಪ್ರವಾಸಿಯು ಕೊಟ್ಟಿರುವ ವರದಿಯಲ್ಲಿ ಯುರೋಪು, ಉತ್ತರ ಆಫ್ರಿಕಾ ಮತ್ತು ಮಧ್ಯಪ್ರಾಚ್ಯಗಳಿಂದ ಬಂದಿದ್ದವರ ಒಂದು ಸಮುದಾಯವನ್ನು ಉಲ್ಲೇಖಿಸುತ್ತಾನೆ. ಅವರನ್ನು ಕೆಲವರು ಕಪ್ಪಗಿದ್ದರೂ ಕೂಡ ಶ್ವೇತ–ಯೆಹೂದ್ಯರೆಂದು ಕರೆಯುತ್ತಿದ್ದರು. ಇತರರು ಕೃಷ್ಣ ಯಹೂದ್ಯರು. ಇವರೊಂದಿಗೆ ಶ್ವೇತ–ಯಹೂದ್ಯರು ವಿವಾಹ ಸಂಬಂಧ ಮಾಡುತ್ತಿರಲಿಲ್ಲ. ಸಹಪಂಕ್ತಿ ಭೋಜನವೂ ಇರಲಿಲ್ಲ. ಮಹಾರಾಷ್ಟ್ರದಲ್ಲಾದರೆ ಇವರ ಸಂಖ್ಯೆ ಹೆಚ್ಚು, ಸುಮಾರು 14,000 ಜನರಿದ್ದಾರೆ. ಈಗ ಬೇನೇ ಇಸ್ರೇಲ್ ಎಂದು ಕರೆಯುವ ಇವರನ್ನು ಅನೇಕ ಶತಮಾನಗಳಿಂದ ಕೊಂಕಣದ ಹಳ್ಳಿಗಳಲ್ಲಿ ಶನ್‌ವಾರ್ ತೇಲಿಸ್–ಶನಿವಾರ ಕೆಲಸ ಮಾಡದ ಗಾಣಿಗರು – ಎಂದು ಕರೆಯುತ್ತಿದ್ದರು. ಏಕೆಂದರೆ ಅವರ ಮುಖ್ಯ ಕಸಬು ಎಣ್ಣೆ ತೆಗೆಯುವುದು. ಅವರನ್ನೂ ಹಿಂದೂ ಗಾಣಿಗರಂತೆಯೇ ವ್ಯವಹರಿಸಲಾಗುತ್ತಿತ್ತು. ಆದರೆ ಒಂದು ವ್ಯತ್ಯಾಸವೂ ಇತ್ತು. ಅವರಿಗೆ ಹೀಬ್ರೂ ಭಾಷೆಯಾಗಲಿ, ಯೆಹೂದ್ಯ ಶಾಸ್ತ್ರ ನಿಯಮಗಳಾಗಲಿ ಏನೇನೂ ಗೊತ್ತಿರದಿದ್ದರೂ ಊಟಕ್ಕೆ ಸಂಬಂಧಿಸಿದ ಕೆಲವು ನಿಯಮಗಳನ್ನೂ ಕೆಲವು ಹಬ್ಬಗಳನ್ನೂ ಆಚರಿಸುತ್ತಿದ್ದರು. ಅವರಲ್ಲೂ ಬಿಳಿ ಮತ್ತು ಕಪ್ಪು ಎಂಬ ಭೇದಗಳಿದ್ದುವು. ಅವರ ನಡುವೆ ವಿವಾಹ ಸಂಬಂಧವಾಗಲಿ, ಸಹಪಂಕ್ತಿ ಭೋಜನವಾಗಲಿ ಇರಲಿಲ್ಲ. ಆದರೆ ಎರಡೂ ಗುಂಪಿನವರು ಒಂದೇ ಸಿನಗಾಗ್‌ನಲ್ಲಿ ಪ್ರಾರ್ಥನೆ ಸಲ್ಲಿಸುತ್ತಿದ್ದರು, ಆರಾಧಿಸುತ್ತಿದ್ದರು. ಜಾತಿಗೆ ಸಂಬಂಧಿಸಿದ ತಡೆಗಳು ಮುಂಬಯಿಯಲ್ಲಿ ಕಡಮೆ. ಹೆಚ್ಚು ಜನ ಯೆಹೂದ್ಯರು ಮುಂಬಯಿಗೆ ವಲಸೆ ಬಂದು ನೆಲೆಸಿದ್ದಾರೆ. ಜಿಯೋನಿಸ್ಟ್ ಪ್ರೇರಣೆಯಿಂದಾಗಿ ಕೆಲವರು ಇಸ್ರೇಲಿಗೆ ಹೋಗಿದ್ದಾರೆ. ಅವರು ಇಂದಿಗೂ ಮಲಯಾಳಂ ಮತ್ತು ಮರಾಠಿ ಪುಸ್ತಕಗಳನ್ನೂ, ಅನಿವಾರ್ಯವಾಗಿ ಪರಿಣಮಿಸಿರುವ ಭಾರತೀಯ ಸಂಬಾರ ಪದಾರ್ಥಗಳನ್ನೂ ಆಮದು ಮಾಡಿಕೊಳ್ಳುತ್ತಾರೆ.

ವೈವಿಧ್ಯತೆಯ ಇನ್ನೊಂದು ಮೂಲ ಭಾಷೆ. ಸಾಮೂಹಿಕ ಸಮಾನತೆಗಳಿಗೂ ಹಾಗೆಯೇ ಘರ್ಷಣೆಗಳಿಗೂ ಅದು ಅವಕಾಶ ಮಾಡಿಕೊಟ್ಟಿದೆ. ಭಾರತದ ಸಂವಿಧಾನವು ಹದಿನೈದು ಭಾಷೆಗಳನ್ನು ಪಟ್ಟಿ ಮಾಡಿದೆ. ಆದರೆ ಇದು ಅಧಿಕೃತ ಉದ್ದೇಶಗಳಿಗಾಗಿ ಮಾಡಿರುವ ಅಧಿಕೃತ ಪಟ್ಟಿ. ಸಾಹಿತ್ಯ ಅಕಾಡೆಮಿಯ ಸಾಹಿತ್ಯಕ ಪುರಸ್ಕಾರ ನೀಡಿಕೆಯ ಸಂದರ್ಭದಲ್ಲೂ ಅದು ನಿಲ್ಲಲಿಲ್ಲ. ಇವುಗಳ ಜೊತೆಗೆ ಅಕಾಡೆಮಿಯು ಡೋಗ್ರಿ, ಇಂಗ್ಲಿಷ್, ಕೊಂಕಣಿ, ಮೈಥಿಲಿ, ಮಣಿಪುರಿ, ನೇಪಾಳಿ ಮತ್ತು ರಾಜಾಸ್ಥಾನಿಗಳನ್ನು ಪ್ರತ್ಯೇಕ ಸಾಹಿತ್ಯಕ ಭಾಷೆಗಳೆಂದು ಮಾನ್ಯ ಮಾಡಬೇಕಾಯಿತು. ಈ ಎಲ್ಲ ಪ್ರಮುಖ ಭಾಷೆಗಳಲ್ಲೂ ಹಲವು ಪ್ರಾದೇಶಿಕ ಭಿನ್ನತೆಗಳೂ ಉಪಭಾಷಾ ರೂಪಗಳೂ ಇವೆ. ಉದಾಹರಣೆಗೆ, ಹಿಂದಿಯ ಛತ್ರದಡಿಯಲ್ಲಿ ವದಿ, ಬಘೇಲಿ, ಭೋಜಪುರಿ, ಬ್ರಿಜ್, ಬುಂದೇಲಿ, ಛತ್ತೀಸ್‌ಘರೀ,

ಹಡೋತಿ, ಮಗಹಿ, ಮಾಳವಿ, ನಿಮಾರಿ, ಪಹಾರಿ, ರಾಜಾಸ್ಥಾನಿ ಹಾಗೂ ಇತರ ಉಪಭಾಷೆಗಳಿವೆ. ತಮಿಳಿನಲ್ಲಿ ಇತರ ಪ್ರಾದೇಶಿಕ ಮತ್ತು ಸ್ಥಳೀಯ ಬಗೆಗಳಿಗಿಂತ ಭಿನ್ನವಾದ ಭವ್ಯವಾದ ಸಾಹಿತ್ಯಕ ವೈವಿಧ್ಯವಿದೆ. ಗ್ರಾಂಥಿಕ ತೆಲುಗು, ಸಾಹಿತ್ಯಕ್ಕೆ ಹಾಗೂ ಶಾಲಾ ಕಾಲೇಜುಗಳ ಬೋಧನೆಯಷ್ಟಕ್ಕೆ ಸೀಮಿತಗೊಂಡಿದೆ. ಮಿಕ್ಕಂತೆ ವ್ಯಾವಹಾರಿಕ ತೆಲುಗನ್ನು ಬಳಸಲಾಗುತ್ತದೆ. ಈ ಪರಿಸ್ಥಿತಿ ಇನ್ನೂ ಗೊಂದಲಕ್ಕೆ ದಾರಿ ಮಾಡುವುದು, 227 ಮಾತೃಭಾಷೆಗಳನ್ನು ಪರಿಗಣಿಸಲಾಗಿದೆ ಎಂಬುದನ್ನು ನೆನೆದಾಗ. ಇದರಿಂದ ಭಾಷಾ ಸಂಬಂಧವಾದ ಯೋಜನೆ ಮತ್ತು ಪ್ರಗತಿ ಕಷ್ಟಕರವಾಗಿದೆ. ಆದರೆ ಮಾತೃಭಾಷೆಯು ಬಲವಾದ ಭಾವೋದ್ವೇಗಗಳನ್ನೂ, ಪ್ರತಿಕ್ರಿಯೆಗಳನ್ನೂ ಹುಟ್ಟಿಸುತ್ತದೆ. ಈ ಮಧ್ಯೆ ಗುಡ್ಡಗಾಡಿನ ಆದಿವಾಸಿ ಜನರ ಭಾಷೆಗಳನ್ನು ಕೇವಲ ಉಪಭಾಷೆಗಳೆಂದು ತಳ್ಳಿಹಾಕುವಂತಿಲ್ಲ. ಆ ಹಲವು ನುಡಿಗಳಲ್ಲಿ ಈಗ ಸಾಹಿತ್ಯ ಬೆಳೆಯುತ್ತಿದೆ ಮತ್ತು ಕೊನೆಯ ಪಕ್ಷ ಅಂಥ ಒಂದು ಭಾಷೆ ತನ್ನದಾದ ಒಂದು ಲಿಪಿಯನ್ನೂ ಆವಿಷ್ಕರಿಸಿಕೊಂಡಿದೆ. ಹಲವು ಸಂದರ್ಭಗಳಲ್ಲಿ ಭಾಷಾ ವೈಪುಲ್ಯವು ದಿಗ್ಭ್ರಗೊಳಿಸುತ್ತದೆ, ಅದರಲ್ಲೂ ಸಮೂಹ ಸಂಪರ್ಕ ಮಾಧ್ಯಮ ಹಾಗೂ ಶಿಕ್ಷಣಗಳ ಕ್ಷೇತ್ರದಲ್ಲಿ. ನಾಗಾಲ್ಯಾಂಡಿನ ನಿದರ್ಶನವನ್ನು ನೋಡಿ. ಮೊದಲು ಒಂದು ಜಿಲ್ಲೆಯಾಗಿದ್ದ ನಾಗಾಲ್ಯಾಂಡ್ ಈಗ ಒಂದು ರಾಜ್ಯವಾಗಿದೆ. ಅಲ್ಲಿ ಈ ಕೆಳಗಿನ ಹತ್ತೊಂಬತ್ತು ಭಾಷೆಗಳಿವೆ: ಅಂಗಾಮಿ (33,766/43,569); ಸೇಮಾ (47,39/65,227); ಲೋಥಾ (26,565/36,949); ಅವೋ (5,904/65275); ರೆಂಗ್ಮಾ (5,786/8578); ಛಖೇಸಂಗ್ – ಚೋಕ್ರಿ ಚಕ್ರು (8,339 ); ಖೇಝಾ (7295); ಸಂಗ್ರಮ್ ಪೊಚೂರಿ (2,736); ಸಂಗ್‌ತಮ್ (15508/19,998); ಕೊನ್ಯಾಕ್ (46,653/72,338); ಚಾಂಗ್ (11,329/15,816); ಫೋಂ (13,385/18,017); ಯಿಂಚಂಗ್ರೆ (10,187/13,564); ಖೀಮ್‌ನುಂಗಾಮ್ (12,434/14,414); ಸೆಲಿಯಾಂಗ್–ಸೆಮಿ (6,472); ಲಿಯಾಂಗ್‌ಮೀ (2,969); ಕುಕಿ–ಚಿರು (1,175) ಮಕ್ವಾರೆ (769); ಮತ್ತು ತಿಖಿರ್ (2,468). ಸಂಖ್ಯೆಗಳು 1961 ಮತ್ತು 1971ನೆಯ ವರ್ಷಗಳಿಗೆ ಸಂಬಂಧಿಸಿದವು. ಒಂದೇ ಸಂಖ್ಯೆ ಕೊಟ್ಟಿರುವಲ್ಲಿ ಅದು 1961 ರದ್ದು.

ಈ ವಿಪುಲತೆಯ ಪರಿಣಾಮವಾಗಿ ಆಲ್ ಇಂಡಿಯಾ ರೇಡಿಯೋ ಕೊಹಿಮಾ ಕೇಂದ್ರವು ಇಪ್ಪತ್ತೈದು ಭಾಷೆಗಳಲ್ಲಿ ಪ್ರಸಾರ ಮಾಡಬೇಕಾಗಿದೆ. ವಾರ್ತಾ ಪ್ರಸಾರವು ಹದಿನೆಂಟು ಭಾಷೆಗಳಲ್ಲಿ ನಡೆಯುತ್ತದೆ. ಅವು ಇಂಗ್ಲಿಷ್ ಹಿಂದೀ, ನಾಗಾಪಿಡ್ಗಿನ್ ಮತ್ತು ಹದಿನಾರು ನಾಗಾ ಭಾಷೆಗಳು. ಲಘು ಸಂಗೀತ ಕಾರ್ಯಕ್ರಮವು ಹದಿನಾರು ನಾಗಾ ಭಾಷೆಗಳ ಜೊತೆಗೆ ವಾರ್ತಾ ಪ್ರಸಾರದಲ್ಲಿ ಅಳವಡಿಸಿಲ್ಲದ ಎರಡು ನಾಗಾ ಭಾಷೆಗಳಲ್ಲೂ ಇಂಗ್ಲಿಷ್, ಹಿಂದೀ, ಮಲಯಾಳಂ, ತಮಿಳು ಮತ್ತು ನೇಪಾಳಿ ಭಾಷೆಗಳಲ್ಲೂ ಪ್ರಸಾರವಾಗುತ್ತದೆ. ಪಿಡ್ಗಿನ್‌ನಾಗಾ ಭಾಷೆಯು ಈ ಪ್ರದೇಶದ ಅಧಿಕೃತ ಭಾಷೆಯಾಗಿ ವಿಕಾಸವಾಗುತ್ತಿದೆ. ಗಣನೀಯ ಪ್ರಮಾಣದಲ್ಲಿ ದ್ವಿಭಾಷಾ ವ್ಯವಹಾರವಿದೆ. ಆಡಳಿತದಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಬಳಸಬೇಕಿದೆ. ಇದೇ ರೀತಿಯಲ್ಲಿ ಬೇರೆ ಪ್ರದೇಶಗಳಲ್ಲೂ ಗೊಂದಲವುಂಟು ಮಾಡುವ ವೈವಿಧ್ಯ,

ವೈಪುಲ್ಯಗಳು ಕಂಡುಬರುತ್ತವೆ. ಇದರಿಂದಾಗಿ ಆಡಳಿತೀಯ ಹಾಗೂ ರಾಜಕೀಯ ಸಮಸ್ಯೆಗಳನ್ನು ಎದುರಿಸಬೇಕಾಗಿದೆ.

ವೈವಿಧ್ಯದ ಮತ್ತೊಂದು ಮುಖ್ಯವಾದ ಮೂಲವೆಂದರೆ, ನಿರ್ದಿಷ್ಟ ಜನಾಂಗ, ಪ್ರದೇಶಗಳ ಸಾಂಸ್ಕೃತಿಕ ರಂಗುಛಾಯೆಗಳನ್ನು ಹೊಂದಿದ್ದರೂ, ಜನತೆಯ ಇತರ ವರ್ಗಗಳೊಂದಿಗೆ ಕೆಲಮಟ್ಟಿನ ಸಮಾನತೆ ಸಂಬಂಧಗಳನ್ನೂ ಪ್ರದರ್ಶಿಸುತ್ತವೆ. ಇದೇ ವಿಶಿಷ್ಟ ಸಾಂಸ್ಕೃತಿಕ ವ್ಯಕ್ತಿತ್ವವಾಗಿ ಅನೇಕ ಶತಮಾನಗಳಿಂದ ರೂಪುಗೊಂಡು ಬಂದಿದೆ. ಸಾಂಸ್ಕೃತಿಕ ವಲಯಗಳು ಉದಿಸುವುದು ಹೇಗೆ ? ಅಂಥ ಒಂದು ಪ್ರದೇಶದ ಜನರು ಕುಲ, ಮೂಲ, ಭಾಷೆ ಮತ್ತು ಸಾಂಸ್ಕೃತಿಕ ಲಕ್ಷಣಗಳನ್ನು ಇತರರೊಂದಿಗೆ ಹಂಚಿಕೊಳ್ಳಬಹುದು. ಅತ್ಯಂತ ಮುಖ್ಯವಾದ ಸಂಗತಿಯೆಂದರೆ ಅವರು ಹಂಚಿಕೊಂಡಿರುವ ಐತಿಹಾಸಿಕ ಅನುಭವಗಳು ಹಾಗೂ ಪರಿಸರ. ಅನೇಕಾನೇಕ ಬಲಿಷ್ಠ ಸಾಮ್ರಾಜ್ಯಗಳು, ರಾಜಮಹಾರಾಜರು ಸಾಂಸ್ಕೃತಿಕ ವಲಯಗಳ ನಿರ್ಮಿತಿಯಲ್ಲಿ ಪ್ರತ್ಯೇಕವಾಗೂ, ಪರೋಕ್ಷವಾಗೂ ಸಾಕಷ್ಟು ಗಣನೀಯವಾದ ಪಾಲು ನೀಡಿದ್ದಾರೆ. ದೊಡ್ಡ ಸಾಮ್ರಾಜ್ಯಗಳು ಒಂದು ಕೇಂದ್ರ ಸಾಂಸ್ಕೃತಿಕ ವಲಯವನ್ನು ಹೊಂದಿದ್ದುವು. ಆದರೆ ಅದರ ಪ್ರಭಾವವು ತೆಳುವಾದ ರೂಪದಲ್ಲಿ ದೂರದ ಪ್ರದೇಶಗಳಿಗೂ ವಿಸ್ತರಿಸಿತು. ಅವರ ಚಕ್ರಾಧಿಪತ್ಯವನ್ನು ಒಪ್ಪಿಕೊಂಡ ರಾಜ್ಯಗಳಲ್ಲಿ ಸಾಂಸ್ಕೃತಿಕವಾಗಿ ಏರುಪೇರು ಉಂಟಾಗಲಿಲ್ಲವಾದರೂ ಅಲ್ಲೂ ಸ್ವಲ್ಪಮಟ್ಟಿಗೆ ಸಾಂಸ್ಕೃತಿಕ ಒತ್ತಡ ಬಂದಿತು. ನಿದರ್ಶನಕ್ಕೆ ಹೇಳುವುದಾದರೆ ಮೌರ್ಯ ಮತ್ತು ಗುಪ್ತ ಸಾಮ್ರಾಜ್ಯಗಳು ಸಾಂಸ್ಕೃತಿಕ ಮತ್ತು ಸಾಮಾಜಿಕ ವಿಚಾರಗಳಲ್ಲಿ ಪರಸ್ಪರ ಆಕ್ರಮಣ ಮಾಡಲಿಲ್ಲ; ಮೂಗು ತೂರಿಸಲಿಲ್ಲ. ಅಲ್ಲಿದ್ದ ಬಹುತೇಕ ವೈವಿಧ್ಯವು ಹಾಗೆಯೇ ಉಳಿದುಕೊಂಡಿತು. ಆದರೂ ಪ್ರಾದೇಶಿಕ ಸಂಸ್ಕೃತಿಗಳು ಕೇಂದ್ರ ಸಾಂಸ್ಕೃತಿಕ ವಲಯದಿಂದ ಕೆಲವು ಲಕ್ಷಣಗಳನ್ನು ಆಯ್ದು ಸೇರಿಸಿಕೊಂಡುವು, ಅಥವಾ ತುಸುಮಟ್ಟಿಗೆ ಹಾಗೇ ಬದಲುಗೊಂಡುವು. ಧರ್ಮಶ್ರದ್ಧೆ ಮತ್ತು ಸಿದ್ಧಾಂತಗಳ ವಿಷಯದಲ್ಲಿ ಸಾಮ್ರಾಟ ಅಶೋಕನು ಭಾರೀ ಉತ್ಸಾಹವನ್ನು ತೋರಿಸಿದನು. ಆದರೆ ಸಂಸ್ಕೃತಿಯ ಇತರ ಅಂಶಗಳಲ್ಲಿ ಅವನು ಮಧ್ಯಪ್ರವೇಶ ಮಾಡಿದ್ದರ ಸೂಚನೆ ಸಿಕ್ಕುವುದಿಲ್ಲ. ಕಳಿಂಗದಲ್ಲಿ ಖಾರವೇಲನ ಕೈಕೆಳಗೆ ಸಾಂಸ್ಕೃತಿಕ ಐಕ್ಯತೆಗೆ ತುಂಬ ಪ್ರೋತ್ಸಾಹ ದೊರಕಿತು. ವಾಯುವ್ಯದಲ್ಲಿ ಇಂಡೋ-ಗ್ರೀಕ್ ಅರಸರು, ಆಮೇಲೆ ಕುಶಾನರು, ಹೂಣರು ಒಂದು ಪ್ರಾದೇಶಿಕ ಸಂಸ್ಕೃತಿಯ ಉದಯಕ್ಕೆ ಕಾರಣರಾದರು. ನರ್ಮದೆಯ ದಕ್ಷಿಣಕ್ಕೆ ಶಾತವಾಹನ ರಾಜರ ಪ್ರಭಾವ ಗಣನೀಯವಾಗಿತ್ತು, ಕೇರಳ ಸಮಾಜವನ್ನು ರೂಪಿಸುವಲ್ಲಿ ಚೇರರು ಪ್ರಭಾವ ಬೀರಿದರು. ದಕ್ಷಿಣ ಇತರ ಭಾಗಗಳಲ್ಲಿ ಪ್ರಾದೇಶಿಕ ಸಂಸ್ಕೃತಿಗಳು ರೂಪುಗೊಂಡು ಹರಳುಗಟ್ಟುವುದರಲ್ಲಿ ಪಲ್ಲವರು, ಪಾಂಡ್ಯರು, ವಾಕಾಟಕರು, ಚಾಲುಕ್ಯರು, ಚೋಳರು ಮತ್ತು ವಿಜಯನಗರದ ಅರಸರು ಬಹು ಮುಖ್ಯವಾದ ಕೊಡುಗೆ ನೀಡಿದರು. ಇದು ನಿದರ್ಶನಕ್ಕಾಗಿ ಮಾತ್ರ ಕೊಟ್ಟ ಪಟ್ಟಿ, ಸಮಗ್ರವಾದದ್ದಲ್ಲ. ಏನೇ ಆದರೂ ಪ್ರಾದೇಶಿಕ ಸಂಸ್ಕೃತಿಗಳ ಉದಯದ ಪ್ರಕ್ರಿಯೆಯಲ್ಲಿ ಯಾವುದೇ ಒಂದು

ಸಾಮ್ರಾಜ್ಯದ ನಿರ್ದಿಷ್ಟ ಕೊಡುಗೆ ಏನು ಎಂಬುದನ್ನು ಬಿಡಿಯಾಗಿ ತೋರಿಸುವುದು ಕಷ್ಟ. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ಕನಿಷ್ಠ ಪ್ರಮಾಣದ ಸೈದ್ಧಾಂತಿಕ ಹೊಂದಾಣಿಕೆಯನ್ನು ಒತ್ತಿ ಹೇಳಿದುವು; ಸಾಂಸ್ಕೃತಿಕ ಮತ್ತು ಸಾಮಾಜಿಕ ವೈವಿಧ್ಯವು ಬಹುಮಟ್ಟಿಗೆ ಕದಡದೆ ಉಳಿಯಿತು. ರಾಷ್ಟ್ರೀಯ ಚಳವಳಿಯಾದರೋ ಭಾರತದ ಐಕ್ಯತೆ ಮತ್ತು ಸಮಗ್ರತೆಗಳನ್ನು ಒತ್ತಿ ಹೇಳಿದರೂ ಕುಲಸಂಬಂಧಿ, ಭಾಷಾ, ಪ್ರಾದೇಶಿಕ ಭಾವನೆಗಳನ್ನೂ ಬಳಸಿಕೊಂಡು ಬೆಂಬಲವನ್ನು ಬಯಸಿತು. ಈ ಪ್ರಕ್ರಿಯೆಯಲ್ಲಿ ಪ್ರಾದೇಶಿಕ ಸಂಸ್ಕೃತಿಗಳು ಹರಳುಗಟ್ಟಲು ಹೊಸ ಉತ್ತೇಜನ ದೊರಕಿತು.

ಐಕ್ಯತೆಯ ಬಗೆಗೆ ಹೇಗೆ ? ಅದನ್ನು ಹೇಗೆ ಸಾಧಿಸಲಾಗಿದೆ ? ಭೌಗೋಳಿಕ ಪರಿಸ್ಥಿತಿಯು ಭಾರತಕ್ಕೆ ಉತ್ತರದಲ್ಲಿ ಭವ್ಯತಮ ಹಿಮಾಲಯ ಪರ್ವತದಿಂದ, ಪರ್ಯಾಯ ದ್ವೀಪದ ಸುತ್ತ ವಿಶಾಲ ಸಾಗರದಿಂದ ಕೊನೆಯಪಕ್ಷ ಭಾಗಶಃ ಪ್ರತ್ಯೇಕತೆಯನ್ನು ಒದಗಿಸಿಕೊಟ್ಟಿದೆ. ದೀರ್ಘ ಕಾಲಾವಧಿಯವರೆಗೆ ವಾಯುವ್ಯದಿಂದಾಗಲಿ, ಬರ್ಮಾ, ಚೀನಾ ಮಾರ್ಗಗಳಿಂದಾಗಲಿ, ಸಾಗರದ ದಾರಿಯಿಂದಾಗಲಿ ಎಲ್ಲೋ ಒಬ್ಬಿಬ್ಬರ ಹೊರತು ಜನರು ಬರಲಿಲ್ಲ. ಈ ಕಾಲಾವಧಿಯಲ್ಲಿ ಭಾರತ ಉಪಖಂಡದ ಒಳಗೆ ಜನತಾ ಆಂದೋಳನಗಳು ನಡೆದುವು.. ಅವುಗಳಿಂದ ಒಂದು ಬಗೆಯ ಐಕ್ಯತೆ ವ್ಯಕ್ತವಾಯಿತು. ಪ್ರಾಚೀನಕಾಲದ ಅತ್ಯಂತ ಬೃಹತ್ ಸಾಮ್ರಾಜ್ಯಗಳು ಕೂಡ ಇಡೀ ದೇಶವನ್ನು ವ್ಯಾಪಿಸಿಕೊಳ್ಳಲು ಸಾಧ್ಯವಾಗಿರಲಿಲ್ಲ. ಆದರೆ ಈಗ ದೇಶವು ಬ್ರಿಟಿಷ್ ಚಕ್ರಾಧಿಪತ್ಯದ ಆಡಳಿತ ಮತ್ತು ನ್ಯಾಯಾಂಗ ಪ್ರಭಾವಗಳಿಗೆ ಒಳಪಟ್ಟಿತು.

ರಾಜ್ಯಗಳ ನಡುವೆ ಯುದ್ಧಗಳು ಪದೇ ಪದೇ ಸಂಭವಿಸುತ್ತಿದ್ದುವು. ಅರಸರ ಬದಲಾವಣೆ, ಈ ವಿಜಯಗಳ ಫಲವಾಗಿ ಒದಗುವ ಸಾಂಸ್ಕೃತಿಕ ಪರಿಣಾಮಗಳು ಜನರಿಗೆ ಅಭ್ಯಾಸವಾಗಿ ಹೋಗಿದ್ದುವು. ಹಲವು ಯುದ್ಧಗಳು ಅಕ್ಕಪಕ್ಕದ ಅರಸರ ನಡುವಣ ಯುದ್ಧಗಳಾಗಿ, ಅಂದರೆ ಪ್ರಾದೇಶಿಕ ಸ್ವರೂಪದವಾಗಿದ್ದರೂ ಇನ್ನು ಕೆಲವು ಮಾತ್ರ ವಿಸ್ತಾರವಾದ ಭೂ ಪ್ರದೇಶಗಳನ್ನು ಒಳಗೊಂಡು ಸಾಮ್ರಾಜ್ಯ ಸ್ಥಾಪನೆಯ ಉದ್ದೇಶದಿಂದ ಕೂಡಿದವಾಗಿರುತ್ತಿದ್ದುವು. ಅಶೋಕನು ಮುಂದೆ ಹಿಂಸಾ ಪರಿತ್ಯಾಗ ಮತ್ತು ಶಾಂತಿಗಳಿಗೆ ಎಷ್ಟು ಪ್ರಸಿದ್ಧನಾದನೋ, ಮೊದಲು ವೀರ, ಪರಾಕ್ರಮಗಳಿಗೆ ಅಷ್ಟೇ ಹೆಸರಾಗಿದ್ದನು. ಅವನು ನೀಡಿದ ಶಾಂತಿ ಸಂದೇಶಗಳ ೇಶದ ಹಲವು ಕಡೆ ಶಿಲಾಶಾಸನಗಳ ರೂಪದಲ್ಲಿ ಇಂದಿನವರೆಗೂ ಉಳಿದು ಒ.ುದಿವೆ. ಇತರ ಅನೇಕ ಅರಸರ ಸೈನ್ಯಾಚರಣೆಗಳು, ವಿಜಯೋತ್ಸವಗಳು ಭಾರತ ಇತಿಹಾಸ ಕೃತಿಗಳಲ್ಲಿ ನಿರೂಪಿತವಾಗಿವೆ. ನಿದರ್ಶನಕ್ಕೆ ಹೇಳುವುದಾದರೆ ಸಮುದ್ರಗುಪ್ತನು ದಕ್ಷಿಣ ಭಾರತದಲ್ಲಿ ಕಾಂಚೀಪುರಂವರೆಗೂ ದಂಡಯಾತ್ರೆ ಮಾಡಿದನು. ಅಷ್ಟಾಗಿ ಪ್ರಸಿದ್ಧಿ ಪಡೆಯದೆ ಹೋಗಿರುವ ಐತಿಹಾಸಿಕ ಅಂಶವೆಂದರೆ ಹನ್ನೊಂದನೆ ಶತಮಾನದಲ್ಲಿ ರಾಜರಾಜೇಂದ್ರ ಚೋಳನು ಗಂಗಾನದಿಯವರೆಗೆ ವಿಜಯಯಾತ್ರೆ ಮಾಡಿದ್ದು. ವಿವಿಧ ವಂಶಗಳಿಗೆ ಸೇರಿದ ಮುಸ್ಲಿಂ ಅರಸರು ಯುದ್ಧಗಳ ಮೂಲಕವೇ ತಮ್ಮ

ರಾಜ್ಯಗಳನ್ನು ಕಟ್ಟಿದರು. ಈ ಪ್ರಕ್ರಿಯೆಯಲ್ಲಿ ತಮ್ಮ ತಮ್ಮ ನಡುವೆಯೇ ಹೊಡೆದಾಡಿಕೊಂಡದ್ದೂ ಉಂಟು. ದೀರ್ಘಕಾಲದವರೆಗೆ ಅವರ ಆಳಿಕೆಗೆ ಸೇರಿದ ಸಾಮ್ರಾಜ್ಯಗಳಲ್ಲಿ ಅವರ ಛಾಪು ಉಳಿದುಕೊಂಡುದನ್ನು ನೋಡಬಹುದು.

ಭಾರತದಲ್ಲಿ ಹಿಂದೂಧರ್ಮವೇ ಪ್ರಧಾನವಾದ ಧರ್ಮ. ಅದು ಭಾರತೀಯ ಸಂಸ್ಕೃತಿ ಮತ್ತು ಸಮಾಜದ ವಿಶಿಷ್ಟ ಲಕ್ಷಣದ ಮೇಲೆ ಪ್ರಭಾವ ಬೀರಿದೆ. ನಿಜ, ಅದು ಕಾಲಾತೀತವೂ ಆಗಿರಲಿಲ್ಲ, ಪರಿವರ್ತನಾತೀತವೂ ಆಗಿರಲಿಲ್ಲ. ಆಗಾಗ ಒಳಗಿನಿಂದ ಮತ್ತು ಹೊರಗಿನಿಂದ ವಿರುದ್ಧ ಪ್ರಭಾವಗಳಿಗೆ ಒಳಗಾಗಬೇಕಾಯಿತು. ಜೈನಧರ್ಮ ಮತ್ತು ಬೌದ್ಧ ಧರ್ಮಗಳು ವ್ಯಾಪಕವಾಗಿ ಹರಡಿಕೊಂಡು ಗಣನೀಯವಾದ ಒತ್ತಡ ತಂದಿದ್ದುವು. ಹಿಂದೂಧರ್ಮವು ಜೈನಧರ್ಮ ಹರಡುವುದನ್ನು ತಡೆಯಿತು, ಕೆಲವೇ ಜನರಿಗೆ ಅದು ಸೀಮಿತವಾಗಿ ನಿಲ್ಲುವಂತೆ ಮಾಡಿತು; ಬೌದ್ಧಧರ್ಮವು ಹೆಚ್ಚು ಕಡಮೆ ಅಳಿಸಿಯೇ ಹೋಯಿತು. ಸಮಕಾಲೀನ ಹಿಂದೂಧರ್ಮವು ಅವುಗಳ ಪ್ರಭಾವವನ್ನು ತೋರಿಸುತ್ತದೆ. ಹಿಂದೂಧರ್ಮವು ಭಾರತದಲ್ಲಿ ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳ ಮೇಲೂ ಪ್ರಭಾವ ಬೀರಿತು, ಹಾಗೂ ಅವುಗಳ ಪ್ರಭಾವಕ್ಕೂ ಒಳಗಾಯಿತು. ಹಿಂದೂಧರ್ಮಕ್ಕೆ ಯಾವುದೇ ಒಂದು ಶಾಸ್ತ್ರ ಗ್ರಂಥವಿಲ್ಲ; ಪವಿತ್ರ ಸಾಹಿತ್ಯದ ಒಂದು ಶ್ರೇಣಿಯೇ ಇದೆ. ಆದರಿಂದ ತನ್ನ ಮೂಲ ವಿಚಾರಗಳನ್ನು ಅದು ತೆಗೆದುಕೊಳ್ಳುತ್ತದೆ. ಈ ಸಾಹಿತ್ಯದ ಬಗೆಗೆ ಮೊದಲನೆ ಅಧ್ಯಾಯದಲ್ಲಿ ವಿವರಿಸಿದ್ದಾಗಿದೆ. ಈ ಸಾಹಿತ್ಯದ ಬಹುಭಾಗ ಆಯ್ದ ಕೆಲವೇ ದಾರ್ಶನಿಕರು, ಪ್ರಾಚ್ಯ ಶಾಸ್ತ್ರಜ್ಞರು, ಧರ್ಮತಜ್ಞರ ಒಂದು ಸಣ್ಣ ವಲಯಕ್ಕೆ ಹೊರತು ಮಿಕ್ಕವರಿಗೆ ಅರ್ಥವಾಗುವುದಿಲ್ಲ. ಪುರೋಹಿತರೆನಿಸಿಕೊಂಡವರೂ ಅವುಗಳನ್ನು ಪೂರ್ತಿಯಾಗಿ ತಿಳಿದುಕೊಂಡಿರುವುದಿಲ್ಲ. ಗೀತೆಯ ಕೆಲವಂಶಗಳು ಜನರಿಗೆ ಹೆಚ್ಚು ಗೊತ್ತು, ಹಾಗೆಯೇ ಪುರೋಹಿತರು ವ್ಯಾಖ್ಯಾನಿಸುವಂತೆ ಮನುಧರ್ಮಶಾಸ್ತ್ರ ಹಾಗೂ ಗೃಹ್ಯಸೂತ್ರಗಳ ಪರಿಚಯವುಂಟು. ಇವುಗಳಲ್ಲಿ ಸ್ಥಳೀಯ ವಿಕಲ್ಪಗಳೂ ಸೇರಿರುತ್ತವೆ. ಈಗ ಆಚರಣೆಯಲ್ಲಿ ಇರುವುದು ಪ್ರಾಚೀನ ಹಿಂದೂ ಧರ್ಮವಲ್ಲ; ಪುರಾಣ, ಐತಿಹ್ಯ, ಸುಲಭಗ್ರಾಹ್ಯವಾದ ಪ್ರಸಾರಗಳು ಮೊದಲಾದವುಗಳಿಂದ ಬಂದ ಜನಪ್ರಿಯ ಹಿಂದೂಧರ್ಮ.

ಎರಡು ಮಹಾಕಾವ್ಯಗಳು—ಮಹಾಭಾರತ ಮತ್ತು ರಾಮಾಯಣಗಳು ಚೆನ್ನಾಗಿ ಪರಿಚಿತವಾಗಿವೆ. ಸಂಸ್ಕೃತ ಮೂಲದಿಂದಲ್ಲ, ಅವುಗಳ ಹಲವಾರು ಜಾನಪದ, ಪ್ರಾದೇಶಿಕ ಭಾಷಾ ಆವೃತ್ತಿಗಳ ಮೂಲಕ.

ಉತ್ತರಭಾರತದಲ್ಲಿ ರಾಮಲೀಲಾ ಮತ್ತು ರಾಸಲೀಲಾಗಳು ರಾಮ ಹಾಗೂ ಕೃಷ್ಣ ಕಥಾನಕಗಳನ್ನು ಜಾನಪದ ಮಾಧ್ಯಮದಲ್ಲಿ ಬಿತ್ತರಿಸುತ್ತವೆ. ವಾಲ್ಮೀಕಿಯು ಸಂಸ್ಕೃತದಲ್ಲಿ ರಾಮನನ್ನು ಕುರಿತು ರಚಿಸಿದ ಮಹಾಕಾವ್ಯ ಮಾತ್ರವಲ್ಲದೆ ರಾಮಾಯಣ ಕಥಾನಕವು ಇನ್ನೂ ಅನೇಕ ಶ್ರೇಷ್ಠ ಕಾವ್ಯಗಳ ಮೂಲಕವಾಗಿ ಭಾರತೀಯರ ನಡುವೆ ವಿಸ್ತಾರವಾಗಿ ಹರಡಿಕೊಂಡಿದೆ, ಜನಜೀವನದಲ್ಲಿ ಬೆರೆತುಕೊಂಡಿದೆ. ತುಲಸೀದಾಸ (ಅವಧಿ/ಹಿಂದಿ), ಕಂಬನ್ (ತಮಿಳು), ಪೊನ್ನ

(ಕನ್ನಡ) ಇಂಥ ಕವಿಗಳು ಅವರವರ ಭಾಷೆಯಲ್ಲಿ ರಾಮಾಯಣ ಕಥೆಯನ್ನು ರಚಿಸಿದರು. ವ್ಯಾಸರ ಮಹಾಭಾರತವನ್ನೂ ಕೆಲವು ಪ್ರಾದೇಶಿಕ ಭಾಷೆಗಳಲ್ಲಿ ಕವಿಗಳು ಮರಳಿ ರಚಿಸಿದ್ದಾರೆ. ಕನ್ನಡದ ಮಹಾಕವಿ ಪಂಪನ ವಿಕ್ರಮಾರ್ಜುನ ವಿಜಯ ಅಥವಾ ಪಂಪಭಾರತ ಇಂತಹ ಒಂದು ಅಮೋಘ ಮರುಸೃಷ್ಟಿ. ಈ ಸಂಕಟ–ಸಂತೋಷ, ಪ್ರೇಮ–ದ್ವೇಷ, ದುರಾಸೆ–ಕರುಣೆಗಳ, ಅಹಂಕಾರಗಳ ಘರ್ಷಣೆಯ ಮತ್ತು ತಾತ್ವಿಕ ಚಿಂತನೆಯ ವೈಭವದ ಕತೆಯನ್ನು ಅದ್ಭುತವಾದ ರೀತಿಯಲ್ಲಿ ಪಂಪನು ಪುನರ್ ರಚಿಸಿದ್ದಾನೆ. ಕನ್ನಡದ ಕವಿ ಚಕ್ರವರ್ತಿತ್ರಯರಲ್ಲಿ ಕೊನೆಯವನಾದ ರನ್ನನೂ ತನ್ನ ಸಾಹಸಭೀಮ ವಿಜಯ ಅಥವಾ ಜನಪ್ರಿಯವಾಗಿ ಗದಾಯುದ್ಧ ಎಂದು ಹೆಸರಾದ ಕಾವ್ಯಕ್ಕೆ ಇದೇ ವಸ್ತುವನ್ನೇ ಆರಿಸಿಕೊಂಡಿದ್ದಾನೆ. ಈ ಕೃತಿಗಳು ವಾಲ್ಮೀಕಿ ಅಥವಾ ವ್ಯಾಸ ಕೃತಿಗಳ ಪೇಲವ ಅನುಕರಣೆಯಲ್ಲ. ಅವರಿಂದ ಕಥೆಯ ರೂಪುರೇಷೆಗಳನ್ನು ಮಟ್ಟಿಗೆ ಪಡೆದುಕೊಳ್ಳಲಾಗಿದೆ. ವ್ಯವಹರಣೆ ಬೇರೆಯೇ ಸ್ವತಂತ್ರವಾದದ್ದು. ತಮ್ಮ ಕವಿ ಸಂವೇದನೆಯ ಸಾಮರ್ಥ್ಯದಿಂದ ಶ್ರೀಮಂತವಾಗಿರುವಂಥದು. ತುಲಸೀದಾಸ, ಕಂಬ ಮತ್ತು ಪೊನ್ನ ನಿರೂಪಿಸಿರುವ ರಾಮನ ಚಿತ್ರ ವಾಲ್ಮೀಕಿಯದಕ್ಕಿಂತ ಬೇರೆಯೇ. ಅಲ್ಲದೆ ಈ ಮೂವರು ಮಹಾಕವಿಗಳು ತಮ್ಮ ಕಾವ್ಯ ಪ್ರತಿಭೆಯಲ್ಲಿ ಅನ್ಯಾದೃಶ ಸ್ಥಾನ ಪಡೆದವರು. ಮಹಾಭಾರತದ ಮರುಹುಟ್ಟಿನಲ್ಲಿ ಪಂಪನು ಅರ್ಜುನನನ್ನು ಕಥಾನಾಯಕನನ್ನಾಗಿ ಮಾಡುತ್ತಾನಾದರೆ, ರನ್ನನಾದರೋ ಭೀಮನ ವೀರ ಪರಾಕ್ರಮಗಳನ್ನೇ ಕೇಂದ್ರಬಿಂದುವಾಗಿರಿಸಿಕೊಂಡಿದ್ದಾನೆ. ಈ ಕವಿಗಳ ಕೃತಿಗಳಿಂದ ಹೊರಪಡುವ ತಾತ್ವಿಕ ವಿಚಾರಗಳಲ್ಲಿ ಸೂಕ್ಷ್ಮ ವ್ಯತ್ಯಾಸವು ಕಂಡುಬರುತ್ತದೆ. ಹಾಗೆಯೇ ಅವರ ಉಪಮೆ ರೂಪಕಾದಿ ಅಲಂಕಾರಗಳು ಮತ್ತು ವ್ಯಾಖ್ಯಾನಗಳಲ್ಲೂ. ಸಾಮಾನ್ಯ ಓದುಗನಿಗಾದರೋ ಈ ಒಂದೊಂದು ಕಾವ್ಯದಲ್ಲೂ ದಿವ್ಯತ್ವವಿದೆ, ಒಂದೊಂದೂ ಪವಿತ್ರವಾಗುತ್ತದೆ. ಪಂಪ ಮತ್ತು ರನ್ನ ಜೈನಧರ್ಮಕ್ಕೆ ಸೇರಿದವರು, ವೃತ್ತಿಯಲ್ಲಿ ರನ್ನನು ಬಳೆಗಾರನಾಗಿದ್ದನು ಎಂದಷ್ಟು ಹೇಳಬಹುದು. ಕರ್ನಾಟಕದ ಯಕ್ಷಗಾನ ಹಾಗೂ ಕೇರಳದ ಕಥಕ್ಕಳಿಗಳೂ ಧಾರ್ಮಿಕ ವಸ್ತುಗಳನ್ನು ಹೊಂದಿರುತ್ತವೆ. ವಾಸ್ತವವಾಗಿ ರಾಮಾಯಣ ಮತ್ತು ಮಹಾಭಾರತ ಪ್ರಸಂಗಗಳು, ವಿಶೇಷತಃ ಕೃಷ್ಣನ ಕಥೆ ಭಾರತದ ಬಹುತೇಕ ಶಾಸ್ತ್ರೀಯ ನೃತ್ಯರೂಪಗಳನ್ನು ಪ್ರೋತ್ಸಾಹಿಸಿದೆ. ಭರತನಾಟ್ಯ, ಕೂಚಿಪುಡಿ, ಮೋಹಿನಿ ಆಟ್ಟಂ, ಕಥಕಳಿ, ಒಡಿಸ್ಸಿ, ಮಣಿಪುರಿ ಹಾಗೂ ಕಥಕ್‌ನ ಭಕ್ತಿ ಪ್ರಕಾರಗಳು ಹೀಗೆ ಪ್ರೋತ್ಸಾಹನ ಪಡೆದಿವೆ. ಶತಶತಮಾನಗಳಿಂದ ಈ ಕೃತಿಗಳ 'ಮಹಾನ್ ನಾಯಕರು ಹಾಡಿನಲ್ಲಿ, ಕವಿತೆಯಲ್ಲಿ, ಭಾರತದ ಎಲ್ಲ ಭಾಷೆಗಳಲ್ಲಿಯೂ ಅಮರರಾಗಿ ಉಳಿದಿದ್ದಾರೆ. ಆದರಿಂದಾಗಿ ಹಿಂದೂ ಪರಂಪರೆಗೆ ಒಂದು ಐಕ್ಯತೆಯನ್ನು ನಿರಂತರತೆಯನ್ನೂ ಒದಗಿಸಿದ್ದಾರೆ. ಸಂತ ಕವಿಗಳು ತಮ್ಮ ಕೃತಿಗಳ ಮೂಲಕ ಧರ್ಮವನ್ನು ಜನಪ್ರಿಯಗೊಳಿಸಿದ್ದಾರೆ. ಅವನ್ನು ಜನತೆಯ ಬಾಗಿಲಿಗೆ ಕೊಂಡೊಯ್ದಿದ್ದಾರೆ. ಈ ಪ್ರಯತ್ನಗಳೆಲ್ಲ ಭಾರತದ ಐಕ್ಯತಾ ಸಾಧನೆಗೆ ಅಪಾರವಾದ ಕೊಡುಗೆ ನೀಡಿವೆ. ಭಕ್ತಿಕಾವ್ಯದ ವಿವಿಧ ಪಂಥಗಳು ನೀಡಿರುವ

ಕೊಡುಗೆಯನ್ನು ಗಣನೆಗೆ ತಂದುಕೊಳ್ಳದೆ ಜನಪ್ರಿಯ ಹಿಂದೂಧರ್ಮವನ್ನು ಕುರಿತು ಯೋಚಿಸುವುದೇ ಕಷ್ಟವಾಗುತ್ತದೆ. ಹಿಂದೂ ಧರ್ಮದ ಪ್ರತಿಮೆಗಳು, ಅದರ ವಸ್ತು ಮತ್ತು ಮೌಲ್ಯ ಎಲ್ಲವೂ ಸಂತ–ಕವಿಗಳ ಕೃತಿಗಳಿಂದ ಬಂದಿರುವಂಥವಾಗಿವೆ. ಹಿಂದೀ ಮಾತನಾಡುವ ಪ್ರದೇಶಗಳಲ್ಲಿ ರಾಮಚರಿತ ಮಾನಸ – ರಾಮಾಯಣ –, ತುಲಸೀದಾಸರ ಇತರ ಕೃತಿಗಳು, ಸೂರದಾಸರ *ಪದಗಳು*, ಕಬೀರನ *ಸಾಖಿ*ಗಳು, ಮೀರೆಯ *ಭಜನ್*‌ಗಳು ಹಿಂದೂ ಧಾರ್ಮಿಕ ಪ್ರವೃತ್ತಿಯನ್ನು ರೂಪಿಸಿವೆ. ಇತರ ಸಂತ ಕವಿಗಳೂ ಇದ್ದಾರೆ, ಅವರ ಕೊಡುಗೆಯೇನೂ ಕಡಮೆ ಮಹತ್ವದ್ದಲ್ಲ. ಕಬೀರನಲ್ಲದೆ ರಹೀಮ್ ಮತ್ತು ರಾಸ್‌ಖಾನ್ ಅಂತಹ ಮುಸ್ಲಿಂ ಕವಿಗಳು ಹಿಂದೂ ಭಕ್ತಿ ವಸ್ತುಗಳನ್ನು ಕುರಿತು ಹಿಂದಿಯ ಉಪಭಾಷೆಗಳಲ್ಲಿ ಬರೆದಿದ್ದಾರೆ ಎನ್ನುವುದನ್ನು ಗಮನಿಸಬೇಕು. ಇತರ ಭಾರತೀಯ ಭಾಷೆಗಳಲ್ಲೂ ಸಂತಕವಿಗಳ ಮಹಾನ್ ಶ್ರೇಣಿಯೇ ಇದೆ. ಅವರು ಹಿಂದೂ ಧರ್ಮ ಮತ್ತು ದರ್ಶನವನ್ನು ಶ್ರೀಮಂತಗೊಳಿಸಿದ್ದಾರೆ. ಪರಂಪರೆಗೆ ಮರು ವ್ಯಾಖ್ಯಾನ ನೀಡಿದ್ದಾರೆ, ಸುಧಾರಣೆಯ ಪ್ರಕ್ರಿಯೆಯನ್ನು ಚುರುಕುಗೊಳಿಸಿದ್ದಾರೆ. ಈ ದಿಸೆಯಲ್ಲಿ ತುಕಾರಾಮನ ಅಭಂಗಗಳು (ಮರಾಠಿ), ಬಸವಣ್ಣನ ವಚನಗಳು (ಕನ್ನಡ), ತ್ಯಾಗರಾಜರ ಕೃತಿಗಳು (ತೆಲುಗು) ಭಾರತೀಯ ಪರಂಪರೆಯ ಅತಿಮುಖ್ಯ ಅಂಗಗಳಾಗಿ ನಿಲ್ಲುತ್ತವೆ. ಜ್ಞಾನೇಶ್ವರನು ಮರಾಠಿಯಲ್ಲಿ ಗೀತೆಗೆ ವ್ಯಾಖ್ಯಾನ ಬರೆದನು; ಚೈತನ್ಯನು ಬಂಗಾಳದಲ್ಲಿ ಕೀರ್ತನ ಸಂಪ್ರದಾಯವನ್ನು ಬಲಗೊಳಿಸಿದನು; ನರಸೀ ಮೆಹತಾ ಗುಜರಾತಿಯಲ್ಲಿ ಭಕ್ತಿಗೀತೆಗಳನ್ನು ರಚಿಸಿದನು; ಕನಕ ಮತ್ತು ಪುರಂದರದಾಸರು ಕನ್ನಡದ ಹರಿದಾಸ ಪರಂಪರೆಯಲ್ಲಿ ಅತಿಮುಖ್ಯರಾದವರೆನಿಸಿದರು. ಪಟ್ಟಿಗೆ ಕೊನೆಯೇ ಇಲ್ಲ. ಇನ್ನು ಕೆಲವು ಹೆಸರುಗಳನ್ನು ಕೊನೆಯ ಅಧ್ಯಾಯದಲ್ಲಿ ನೋಡೋಣ. ಈಗ ಇಲ್ಲಿ ಎರಡು ಹೆಸರುಗಳನ್ನು ಉಲ್ಲೇಖಿಸಬೇಕು. ಏಕೆಂದರೆ ಒಂದು ವಿಶಾಲವಾದ ದರ್ಶನವನ್ನು ಅವರು ಪ್ರತಿನಿಧಿಸಿದರು, ದಿಟ್ಟತನದ ಸಂಯೋಜನೆಯ ಪ್ರಕ್ರಿಯೆಯಲ್ಲಿ ತೊಡಗಿದರು. ಮೊದಲೇ ಉಲ್ಲೇಖಿಸಿರುವ ಶಂಕರದೇವ ಅಸ್ಸಾಮಿಗೆ ಒಂದು ನೂತನ ಸಾಂಸ್ಕೃತಿಕ ವ್ಯಕ್ತಿತ್ವವನ್ನು ನೀಡಿದನು. ಆದರೆ ಅವನು ಸದಾ ತನ್ನ ಕಣ್ಣೆದುರಿಗಿಟ್ಟುಕೊಂಡದ್ದು ವಿಶಾಲತರವಾದ ಸಮಗ್ರ ಭಾರತ ವರ್ಷದ ದೃಶ್ಯವನ್ನು. ಭಾರತದ ಬೇರೆ ಬೇರೆ ಸ್ಥಳಗಳಲ್ಲಿನ ಕೃಷ್ಣಭಕ್ತಿ ಕೇಂದ್ರಗಳಿಗೆ ಆತನು ಯಾತ್ರೆ ಹೋಗಿದ್ದನು. ಇತರ ಕವಿಗಳು, ದಾರ್ಶನಿಕರು ಮತ್ತು ಸಂತರ ಕೃತಿಗಳ ಆಳವಾದ ಪರಿಜ್ಞಾನವನ್ನು ಪಡೆದಿದ್ದನು. ಇದು ಅವನ ಕೃತಿಯಲ್ಲಿ ವ್ಯಕ್ತಳೆದಿದೆ. ಗುರುನಾನಕ್‌ದೇವ್ (1469–1539) ದೇಶದ ಬೇರೆ ಬೇರೆ ಭಾಗಗಳಲ್ಲಿ ತನ್ನ ಹೆಜ್ಜೆ ಗುರುತುಗಳನ್ನು ಉಳಿಸಿದ್ದಾರೆ. ಇತರ ಸಂತರ ಕೃತಿಗಳ ಹಾಗೂ ದರ್ಶನದ ಪರಿಚಯ ಅವರಿಗಿತ್ತು, ಸಂಯೋಜನೆಯ ಪ್ರಯತ್ನದಲ್ಲಿ ಅವರು ತಾವೇ ಕೃತಿಗಳನ್ನು ರಚಿಸಿದ್ದಲ್ಲದೆ ಇತರ ಹಲವು ಭಾಷೆಗಳ ಸಂತ ಕವಿಗಳಿಂದ ಭಾಗಗಳನ್ನು ಆಯ್ದು ಪೋಣಿಸಿ ಹಾಡಿದರು. ಕೀರ್ತನ ಅಥವಾ ಭಕ್ತಿಗೀತೆಗಳ ಸಾಮುದಾಯಿಕ ಗಾಯನ ಭಾರತದ ಎಲ್ಲ ಭಾಗಗಳಲ್ಲೂ ಜನಪ್ರಿಯವಾಗಿದೆ, ಬಂಗಾಳ, ಅಸ್ಸಾಂ,

ಮಹಾರಾಷ್ಟ್ರಗಳಲ್ಲಿ ಹೆಚ್ಚು. ಭಕ್ತಿಗಾಯನದ ಇನ್ನೊಂದು ಶೈಲಿ ಕವ್ವಾಲಿಗೆ ಇಸ್ಲಾಮಿನದೇ ಮುಖ್ಯ ಸ್ಫೂರ್ತಿ. ಆದರೆ ಮುಸ್ಲಿಮೇತರ ಕವಿಗಳು ಸಂತರು ಅನುಭಾವಿಗಳ ರಚನೆಗಳನ್ನು ಅದು ಕೂಡಿಸಿಕೊಳ್ಳುತ್ತದೆ. ಭಕ್ತಿ ಕವಿಗಳ ರಚನೆಗಳಲ್ಲೂ ಭಕ್ತಿ ಸಂಗೀತದಲ್ಲೂ ಬೆರಗುಗೊಳಿಸುವ ಪ್ರಮಾಣದಲ್ಲಿ ವಸ್ತು ಸಾಮ್ಯತೆ ಇರುವುದನ್ನು ನೋಡಬಹುದಾಗಿದೆ.

ಭಾರತೀಯ ಚಿಂತನೆಯ ನೆಯಿಗೆಗೆ ದಕ್ಷಿಣ ಭಾರತದಷ್ಟೇ ಉತ್ತರ ಭಾರತವೂ ಕೊಡುಗೆ ನೀಡಿದೆ. ಹಿಂದೂ ಧರ್ಮದ ಬಹುತೇಕ ಆಧಾರ ಶಾಸ್ತ್ರಗ್ರಂಥಗಳು ಹುಟ್ಟಿದ್ದು ಉತ್ತರ ಭಾರತದಲ್ಲಿ. ಅವುಗಳ ದರ್ಶನವನ್ನು ಪರಿಷ್ಕಾರಗೊಳಿಸಿ ಕುಸುರಿ ಕೆಲಸ ಮಾಡಿದ್ದು ದಕ್ಷಿಣದ ಚಿಂತಕರು. ಹಿಂದೂ ದರ್ಶನದ ಮೂಲಾಧಾರವಾಗಿ ವೇದಾಂತದ ಮೂರು ಪಂಥಗಳು ರೂಪುಗೊಂಡುವು; ಅವುಗಳ ಮುಖ್ಯ ಪ್ರವರ್ತಕರು ಹುಟ್ಟಿದ್ದು ದಕ್ಷಿಣ ಭಾರತದಲ್ಲಿ. ಅದ್ವೈತ ಪಂಥದ ಪ್ರವರ್ತಕ ಶಂಕರರು (ಕ್ರಿ.ಶ. 788)ಕೇರಳಕ್ಕೆ ಸೇರಿದವರು. ವಿಶಿಷ್ಟಾದ್ವೈತ ಪಂಥದ ಪ್ರವರ್ತಕ ರಾಮಾನುಜ (ಕ್ರಿ.ಶ. 1017)ತಮಿಳುನಾಡಿನವರು; ಹಾಗೂ ದ್ವೈತ ಸಿದ್ಧಾಂತ ಪ್ರತಿಪಾದಕ ಮಧ್ವರು (ಕ್ರಿ.ಶ. 1238) ಕರ್ನಾಟಕದವರು.

ಭಿನ್ನಾಭಿಪ್ರಾಯ, ಖಂಡನೆ, ಮಂಡನೆ, ಪ್ರತಿಭಟನೆ ಮತ್ತು ಸುಧಾರಣೆಯ ಪರಂಪರೆಗಳಿಲ್ಲದೆ ಹೋಗಿದ್ದರೆ ಹಿಂದೂ ಸಮಾಜವು ಎಂದೋ ಮುರಿದು ಮೂಲೆ ಪಾಲಾಗಿ ಕೊನೆಗೆ ಕ್ಷಯಿಸಿ ಹೋಗಿಬಿಡುತ್ತಿದ್ದಿತು. ಈ ಪರಂಪರೆಗಳು ಕ್ಷೇಮ ಕವಾಟದ ಹಾಗೆ ಕೆಲಸ ಮಾಡಿ ಹೊಂದಾಣಿಕೆಗಳ ಮೂಲಕ ಸಮಾಜದ ಐಕ್ಯತೆ ಉಳಿಯುವಂತೆ ಮಾಡಿವೆ.

ಭಾರತದ ಪವಿತ್ರ ಭೂ ವಿವರಣೆಯೂ ಅದರ ಸಾಂಸ್ಕೃತಿಕ ಐಕ್ಯತೆಗೆ ಕೊಡುಗೆ ನೀಡಿದೆ. ಉತ್ತರದ ಹಿಮಾಲಯ ದೇವತೆಗಳ ನೆಲೆವೀಡು ಎಂದು ಪ್ರಸಿದ್ಧಿ ಪಡೆದಿದೆ; ಅನಂತ ಸಂಖ್ಯೆಯ ಋಷಿ ಮುನಿಗಳು ಅಲ್ಲಿ ನೆಲೆಸಿ ನಿಜವಾದ ಜ್ಞಾನದ ಅನ್ವೇಷಣೆಯಲ್ಲಿ ತಪಸ್ಸು ಮಾಡಿದ್ದಾರೆ.

ಹಿಂದೂ ಧರ್ಮದ ನಾಲ್ಕು ಪ್ರಧಾನ ಯಾತ್ರಾಸ್ಥಳಗಳು ನಾಲ್ಕು ಬೇರೆ ಬೇರೆ ದಿಕ್ಕುಗಳಲ್ಲಿವೆ. ಉತ್ತರದಲ್ಲಿ ಬದರೀನಾಥ (ಉತ್ತರಪ್ರದೇಶ), ಪೂರ್ವದಲ್ಲಿ ಪುರಿ (ಒರಿಸ್ಸಾ), ಪಶ್ಚಿಮದಲ್ಲಿ ದ್ವಾರಕಾ (ಗುಜರಾತ್) ಮತ್ತು ದಕ್ಷಿಣದಲ್ಲಿ ರಾಮೇಶ್ವರಂ (ತಮಿಳುನಾಡು). ಶಾಕ್ತ ಪಂಥದ ಅತಿ ಮುಖ್ಯ ಕೇಂದ್ರ ಬಹುಶಃ ಅಸ್ಸಾಮಿನ ಕಾಮಾಖ್ಯ ಪೀಠ. ಇತರ ಪವಿತ್ರ ಯಾತ್ರಾ ಸ್ಥಳಗಳ ಪಟ್ಟಿಯೂ ಇಲ್ಲಿ ಉಲ್ಲೇಖಿಸಲು ಸಾಧ್ಯವಾಗದಷ್ಟು ದೊಡ್ಡದು, ಅವು ದೇಶಾದ್ಯಂತ ಹರಡಿಕೊಂಡಿವೆ. ಅವುಗಳಲ್ಲಿ ಅತಿಮುಖ್ಯವಾದವೆಂದರೆ ಉತ್ತರಪ್ರದೇಶದಲ್ಲಿರುವ ಹರಿದ್ವಾರ, ಪ್ರಯಾಗ (ಅಲಹಾಬಾದ್) ಮತ್ತು ವಾರಣಾಸಿ; ಬಿಹಾರದಲ್ಲಿರುವ ಗಯೆ; ಜಮ್ಮು-ಕಾಶ್ಮೀರದಲ್ಲಿರುವ ಅಮರನಾಥ ಮತ್ತು ವೈಷ್ಣೋದೇವಿ; ರಾಜಾಸ್ಥಾನದಲ್ಲಿ ಪುಷ್ಕರ; ಮಧ್ಯಪ್ರದೇಶದಲ್ಲಿ ಉಜ್ಜಯಿನಿ ಮತ್ತು ಓಂಕಾರೇಶ್ವರ; ಮಹಾರಾಷ್ಟ್ರದಲ್ಲಿ ನಾಸಿಕ ಮತ್ತು ಪಂಢರಾಪುರ; ಆಂಧ್ರಪ್ರದೇಶದ ತಿರುಪತಿ; ತಮಿಳುನಾಡಿನ ಮಧುರೆ,

ತಂಜಾವೂರು, ಕನ್ಯಾಕುಮಾರಿಗಳ ದೇವಾಲಯ ನಗರಿಗಳು, ಕೇರಳದ ಗುರುವಾಯೂರು ಮೊದಲಾದವು. ಭಾರತದ ಎಲ್ಲ ಭಾಗಗಳಿಂದಲೂ ಇಲ್ಲಿಗೆ ಯಾತ್ರಿಕರು ಬರುತ್ತಾರೆ.

ಹಲವು ನದಿಗಳು ಪವಿತ್ರವೆನಿಸಿವೆ. ಗಂಗಾ, ಯಮುನಾ, ನರ್ಮದಾ, ಗೋದಾವರಿ, ಕೃಷ್ಣಾ ಮತ್ತು ಕಾವೇರಿ ಇವುಗಳಲ್ಲಿ ಮುಖ್ಯವಾದವು. ಅವುಗಳ ದಡದಲ್ಲಿ ಹಲವು ಪ್ರಧಾನ ಮತ್ತು ಸಾಮಾನ್ಯ ಯಾತ್ರಾಸ್ಥಳಗಳು ರೂಪುಗೊಂಡಿವೆ.

ಬೌದ್ಧ ದೇವಾಲಯಗಳು ಮತ್ತು ಸ್ತೂಪಗಳನ್ನು ಅನೇಕ ಕಡೆಗಳಲ್ಲಿ ನೋಡಬಹುದು. ಬಿಹಾರದಲ್ಲಿ ರಾಜಗೃಹ (ರಾಜ್‌ಗಿರ್) ಮತ್ತು ಬುದ್ಧಗಯಾ, ಉತ್ತರ ಪ್ರದೇಶದಲ್ಲಿ ಸಾರನಾಥ, ಮಧ್ಯ ಪ್ರದೇಶದ ಸಾಂಚಿ ಮತ್ತು ವಿದಿಶಾ ಇಂತಹ ಸ್ಥಳಗಳು. ಅಶೋಕನ ಶಾಸನಗಳನ್ನು ದೇಶದ ಹಲವು ಭಾಗಗಳಲ್ಲಿ ಬಂಡೆಗಳ ಮೇಲೆ ಕೆತ್ತಲಾಗಿದೆ. ಅವು ದಕ್ಷಿಣದಲ್ಲೂ ಇವೆ. ಲಡಾಖ್, ಹಿಮಾಚಲ ಪ್ರದೇಶ, ಉತ್ತರ ಪ್ರದೇಶದ ಉತ್ತರಖಂಡ್ ಭಾಗ, ಅರುಣಾಚಲ ಪ್ರದೇಶ ಹಾಗೂ ಇತರ ಕೆಲವು ಸ್ಥಳಗಳಲ್ಲಿ ಬೌದ್ಧಮಠಗಳನ್ನು ನೋಡಬಹುದು. ಭಾರತದ ವಿವಿಧ ಭಾಗಗಳಲ್ಲಿ ಸಾವಿರಾರು ಜೈನ ದೇವಾಲಯಗಳು ಮತ್ತು ಬಸದಿಗಳಿವೆ. ರಾಜಾಸ್ಥಾನದ ಮೌಂಟ್ ಅಬುವಿನಲ್ಲಿ ಅನುಪಮ ಸೌಂದರ್ಯವುಳ್ಳ ಹಲವಾರು ಜೈನ ಸ್ಮಾರಕಗಳಿವೆ. ಕರ್ನಾಟಕದ ಶ್ರವಣಬೆಳಗೊಳದಲ್ಲಿರುವ ಗೊಮ್ಮಟೇಶ್ವರನ ಬೃಹತ್ ವಿಗ್ರಹ ಅದರ ಗಾತ್ರ, ಅದರ ಕೆತ್ತನೆಯ ಪರಿಣತಿ ಇವುಗಳಿಂದಲೇ ನೋಡುವವರನ್ನು ಬೆರಗುಗೊಳಿಸುತ್ತದೆ, ಅವರಲ್ಲಿ ಭಕ್ತಿಭಾವವನ್ನು ಹುಟ್ಟಿಸುತ್ತದೆ.

ಬಂಡೆಗಳಲ್ಲಿ ಕೊರೆದ ಗವಿಗಳಲ್ಲಿ ಭಾರತೀಯ ಕಲೆ ಮತ್ತು ಸಾಂಸ್ಕೃತಿಕ ಪರಂಪರೆಯ ಹಲವು ಹಂತಗಳು ಸುರಕ್ಷಿತವಾಗಿವೆ. ಅವುಗಳಲ್ಲಿ ಮುಖ್ಯವಾದವು ಮಹಾರಾಷ್ಟ್ರದ ಮರಾಠವಾಡಾ ಪ್ರಾಂತದ ಅಜಂತಾ ಮತ್ತು ಎಲ್ಲೋರಾ, ಕರ್ನಾಟಕದ ಬಾದಾಮಿ ಮತ್ತು ಮಹಾರಾಷ್ಟ್ರದ ಎಲಿಫೆಂಟಾ. ದೇಶವೇ ಹೆಮ್ಮೆಪಟ್ಟುಕೊಳ್ಳಬಹುದಾದ ಸುಂದರ ವರ್ಣಚಿತ್ರಗಳು, ಮೂರ್ತಿಗಳು, ಶಿಲಾ ಕೆತ್ತನೆಗಳನ್ನು ಆ ಸ್ಥಳಗಳಲ್ಲಿ ನೋಡಬಹುದು.

ಇಸ್ಲಾಮಿಕ್ ಮಸೀದಿಗಳು, ಸ್ಮಾರಕಗಳು, ಮತ್ತು ಪ್ರಾರ್ಥನಾ ಸ್ಥಳಗಳನ್ನು ದೇಶಾದ್ಯಂತ ನೋಡಬಹುದು. ತಮ್ಮ ವಿಶಿಷ್ಟ ವಾಸ್ತುಶಿಲ್ಪದಿಂದಾಗಿ ಅವುಗಳಲ್ಲಿ ಹಲವು ಎದ್ದು ಕಾಣುತ್ತವೆ. ಉಸಿರು ಕಟ್ಟಿಸುವ ಸೌಂದರ್ಯವುಳ್ಳ ಕಲಾಕೃತಿ ತಾಜ್‌ಮಹಲ್ ಭಾರತೀಯ ಪರಂಪರೆಯ ಅಮೂಲ್ಯವಾದೊಂದು ಭಾಗ. ಹಲವು ಸ್ಮಾರಕಗಳು ಹಿಂದೂ ಮತ್ತು ಮುಸ್ಲಿಂ ಶೈಲಿಗಳ ಬೆಸುಗೆಯನ್ನು ಪ್ರತಿನಿಧಿಸುತ್ತವೆ. ದಿಟ್ಟತನದ, ಹೊಸ ಹೊಸದಾದ ದಾರಿ ಹಿಡಿದ ವಾಸ್ತು ಸೌಂದರ್ಯವನ್ನು ನೋಡಬಹುದು. ಹಾಗೆಯೇ ಅದ್ದೂರಿಯಾಗಿ ನಿರ್ಮಿಸಿದ ಹಲವು ಚರ್ಚುಗಳು ಭಾರತದಲ್ಲಿವೆ. ಹಿಂದೂ ಮುಸ್ಲಿಂ ವಾಸ್ತುಶಿಲ್ಪಗಳ ಮೇಳನವುಳ್ಳ ಸಿಖ್ ಪೂಜಾಸ್ಥಾನಗಳಾದ ಗುರುದ್ವಾರಗಳದೇ ವಿಶಿಷ್ಟ ಗುಂಪು. ಇದಕ್ಕೆ ವಿಶಿಷ್ಟ ಮಾದರಿ ಅಮೃತಸರದ ಸ್ವರ್ಣಮಂದಿರ. ದೇಶದ ಬೇರೆ ಬೇರೆ ಭಾಗಗಳಲ್ಲಿರುವ ಇನ್ನೂ

ಹಲವು ಗುರುದ್ವಾರಗಳು ನಮ್ಮ ಗಮನ ಸೆಳೆಯುತ್ತವೆ. ಸಿಖ್ ಗುರುದ್ವಾರಗಳಲ್ಲಿ ಜಾತಿಮತಗಳ ಕಟ್ಟಿಲ್ಲದೆ ಯಾರಿಗೆ ಬೇಕಾದರೂ ಪ್ರವೇಶವಿದೆ. ಅಲ್ಲಿಗೆ ಸಿಖ್ ಅಲ್ಲದ ಭಕ್ತರೂ ಹೇರಳ ಸಂಖ್ಯೆಯಲ್ಲಿ ಹೋಗುತ್ತಾರೆ.

ಭಾರತದ ಶಾಸ್ತ್ರೀಯ ಸಂಗೀತವು ದೇಶದ ಸಾಂಸ್ಕೃತಿಕ ಏಕತೆಯ ಇನ್ನೊಂದು ಆಯಾಮವನ್ನು ತೆರೆದು ತೋರಿಸುತ್ತದೆ. ಸಂಗೀತದ ಬೇರು ಸಾಮವೇದದಲ್ಲಿದೆ ಸಂಗೀತವನ್ನು ಉಪವೇದವೆಂದೇ ಕರೆಯಲಾಗಿದೆ. ಈ ಕಲೆಯ ಮೂಲ ಪುರುಷರು ಗಂಧರ್ವರು. ಅವರು ಈ ಕಲೆಯನ್ನು ಪೋಷಿಸಿ ಆನಂದ, ದಿವ್ಯತೆಗಳ ಅತ್ಯುನ್ನತ ಸ್ಥಿತಿಗೆ ಕೊಂಡುಹೋದರು. ಪುರಾಣ ಕತೆ ಹಾಗಿರಲಿ, ಭಾರತೀಯ ಸಂಗೀತವು ಜಾನಪದ ಪ್ರಕಾರಗಳಿಂದ ಬೇಕಾದಷ್ಟು ಪಡೆದಿದೆ. ಉದಾಹರಣೆಗೆ, ಉತ್ತರ ಭಾರತೀಯ (ಹಿಂದೂಸ್ಥಾನೀ) ಸಂಗೀತದ ಭೂಪಾಲಿ, ಆಹಿರ್ ಭೈರವ್ ಮತ್ತು ಸಾರಂಗ್ ಮೊದಲಾದ ರಾಗಗಳು ಜಾನಪದ ಮೂಲವುಳ್ಳವು ಎನ್ನುವುದರಲ್ಲಿ ಪ್ರಶ್ನೆಯೇ ಇಲ್ಲ. ಆಮೇಲೆ ಕಾಲದಿಂದ ಕಾಲಕ್ಕೆ ತಜ್ಞ ವಿದ್ವಾಂಸರು ಅವುಗಳಲ್ಲಿ ಪರಿಷ್ಕರಣಗಳನ್ನು ಮಾಡಿದ್ದಾರೆ. ಸುಗಮ ಸಂಗೀತ ಪ್ರಕಾರಗಳಾದ ಚೈತಿ, ಹೋರಿ, ಕಾಜರಿ, ರಸಿಯಾ, ಠುಮ್ರಿ ಮೊದಲಾದವಕ್ಕೂ ಜಾನಪದವೇ ಮೂಲ ಆಧಾರ. ಈ ಸಂಗೀತ ಪರಂಪರೆಯ ಬೆಳವಣಿಗೆಯು ನಿಜವಾಗಿ ಸಮಗ್ರ ಭಾರತೀಯ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಏಕೆಂದರೆ ಅದರ ಶೈಲಿ ವೈವಿಧ್ಯಕ್ಕೆ, ಸಂಪತ್ತಿಗೆ ಹಿಂದೂ ಮತ್ತು ಮುಸ್ಲಿಂ ಘರಾಣೆಗಳಿಗೆ ಸೇರಿದ ವಿದ್ವಾಂಸರೆಲ್ಲರೂ ಶ್ರಮಿಸಿದ್ದಾರೆ. ಸಂಗೀತದ ಉಪಸಂಸ್ಕೃತಿಯು ಜಾತಿಪಂಥಗಳ ತಡೆಗೋಡೆಗಳಿಗೆ ಅವಕಾಶ ನೀಡುವುದಿಲ್ಲ. ಹಿಂದೂ ಮತ್ತು ಮುಸ್ಲಿಂ ಅರಸರು ಸಮಾನವಾಗೇ ಅದಕ್ಕೆ ಆಶ್ರಯ ನೀಡಿದ್ದಾರೆ. ಸಂಗೀತದ ಉತ್ತರ ಮತ್ತು ದಕ್ಷಿಣ ಶೈಲಿಗಳ ನಡುವೆ ಸಮಾನಾಂಶಗಳು ಬೇಕಾದಷ್ಟಿವೆ. ಹಲವು ರಾಗಗಳು ಎರಡರಲ್ಲೂ ಸಮಾನವಾಗಿವೆ. ಕರ್ನಾಟಕ–ದಾಕ್ಷಿಣಾತ್ಯ–ಸಂಗೀತವನ್ನು ವಿದ್ಯಾರಣ್ಯರು ರೂಪಿಸಿದರು ಎನ್ನಲಾಗಿದೆ. ಇನ್ನೂ ಒಂದು ಕಾರಣಕ್ಕೆ ಆ ಮಹಾಪುರುಷರನ್ನು ಸ್ಮರಿಸಲಾಗುತ್ತದೆ. ಹಕ್ಕ ಮತ್ತು ಬುಕ್ಕ ಎಂಬ ಇಬ್ಬರು ಸೋದರರನ್ನು ಹುರಿದುಂಬಿಸಿ, ನೆರವು ನೀಡಿ ಅವರು ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಮಾಡಲು ಕಾರಣರಾದವರು ಅವರು. ಸುಮಾರು 250 ವರ್ಷಗಳ ಕಾಲ ಬಾಳಿದ ಈ ಸಾಮ್ರಾಜ್ಯವು ಕರ್ನಾಟಕ ಸಂಗೀತದ ವಿಕಸನ ಬೆಳವಣಿಗೆಗಳನ್ನು ಕಂಡಿತು. ವಿಜಯನಗರ ಪತನದ ನಂತರ ಸಂಗೀತದ ಈ ಶೈಲಿಯ ಆಶ್ರಯವು ತಮಿಳುನಾಡು ಮತ್ತು ಕೇರಳಗಳಿಗೆ ವರ್ಗಾವಣೆಗೊಂಡಿತು. ಅನಂತರ ಹೈದರ್‌ಅಲಿ, ಟಿಪ್ಪುಸುಲ್ತಾನ್ ಮತ್ತು ಅವರ ಅನಂತರ ಕರ್ನಾಟಕದ ಒಡೆಯರ್ ಅರಸರು ಮತ್ತೆ ಕರ್ನಾಟಕ ಸಂಗೀತಕ್ಕೆ ಅಪಾರ ಪ್ರೋತ್ಸಾಹ, ಆಶ್ರಯ ನೀಡಿದರು. ದಕ್ಷಿಣ ಭಾರತವು ಅದ್ವಿತೀಯ ಹಿಂದೂಸ್ತಾನೀ ಗಾಯಕ, ಗಾಯಿಕೆಯರನೇಕರನ್ನು ಕೊಡುಗೆಯಾಗಿ ನೀಡಿದೆ ಎಂಬುದನ್ನೂ ಗಮನಿಸಬೇಕು. ಮಲ್ಲಿಕಾರ್ಜುನ ಮನ್ಸೂರ್, ಗಂಗೂಬಾಯಿ ಹಾನಗಲ್, ಬಸವರಾಜ ರಾಜಗುರು ಮತ್ತಿತರ ಅನೇಕರು ಸುಪ್ರಸಿದ್ಧರು. ಹಾಗಾಗಿ ಸಂಗೀತವು ಪ್ರದೇಶ, ರಾಜ್ಯಗಳ ಎಲ್ಲ ಗಡಿಗಳನ್ನು

ಮೀರಿ ವ್ಯಾಪಿಸಿ ನಿಂತಿದೆ.

ಏಕತೆಯ ಅವಿಚ್ಛಿನ್ನ ಸೂತ್ರವೊಂದು ಭೂತಕಾಲವನ್ನೂ ವರ್ತಮಾನವನ್ನೂ ಒಂದುಗೂಡಿಸುತ್ತದೆ, ಹಾಗೆಯೇ ಕುಲ ಹಾಗೂ ಸಾಂಸ್ಕೃತಿಕ ವೈವಿಧ್ಯಗಳಿರುವ ವಿಭಿನ್ನ ದೇಶ ಭಾಗಗಳನ್ನು ಒಂದುಗೂಡಿಸುತ್ತದೆ. ಅತ್ಯಂತ ಅನಿರೀಕ್ಷಿತವಾದ ಸ್ಥಳಗಳಲ್ಲಿಯೂ ಇದನ್ನು ನೋಡಬಹುದು. ಉದಾಹರಣೆಗೆ, ಅತಿ ದೂರದ ಮೂಲೆಯ ರಾಜ್ಯ ಅರುಣಾಚಲ ಪ್ರದೇಶದಲ್ಲೂ ಕೆಲವು ಅಖಿಲ ಭಾರತ ಪರಂಪರೆಯ ಗುರುತುಗಳು ಕಾಣಬರುತ್ತವೆ, ಈ ದೇಶದ ಪವಿತ್ರ ಭೂವಿವರಣೆಯಲ್ಲಿ ಅಡಕವಾಗುತ್ತವೆ. ಬ್ರಹ್ಮಪುತ್ರಾ ನದಿಯು ಅರುಣಾಚಲ ಪ್ರದೇಶದಲ್ಲಿ ಪರಶುರಾಮಕುಂಡ ಎಂಬ ಹೆಸರಿನ ಒಂದು ದೊಡ್ಡ ಸರೋವರವನ್ನು ನಿರ್ಮಿಸಿದೆ. ಮಕರ ಸಂಕ್ರಾಂತಿಯ ದಿನ (ಜನವರಿ) ಆ ಪವಿತ್ರ ತೀರ್ಥದಲ್ಲಿ ಮೀಯುವುದರಿಂದ ಪಾಪಗಳೆಲ್ಲ ನಾಶ ಹೊಂದುತ್ತವೆ ಎಂಬ ನಂಬಿಕೆಯಿದೆ. ಮಲಿನಿತಾನ್ ಪಟ್ಟಣದಲ್ಲಿ ಹದಿನಾಲ್ಕು ಮತ್ತು ಹದಿನೈದನೆ ಶತಮಾನಗಳಿಗೆ ಸೇರಿದ ಕಲ್ಲಿನ ಕೆತ್ತನೆಗಳನ್ನು ನೋಡಬಹುದು. ಇವುಗಳಲ್ಲಿ ಗಮನಾರ್ಹವಾದವು ಐರಾವತದ ಮೇಲೆ ಕುಳಿತ ಇಂದ್ರ, ರಥದಲ್ಲಿರುವ ಸೂರ್ಯ, ನಂದಿಯನ್ನೇರಿದ ಶಿವ ಇವು. ಒಂದು ರಾಜ್ಯವನ್ನು ಸ್ಥಾಪಿಸಿದ. ಭೀಷ್ಮಕನೆಂಬ ರಾಜನ ಹೆಸರಿನಲ್ಲಿ ಭೀಷ್ಮಕನಗರ ಎಂಬ ಪಟ್ಟಣವಿದೆ. ಅವನ ಮಗಳನ್ನೇ ಕೃಷ್ಣನು ಮದುವೆಯಾದದ್ದು. ಈ ನಗರದ ಕೋಟೆ ಭವ್ಯವಾಗಿದೆ. ಹಿಂದಿನ ನಗರದ ಅವಶೇಷಗಳಿವೆ. 10,000 ಅಡಿ ಎತ್ತರದಲ್ಲಿ ಟವಾಂಗ್ ಎಂಬಲ್ಲಿರುವ ಬೌದ್ಧಮಠ ಬೌದ್ಧ ಧಾರ್ಮಿಕ ಸಾಹಿತ್ಯ, ಕಲೆ ಮತ್ತು ಸಂಸ್ಕೃತಿಗಳ ಭಂಡಾರವಾಗಿದೆ.

ಸಾಂಪ್ರದಾಯಿಕ ಹಿಂದೂ ಸಮಾಜದ ಚೌಕಟ್ಟಿಗೆ ಕೆಲವು ಸ್ಥೂಲವಾದ ಲಕ್ಷಣಗಳಿವೆ. ಇವು ಭಾರತಾದ್ಯಂತ ಒಂದೇ ತೆರನಾಗಿವೆ. ಹಾಗೆ ನೋಡಿದರೆ, ಅನ್ಯ ಮೂಲದ ಧರ್ಮಗಳನ್ನಾಚರಿಸುವ ಸಮುದಾಯಗಳಲ್ಲಿ ಈ ಲಕ್ಷಣಗಳ ಪ್ರಭಾವವನ್ನು ನೋಡಬಹುದು.

ಈ ಕೆಲವು ಲಕ್ಷಣಗಳನ್ನು ಪರಿಶೀಲಿಸೋಣ.

ಮೊದಲನೆಯದಾಗಿ, ಸಾಂಪ್ರದಾಯಿಕ ಹಿಂದೂ ಸಮಾಜವು ಆರೋಪಿತ ಸ್ಥಾನಮಾನವನ್ನು ನಂಬಿತ್ತು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ವ್ಯಕ್ತಿಯ ಸ್ಥಾನವನ್ನು ಅವನು ಆಕಸ್ಮಾತ್ತಾಗಿ ಯಾವ ಜಾತಿಯಲ್ಲಿ ಹುಟ್ಟಿದ್ದಾನೆ ಎನ್ನುವುದು ನಿರ್ಣಯಿಸುತ್ತಿತ್ತೇ ಹೊರತು ಅವನ ಕಾರ್ಯಪರಿಣತಿಯಲ್ಲ. ಗಳಿಸಿದ ಸ್ಥಾನಮಾನದ ಸಂದರ್ಭಗಳು ಇರಲಿಲ್ಲವೆಂದಲ್ಲ, ಇದ್ದುವು. ಆದರೆ ಮೇಲ್ಮುಖ ಚಲನೆ ಕಷ್ಟಕರ, ನಿಧಾನ. ಇದರ ಕುರುಹು ಈಗಲೂ ನಮ್ಮಲ್ಲಿ ಉಳಿದಿದೆ.

ಎರಡನೆಯದಾಗಿ, ಹಿಂದೂ ಸಮಾಜ ಶ್ರೇಣೀಕೃತ ರಚನೆಯನ್ನು ಹೊಂದಿತ್ತು. ಆಧಾರಭೂತವಾದ ವರ್ಗಗಳೆಂದರೆ ಲಂಬಾಕಾರದಲ್ಲಿ ಕಲ್ಪಿತವಾದ ವರ್ಣಗಳ ಶ್ರೇಣಿ ಹಾಗೂ ವರ್ಣವ್ಯವಸ್ಥೆಯಿಂದ ಬೇರೆಯಾದ ಐದನೆಯ ಒಂದು ವರ್ಗ. ಈ ಪ್ರತಿಯೊಂದು ವರ್ಗದೊಳಗೆ ಹಲವು ಜಾತಿಗಳಿದ್ದುವು. ಈಗಲೂ ಇವೆ. ಇವೂ

ಒಂದು ನಿರ್ದಿಷ್ಟ ಶ್ರೇಣಿಗೆ ಅಳವಟ್ಟಿವೆ. ಇವುಗಳ ಸ್ಥಾನಮಾನದ ವಿಷಯದಲ್ಲಿ ಕೆಲವು ಭಿನ್ನಾಭಿಪ್ರಾಯಗಳಿರಬಹುದು, ಆದರೆ ಅವುಗಳ ಮೂಲ ಸ್ಥಾನಮಾನದ ಮಟ್ಟ ನಿರ್ದಿಷ್ಟವಾಗಿ ನಿಗದಿಗೊಂಡಿದೆ.

ಮೂರನೆಯದಾಗಿ, ಸ್ಥಾನಮಾನ ನಿರ್ಧಾರಣದ ಮಾನದಂಡವು ಮತಾಚರಣೆಯಾಗಿತ್ತೇ ಹೊರತು ಆರ್ಥಿಕವೂ ಅಲ್ಲ, ರಾಜಕೀಯವೂ ಅಲ್ಲ. ವ್ಯಕ್ತಿಯು ತನ್ನೊಂದಿಗೆ ಸಮಾನವಾದ ಮತಾಚರಣೆಗಳುಳ್ಳ ವ್ಯಕ್ತಿಗಳೊಂದಿಗೆ ಸಂಪರ್ಕ ಬೆಳೆಸುತ್ತಿದ್ದನು, ಅವರನ್ನು ಸ್ಪರ್ಶಿಸುತ್ತಿದ್ದನು, ಅವರೊಂದಿಗೆ ಭೋಜನ ಮಾಡುತ್ತಿದ್ದನು; ತನಗಿಂತ ಕೆಳವರ್ಗದವರೊಂದಿಗಲ್ಲ. ಹಾಗೆ ಕೆಳವರ್ಗಗಳೊಂದಿಗೆ ದೈಹಿಕ ಸಂಪರ್ಕ ಬೆಳೆಸಿದರೆ, ಊಟ ಮಾಡಿದರೆ ಅದು ಮೈಲಿಗೆಯಾಗುತ್ತದೆ, ಮಲಿನತೆಯುಂಟಾಗುತ್ತದೆ ಎಂದು ಭಾವಿಸುತ್ತಿದ್ದನು. ಶುಚಿತ್ವವನ್ನು ಕಾಪಾಡಿಕೊಳ್ಳಲು, ಮಲಿನತೆಯನ್ನು ನಿವಾರಿಸಲು ವಿಸ್ತಾರವಾದ ನಿಯಮಾವಳಿಗಳಿದ್ದುವು.

ನಾಲ್ಕನೆಯದಾಗಿ, ಪುರುಷಾರ್ಥಗಳ – ಜೀವನದ ಗುರಿಗಳು – ಪರಿಕಲ್ಪನೆಯಿತ್ತು. ಅವು: ಧರ್ಮ (ಉದಾರತೆ, ನೈತಿಕತೆ, ಧಾರ್ಮಿಕತೆಯ ದಾರಿ – ವ್ಯಕ್ತಿಯ ಹಾಗೂ ಜಾತಿಯ ಕರ್ತವ್ಯಗಳು), ಅರ್ಥ (ಸಂಪತ್ತು, ಸುಖಜೀವನಗಳ ಸಾಧನೆ), ಕಾಮ (ದೈಹಿಕ ಕಾಮನೆಗಳ, ವಿಶೇಷತಃ ಲೈಂಗಿಕ ಸಂಪರ್ಕದ ಪೂರೈಕೆ) ಮತ್ತು ಮೋಕ್ಷ (ಮುಕ್ತಿ).

ಐದನೆಯದಾಗಿ, ಈ ನಾಲ್ಕು ಜೀವನೋದ್ದೇಶಗಳ ಜೊತೆಗೆ, ನಾಲ್ಕು ಆಶ್ರಮಗಳು ಅಥವಾ ಬದುಕಿನ ಹಂತಗಳು ಇದ್ದುವು. ಅವು ಬ್ರಹ್ಮಚರ್ಯ (ವಿದ್ಯಾರ್ಥಿ ಜೀವನ), ಗಾರ್ಹಸ್ಥ (ಧನ ಸಂಪಾದನೆ, ಲೈಂಗಿಕ ಕಾಮನೆಗಳ ಪೂರೈಕೆ ಮತ್ತು ಸಂತಾನ ಪಡೆಯುವಿಕೆಗಳನ್ನುಳ್ಳ ಗೃಹಸ್ಥನ ಜೀವನ), ವಾನಪ್ರಸ್ಥ (ಮುನಿಯ ಜೀವನ – ಕ್ರಮೇಣ ವಿರಕ್ತಿ ಬೆಳೆಸಿಕೊಳ್ಳುವಿಕೆ) ಮತ್ತು ಸನ್ಯಾಸ (ಕೌಟುಂಬಿಕ ಹಾಗೂ ಜಾಗತಿಕವಾದ ಸಂಬಂಧಗಳನ್ನು ಕಳಚಿಕೊಂಡು ವಿರಕ್ತನಾಗುವುದು). ಈ ಕೊನೆಯದು ದ್ವಿಜ ಜಾತಿಗಳಿಗೆ ಅಥವಾ ಮೇಲಿನ ಮೂರು ವರ್ಣಗಳಿಗೆ ಅನ್ವಯಿಸುತ್ತದೆಯೇ ಹೊರತು ಶೂದ್ರನಿಗಲ್ಲ.

ಆರನೆಯದಾಗಿ, ಸಾಂಪ್ರದಾಯಿಕ ಹಿಂದೂ ಧರ್ಮದಲ್ಲಿ ಇರುವ ಋಣದ (ಸಾಲ ಪೂರೈಸಬೇಕಾದ ಕರ್ತವ್ಯಗಳು) ಪರಿಕಲ್ಪನೆ. ವ್ಯಕ್ತಿಯು ದೇವರಿಗೆ, ಋಷಿಗಳಿಗೆ, ಪಿತೃಗಳಿಗೆ ಮತ್ತು ಸಮಾಜಕ್ಕೆ ಋಣ ತೀರಿಸಬೇಕಾಗುತ್ತದೆ. ಇದು ಧರ್ಮದ ಒಂದು ಭಾಗವೇ ಆಗಿದೆ.

ಕೊನೆಯದಾಗಿ, ಕರ್ಮ ಸಿದ್ಧಾಂತವು ಹಿಂದೂ ಧರ್ಮದ ಆಧಾರವಾಗಿದೆ. ಈ ಕಲ್ಪನೆಯನ್ನು ವಿವರಿಸುವುದು ತುಂಬಾ ಕಷ್ಟ. ಸಾಮಾನ್ಯ ಮನುಷ್ಯನಿಗೆ ಅರ್ಥವಾಗುವಂತೆ, ವ್ಯಕ್ತಿಯು ಹಿಂದಿನ ಜನ್ಮಗಳಲ್ಲಿ ಮಾಡಿದ ಕೆಲಸಗಳು ಈ ಜನ್ಮದ ಮೇಲೆ ಪ್ರಭಾವ ಬೀರುತ್ತವೆ. ಈ ಜನ್ಮದಲ್ಲಿ ಮಾಡುವ ಕರ್ಮಗಳು ಮುಂದಿನ ಜನ್ಮಗಳನ್ನು ನಿರ್ಧರಿಸುತ್ತವೆ. ಪುನರ್ಜನ್ಮ ಪರಿಕಲ್ಪನೆಯೂ ಈ ಕರ್ಮ ಸಿದ್ಧಾಂತದಲ್ಲಿ

ಬೆಸೆದುಕೊಂಡಿದೆ.

ಭಾರತದ ಅಗಾಧ ಜನಕೋಟಿಯ ಸಾಮಾಜಿಕ ಚೌಕಟ್ಟಿನ ಸೈದ್ಧಾಂತಿಕ ಅಡಿಪಾಯಗಳು ಇವು. ಆದರೆ ಈ ಲಕ್ಷಣಗಳು ಸಂಪ್ರದಾಯಕ್ಕೆ ಮತ್ತು ಶಾಸ್ತ್ರಗಳಿಗೆ ಸಂಬಂಧಿಸಿದವೇ ಹೊರತು, ವಾಸ್ತವವಾಗಿ ಸಾಮಾಜಿಕ ವಾಸ್ತವತೆಗಲ್ಲ. ಕಾಲಗಳು ಬದಲಾದ ಹಾಗೆ ಅವುಗಳಲ್ಲೂ ಸಾಕಷ್ಟು ಬದಲಾವಣೆಯಾಗಿದೆ. ಹೇಗೆ ಇರಲಿ ಅವು ಅಗಾಧವಾದ ಪ್ರಮಾಣದಲ್ಲಿ ಭಾವನಾತ್ಮಕ ಪ್ರಭಾವ ಬೀರಿವೆ. ಅನೇಕ ಹಿಂದೂಗಳು ಇಂದಿಗೂ ಈ ಲಕ್ಷಣಗಳು ಸಕ್ರಿಯವಾಗಿವೆ ಎಂದೇ ನಂಬುತ್ತಾರೆ. ಬೌದ್ಧಧರ್ಮ, ಜೈನಧರ್ಮ, ಸಿಖ್‌ಧರ್ಮಗಳು ಎಷ್ಟೇ ಭಿನ್ನಮತ ಹೊಂದಿದ್ದರೂ, ವಾಸ್ತವ ಆಚರಣೆಯಲ್ಲಿ ಅವುಗಳನ್ನು ತೊರೆಯುವಂತೆ ಮಾಡಲು ಸಾಧ್ಯವಾಗಲಿಲ್ಲ. ಇಸ್ಲಾಂ ಧರ್ಮಕ್ಕೆ ಮತ್ತು ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡವರು ಕೂಡ ಅವುಗಳಲ್ಲಿ ಅಂತರ್ಗತವಾದ ವಿಶ್ವದೃಷ್ಟಿಯನ್ನು ತಿರಸ್ಕರಿಸಲಾಗಲಿಲ್ಲ, ಕೇವಲ ಮತಾಂತರ ಕ್ರಿಯೆಯಿಂದ ಆಳವಾಗಿ ಬೇರುಬಿಟ್ಟ ನಂಬಿಕೆಗಳನ್ನು ಕಿತ್ತು ಹಾಕುವುದು ಅಸಾಧ್ಯ. ಪ್ರಾರಂಭದಲ್ಲಿ ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳೆರಡೂ ಆಗ ಇದ್ದ ಸಾಮಾಜಿಕ ವ್ಯವಸ್ಥೆಯನ್ನು ಅಂಗೀಕರಿಸಬೇಕಾಯಿತು. ಏಕೆಂದರೆ ಮತಾಂತರಿಗಳಿಗೂ ಜೀವನೋಪಾಯದ ಆವಶ್ಯಕತೆ ಮತ್ತು ಕನಿಷ್ಠ ಪ್ರಮಾಣದಲ್ಲಿ ಸಮುದಾಯದ ಬೆಂಬಲ ಅಗತ್ಯವಾಗಿತ್ತು, ಅವರು ತಮ್ಮ ಜಾತಿವೃತ್ತಿಗಳನ್ನು ಮುಂದುವರಿಸಲೇಬೇಕಾಗಿತ್ತು. ವಸ್ತುಗಳ ಮತ್ತು ಸೇವೆಗಳ ವಿನಿಮಯವನ್ನು ಒಳಗೊಳ್ಳುವಂತೆ ಪರಸ್ಪರಾವಲಂಬಿ ಸಂಬಂಧ ಹಿಂದಿನಂತೆಯೇ ಇರಬೇಕಾಗಿತ್ತು. ಅವರಿಗೆ ಅಗತ್ಯಬಿದ್ದಾಗ ಗ್ರಾಮ ಸಮುದಾಯವು ಅದನ್ನು ಒದಗಿಸುತ್ತಿತ್ತು. ಮುಸ್ಲಿಮರು ಮತ್ತು ಕ್ರಿಶ್ಚಿಯನರು ತಾವು ವಾಸವಾಗಿದ್ದ ಈ ಪ್ರದೇಶದ ಸಂಸ್ಕೃತಿಯ ಹಲವು ಲಕ್ಷಣಗಳನ್ನು ಹಂಚಿಕೊಂಡಿದ್ದರು. ಹಾಗೆಯೇ ಕೆಲವು ಹಿಂದೂಗಳೂ ಅವರ ಲಕ್ಷಣಗಳಲ್ಲಿ ಕೆಲವನ್ನು ಪಡೆದುಕೊಂಡರು. ಕಲೆ–ವಾಸ್ತುಕಲೆ, ವೇಷಭೂಷಣ–ಆಹಾರ, ಸಾಹಿತ್ಯ, ಸಂಗೀತ–ನೃತ್ಯ, ಔಷಧ–ತಂತ್ರಜ್ಞಾನ ಈ ಹಲವು ಕ್ಷೇತ್ರಗಳಲ್ಲಿ ಶೈಲಿಗಳ ಬೆಸುಗೆಯಾಯಿತು. ಅವರ ಕೂಡುಶ್ರಮದ ಫಲವಾಗಿ ಹೊಸ ಸಾಂಸ್ಕೃತಿಕ ರೂಪಗಳು ಮೂಡಿದುವು.

ಬಿಳಿಯರ ವಿದೇಶೀ ಆಳಿಕೆಯ ವಿರುದ್ಧವಾಗಿ ಭಾರತದ ಎಲ್ಲ ಗುಂಪುಗಳೂ ಒಂದಾಗಿ ಎದ್ದು ನಿಂತುದು ಐಕಮತ್ಯಕ್ಕೆ ಒಂದು ನೂತನ ಚಾಲನೆಯನ್ನು ಕೊಟ್ಟಿತು. ಹಿಂದೂ ಮುಸ್ಲಿಂ ಇಬ್ಬರಿಗೂ ಗಂಡಾಂತರದ ಭೀತಿ ಬಂದೆರಗಿತ್ತು, ಇಬ್ಬರೂ ಪ್ರತಿಭಟಿಸಿದರು, ಹಲವೊಮ್ಮೆ ಒಟ್ಟಾಗಿ. ರಾಷ್ಟ್ರೀಯ ಚಳುವಳಿಯು ಸಮುದಾಯಗಳನ್ನೂ ಸಂಸ್ಕೃತಿಗಳನ್ನೂ ಒಂದಾಗಿ ಬೆಸೆಯಿತು. ಕೊನೆಕೊನೆಗೆ ಹಿಂದೂಗಳು ಮತ್ತು ಮುಸ್ಲಿಮರ ನಡುವೆ ಆಳವಾದ ಅಪನಂಬಿಕೆ, ಭಿನ್ನಾಭಿಪ್ರಾಯಗಳು ಬೆಳೆದವು. ಇದರ ಪರಿಣಾಮವಾಗಿ ಭಾರತ ಎರಡು ಹೋಳಾಗಿ ಸೀಳಿತು. ಆಧುನಿಕ ವಿದ್ಯಾಭ್ಯಾಸ ಪದ್ಧತಿ, ಸಾರಿಗೆ ಸಂಪರ್ಕಗಳ ಜಾಲದ ರಚನೆ, ಉದ್ಯಮೀಕರಣ ಮತ್ತು ನಗರೀಕರಣಗಳಿಂದ ಐಕ್ಯತೆಗೆ ನೂತನ ಆಧಾರಗಳು

ಲಭಿಸಿದುವು.

ಕಳೆದ ಕೆಲವು ದಶಕಗಳಲ್ಲಿ ಹಲವು ಸಮಸ್ಯೆಗಳು ಉಳಿದುಕೊಂಡು ಬಂದಿವೆ, ಕೆಲವನ್ನು ಪರಿಹರಿಸಲಾಗಿದೆ. ಕುಲಸಂಬಂಧಿ ಚಲನೆಗಳು, ಧಾರ್ಮಿಕ ಪ್ರಾಮಾಣ್ಯವಾದ, ಅಂತರ್-ಮತೀಯ ಸಂಬಂಧಗಳಲ್ಲಿ ಹೊಸ ತಿರುವುಗಳು, ಭಾಷಾ ಸಂಘರ್ಷಗಳು, ಪ್ರಾಂತೀಯತೆ, ಉಪಪ್ರಾದೇಶಿಕತೆ – ಇವು ಸಮಕಾಲೀನ ಭಾರತೀಯ ಸಮಾಜಕ್ಕೆ ಬಹು ದೊಡ್ಡ ಸವಾಲನ್ನು ಒಡ್ಡಿವೆ.

# ವರ್ಣ ಮತ್ತು ಜಾತಿ

ಭಾರತೀಯ ಸಮಾಜದ ಸ್ಥೂಲ ವಿಭಾಗಗಳು ಮತ್ತು ಉಪ ವಿಭಾಗಗಳು ಸಂಕೀರ್ಣವಾಗಿವೆ, ನಮ್ಮನ್ನು ದಿಕ್ಕುಗೆಡಿಸುವಂತಿವೆ. ಅವುಗಳನ್ನು ಸರಳಗೊಳಿಸುವ ಸಣ್ಣ ಪ್ರಯತ್ನವು ಕೂಡ ಸಾಮಾಜಿಕ ವಾಸ್ತವ ಸ್ಥಿತಿಯನ್ನು ವಿರೂಪಗೊಳಿಸುತ್ತದೆ. ಶಾಸ್ತ್ರಗ್ರಂಥಗಳು ಮತ್ತು ಪ್ರಾಚೀನ ಸಾಮಾಜಿಕ ನೀತಿ ಸಂಹಿತೆಗಳು ಸಾಮಾಜಿಕ ವ್ಯವಸ್ಥೆಯ ರೂಪರೇಷೆಯನ್ನು ಒದಗಿಸಿವೆಯಾದರೂ ಅವು ಬಹುಮಟ್ಟಿಗೆ 'ಹೇಗಿರಬೇಕು' ಎಂದು ಹೇಳುತ್ತವೆಯೇ ಹೊರತು 'ಹೇಗಿದೆ' ಎಂದು ಹೇಳುವುದಿಲ್ಲ. ವಾಸ್ತವದಲ್ಲಿ ನಡೆದಿರುವ ಕತೆ ಬೇರೆಯೇ. ತತ್ವಗಳನ್ನು ದಾಟಿ, ನೀತಿ ನಿಯಮಗಳನ್ನು ಕುಶಲತೆಯಿಂದ ನಿರ್ವಹಿಸಬಹುದು. ಭಾರತವನ್ನು ಕುರಿತು ಬರೆದಿರುವ ಅನೇಕ ಲೇಖಕರು ಈ ಪರಿಸ್ಥಿತಿಯನ್ನು ಅತಿಯಾಗಿ ಸರಳೀಕರಿಸಿದ್ದಾರೆ. ಉದಾಹರಣೆಗೆ "ನಾಲ್ಕು ಜಾತಿ ವ್ಯವಸ್ಥೆ" ಯನ್ನು ಕುರಿತು ಹೇಳುವುದು ತಪ್ಪುದಾರಿಗೆಳೆಯುತ್ತದೆ. ನಾವು ಈಗಾಗಲೇ ಗಮನಿಸಿರುವಂತೆ, ಜಾತಿಗಳು ಅಸಂಖ್ಯಾತವಾಗಿವೆ. ಕೆಲವನ್ನು ವರ್ಗೀಕರಿಸುವುದಾಗಲಿ, ಸಾಮಾಜಿಕ ಸ್ಥಾನ ನಿರ್ಧರಿಸುವುದಾಗಲಿ ಸಾಧ್ಯವಾಗಿಲ್ಲ. ನಿರ್ದಿಷ್ಟ ಪ್ರದೇಶಗಳಿಗೆ ಸಂಬಂಧಿಸಿದ ಅಧ್ಯಯನಗಳನ್ನು ನಡೆಸಿರುವ ಮಾನವಶಾಸ್ತ್ರಜ್ಞರು ಮತ್ತು ಸಮಾಜ ಶಾಸ್ತ್ರಜ್ಞರು ಈ ವ್ಯವಸ್ಥೆಯ ಕಾರ್ಯರೂಪ ಹೇಗಿದ್ದಿತೆಂಬುದರ ವಿಶ್ವಾಸಾರ್ಹ ನಿರೂಪಣೆ ಕೊಟ್ಟಿದ್ದಾರೆ. ಆದರೆ ಅದನ್ನು ರಾಷ್ಟ್ರೀಯ ಚಿತ್ರವೆಂದು ತೋರಿಸಲು ಸಾಧ್ಯವಿಲ್ಲ. ಏಕೆಂದರೆ ವ್ಯವಸ್ಥೆಯು ದೇಶದ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ವರ್ತಿಸುತ್ತದೆ. ಸಮುದಾಯಗಳು, ವರ್ಗಗಳು, ತಮ್ಮ ನಿರ್ದಿಷ್ಟ ಲಕ್ಷಣವನ್ನು ಮತ್ತೆ ಮತ್ತೆ ನಿರೂಪಿಸುತ್ತಾ ತಮ್ಮ ಭೂತಕಾಲ ಚಿತ್ರವನ್ನು ಪುನರ್ನಿರ್ಮಿಸುತ್ತಿರುವಾಗ ಅವುಗಳ ಸ್ಥಾನಮಾನವೂ ವ್ಯತ್ಯಾಸಗೊಳ್ಳುತ್ತಲೇ ಹೋಗುತ್ತದೆ. ವ್ಯವಸ್ಥೆಯಲ್ಲಿ ತಮ್ಮ ಸ್ಥಾನವನ್ನು ಕುರಿತು ಅವರಿಗೇ ಖಚಿತವಾದ ವಿಶ್ವಾಸವಿರುವುದಿಲ್ಲ. ಅದು ಪದೇ ಪದೇ ಬದಲಾಗುತ್ತದೆ, ಅವರ ಬದಲಾದ ನಿರ್ದಿಷ್ಟತೆಯನ್ನು ಸಮಾಜವು ಸ್ವೀಕರಿಸುವುದಾದರೂ ಬಹಳ ನಿಧಾನ.

ಒಬ್ಬ ಭಾರತೀಯನಿಗೆ ಹಲವು ಗುರುತು ಚೀಟಿಗಳಿರುತ್ತವೆ. ಅವನು ಅಥವಾ ಅವಳು ಏನೆಂದು ಹೇಳಿಕೊಳ್ಳಬೇಕು ಎನ್ನುವುದನ್ನು ಸಂದರ್ಭವು ನಿರ್ಣಯಿಸುತ್ತದೆ.

ಧರ್ಮ, ನಿವಾಸಸ್ಥಳ, ಕುಟುಂಬನಾಮ ಇವು ಕೆಲವೊಮ್ಮೆ ಸಾಕಾಗಬಹುದು. ಮತ್ತೆ ಕೆಲವು ಸಾರಿ ಅವನು ತನ್ನ ಜಾತಿ, ಗೋತ್ರ ಮತ್ತು ಕುಲವನ್ನು ನಿರ್ದಿಷ್ಟವಾಗಿ ಹೇಳಬೇಕಾಗುತ್ತದೆ. ಜಾತಿಯನ್ನು ಸಾಮಾನ್ಯವಾಗಿ ಇಂಗ್ಲಿಷಿನಲ್ಲಿ ಕ್ಯಾಸ್ಟ್ ಎಂದು ಕರೆಯಲಾಗಿದೆ. ಆದರೆ ಆ ಪದಕ್ಕೆ ಬೆರಗುಗೊಳಿಸುವಷ್ಟು ವೈವಿಧ್ಯಮಯ ಅರ್ಥ ಪರಂಪರೆ ಇದೆ. ಅದು ಒಂದು ಇಡೀ ವರ್ಣವನ್ನೇ ಸೂಚಿಸಬಹುದು ಇಲ್ಲವೆ, ಸ್ವಗೋತ್ರ ವಿವಾಹವುಳ್ಳ, ನಿರ್ದಿಷ್ಟ ಸ್ಥಾನಮಾನ ಹೊಂದಿದ ತಂಡವನ್ನು ಹೇಳಬಹುದು. ಅಂಥದೊಂದು ತಂಡದ ಉಪವಿಭಾಗವನ್ನೋ ಅದರಿಂದ ಸಿಡಿದ ಒಂದು ಶಾಖೆಯನ್ನೋ ಸೂಚಿಸಲೂಬಹುದು. ಪ್ರಸ್ತುತ ಪುಸ್ತಕದಲ್ಲಿ ಜಾತಿ ಎಂಬ ಪದವನ್ನು ಮೇಲಿನ ಮೂರರಲ್ಲಿ ಎರಡನೆಯ ಅರ್ಥವನ್ನು ಕೊಡುವಂತೆ ಉಪಯೋಗಿಸಲಾಗಿದೆ. ವ್ಯಕ್ತಿ ತನ್ನ ಜಾತಿಯಲ್ಲಿ ವಿವಾಹವಾಗಬಹುದು, ಆದರೆ ತನ್ನ ಗೋತ್ರದಿಂದ ಹೊರಗೆ ಆಗಬೇಕು. ಪ್ರಾಚೀನ ಕಾಲದಲ್ಲಿ ಒಬ್ಬ ಸಮಾನ ಮೂಲಪುರುಷನಿಂದ ಇಳಿದುಬಂದ ಪರಂಪರೆಯನ್ನು ಗೋತ್ರವು ಸೂಚಿಸುತ್ತದೆ. ಈ ಮೂಲಪುರುಷ ಸಾಮಾನ್ಯವಾಗಿ ಒಬ್ಬ ಪೌರಾಣಿಕ ವ್ಯಕ್ತಿ ಇಲ್ಲವೆ ಒಬ್ಬ ಋಷಿ. ಹಲವು ಜಾತಿಗಳಲ್ಲಿ – ವಿಶೇಷವಾಗಿ ಧಾರ್ಮಿಕಾಚರಣೆಯ ಶ್ರೇಣಿಯಲ್ಲಿ ಕೆಳಗಿನ ಹಂತಗಳಲ್ಲಿರುವ ಕೆಲವು ಜಾತಿಗಳಲ್ಲಿ ಕುಲದೇವತಾ ಸಂಬಂಧಿಯಾದ ನಂಬಿಕೆಗಳು ಉಳಿದುಬಂದಿವೆ. ಹಿಂದೆ ಒಂದು ಪ್ರಾಣಿ ಅಥವಾ ಜಡವಸ್ತುವಿಗೆ ಸಂಪರ್ಕವಿದ್ದುದನ್ನು ಅವು ತೋರಿಸುತ್ತವೆ. ಕುಲ (ಅಥವಾ ವಂಶ) ಆರು ಅಥವಾ ಏಳು ತಲೆ ಹಿಂದಿನಿಂದ ಬಂದ ಪರಂಪರೆಯನ್ನು ಸೂಚಿಸುತ್ತದೆ. ಅದಕ್ಕಿಂತ ಹಿಂದೆ ಪೀಳಿಗೆ ಅಸ್ಪಷ್ಟವಾಗುತ್ತದೆ. ಕೆಲವು ಜಾತಿಗಳಲ್ಲಿ, ಮತ್ತು ಕೆಲ ಬುಡಕಟ್ಟುಗಳಲ್ಲಿ ಅವಕ್ಕೇ ಸಂಬಂಧಿಸಿದ ವೃತ್ತಿ ಗಾಯಕರು ಅಥವಾ ಚಾರಣ ಕವಿಗಳಿದ್ದಾರೆ. ಅವರು ಆ ಕುಲಗಳಿಗೆ ಇನ್ನೂ ಬಹಳ ಹಿಂದಿನ ಇತಿಹಾಸವನ್ನು ಹೇಳಿ, ಪೌರಾಣಿಕ ವ್ಯಕ್ತಿಯೊಬ್ಬನ ಮೂಲವನ್ನು ಕೊಡುತ್ತಾರೆ. ಈ ವಂಶಕಥನದಲ್ಲಿ ಬಹುಪಾಲು ಕಲ್ಪನೆಯಿರಬಹುದು. ಮೂಲಪುರುಷರ ಪರಾಕ್ರಮ, ಧೈರ್ಯ, ಸ್ಥೈರ್ಯಾದಿಗಳು ಮತ್ತು ಸದ್ಗುಣಗಳ ಕಥೆಯೂ ಅಷ್ಟೆ.

ಮೊದಲು ವರ್ಣದ ಕಡೆಗೆ ಗಮನವನ್ನು ಕೇಂದ್ರೀಕರಿಸಿ ಆಮೇಲೆ ಜಾತಿಯ ಕಡೆಗೆ ತಿರುಗೋಣ.

## ವರ್ಣ

ಹಿಂದೂ ಸಮಾಜವ್ಯವಸ್ಥೆಯಲ್ಲಿ ವರ್ಣ ಕೇವಲ ಪರಾಮರ್ಶನ ಅಂಶವಾಗಿ ಉಳಿದಿದೆ. ಅದು ಸಾಮಾಜಿಕ ರಚನೆಯ ಸಕ್ರಿಯ ಘಟಕವಾಗಿಲ್ಲ. ಬೇರೆ ಬೇರೆ ಜಾತಿಗಳ ಆರೋಪಿತ ಸ್ಥಾನಮಾನಗಳನ್ನು ಕುರಿತು ಅದು ಸ್ಥೂಲವಾಗಿ ಹೇಳುತ್ತದೆ. ಅದೊಂದು ವರ್ಗೀಕರಣ ಸಾಧನವೂ ಹೌದು. ಅದರಲ್ಲಿ ಸಮಾನ ಧಾರ್ಮಿಕ ಆಚರಣೆಗಳನ್ನುಳ್ಳ ಹಲವು ಜಾತಿಗಳನ್ನು ಒಟ್ಟುಗೂಡಿಸಿ ಅನುಕ್ರಮವಾಗಿ ಶ್ರೇಣೀಕರಿಸಲಾಗಿದೆ. ಮೇಲಿನ ಮೂರು ಹಂತಗಳು ಬ್ರಾಹ್ಮಣ, ಕ್ಷತ್ರಿಯ ಮತ್ತು

ವೈಶ್ಯ. ಅವರನ್ನು ದ್ವಿಜ (ಎರಡು ಸಾರಿ ಹುಟ್ಟಿದವರು)– ಜೈವಿಕವಾಗಿ ಒಂದು ಸಾರಿ ಹುಟ್ಟುವುದರ ಜೊತೆಗೆ ದೀಕ್ಷೆಯನ್ನು ಪಡೆದಾಗ ಇನ್ನೊಂದು ಹುಟ್ಟು ಪಡೆದ ಹಾಗೆ – ಎಂದು ಪರಿಗಣಿಸುತ್ತಾರೆ. ನಾಲ್ಕನೆಯ ಹಂತವಾದ ಶೂದ್ರ ವರ್ಗದಲ್ಲಿ ಅನೇಕ ಬಗೆಯ ಕುಶಲಕರ್ಮಿಗಳು ಮತ್ತು ಶುಚಿಯಾದ, ನಿರ್ಮಲ ವೃತ್ತಿಗಳನ್ನು ನಿರ್ವಹಿಸುವ ಪರಿಣತ ಜಾತಿಗಳು ಸೇರುತ್ತವೆ. ವರ್ಣದ ಶ್ರೇಣಿ ಇಲ್ಲಿಗೆ ಮುಗಿಯುತ್ತದೆ. ಆದರೆ ಐದನೆಯದೊಂದು ಹಂತವೂ ಇದೆ. ಅಶುಚಿಯೂ ಮಲಿನಕಾರಕವೂ ಆದ ವೃತ್ತಿಗಳನ್ನು ನಡೆಸುವವರು ಇದರಲ್ಲಿ ಸೇರುತ್ತಾರೆ. ಅವರು ಅಂತ್ಯಜರು ಅಂದರೆ, ವರ್ಣವ್ಯವಸ್ಥೆಯಿಂದ ಬೇರೆಯಾದವರು. ಈ ಹಂತದ ಜಾತಿಗಳನ್ನು ಸಾಮಾನ್ಯವಾಗಿ ಅಸ್ಪೃಶ್ಯರೆಂದು ಪರಿಗಣಿಸಲಾಗುತ್ತದೆ. ಇಂದು ಅಸ್ಪೃಶ್ಯತೆಯನ್ನು ಕಾನೂನಿನ ಪ್ರಕಾರ ನಿಷೇಧಿಸಿದೆ. ಆದರೆ ಬೇರೆ ಬೇರೆ ರೂಪಗಳಲ್ಲಿ ಅಥವಾ ನೇರವಾಗಿ ಇಂದಿಗೂ ಈ ಕಳಂಕಿತ ಆಚರಣೆ ಭಾರತದ ಹೆಚ್ಚು ಕಡಮೆ ಎಲ್ಲಾ ಭಾಗಗಳಲ್ಲೂ ಚಾಲ್ತಿಯಲ್ಲಿದೆ. ಅನುಸೂಚಿತ ಜಾತಿಗಳು – ಅಂತ್ಯಜರನ್ನು ಗಾಂಧೀಜಿ ಹರಿಜನರೆಂದು ಕರೆದರು. ಇಂದು ಅವರು ತಮ್ಮನ್ನು ದಲಿತರೆಂದುಕೊಳ್ಳುತ್ತಾರೆ. ಇವರು ಭಾರತದ ಜನಸಂಖ್ಯೆಯ ಸುಮಾರು ಶೇ. 16ರಷ್ಟು ಇದ್ದಾರೆ. ಆದಿವಾಸಿ, ಆದಿಮಜಾತಿ, ಅಥವಾ ಗಿರಿಜನರೆನಿಸುವ ಅನುಸೂಚಿತ ಬುಡಕಟ್ಟುಗಳು ಶೇ. 7 – ಈ ವರ್ಗದಲ್ಲೇ ಸೇರುತ್ತವೆ. ಇವರಲ್ಲಿ ಬಹುತೇಕ ಜನರಿಗೆ ಅಸ್ಪೃಶ್ಯತೆಯ ಕಳಂಕ ಹತ್ತಿಲ್ಲ. ಹೀಗೆ ಬಹುಪಾಲು ಜಾತಿಗಳನ್ನು ಗುಂಪು ಮಾಡಬಹುದಾದ ಐದು ಹಂತಗಳಿವೆ.

ವ್ಯವಸ್ಥೆ ಅಚ್ಚುಕಟ್ಟಾಗಿದೆ ಮತ್ತು ಆಕರ್ಷಕವಾಗಿದೆ; ಅದೇ ಸಮಯಕ್ಕೆ ಆದರ್ಶಯುತವಾಗಿದೆ ಮತ್ತು ಅತಿ ಸರಳವಾಗಿದೆ. ಗುಣಗಳು ಮತ್ತು ಕರ್ಮಗಳ ಆಧಾರದಿಂದ ಸಮಾಜದಲ್ಲಿ ಮಾಡಬಹುದಾದ ಸ್ಥೂಲ ವರ್ಗೀಕರಣದ ಮಾದರಿಯನ್ನು ಅದು ಚಿತ್ರಿಸುತ್ತದೆ. ಆದರೆ ಅದು ವಾಸ್ತವ ಸಾಮಾಜಿಕ ಚಿತ್ರವನ್ನು ಸರಿಯಾಗಿ ತೋರಿಸುವುದಿಲ್ಲ. ಏಕೆಂದರೆ ವಾಸ್ತವ ಸ್ಥಿತಿ ತುಂಬ ಜಟಿಲವಾಗಿದೆ. ಮೊದಲೇ ಹೇಳಿರುವ ಹಾಗೆ ನಾಲ್ಕು ಹಂತದ ವ್ಯವಸ್ಥೆ ಹಿಂದೂ ಸಮಾಜದ ಭಾಗವೇ ಆಗಿರುವ ಅಸ್ಪೃಶ್ಯ ಜಾತಿಗಳನ್ನು ಹೊರತುಪಡಿಸುತ್ತದೆ. ಇನ್ನೂ ಕೆಲವು ಅಸ್ಪಷ್ಟತೆಗಳೂ ಉಂಟು. ಉತ್ತರ ಮತ್ತು ಪೂರ್ವ ಭಾರತದಲ್ಲಿರುವ ಕಾಯಸ್ಥರನ್ನು ಯಾವ ವರ್ಣಕ್ಕೆ ಸೇರಿಸಬಹುದು ? ಕೇರಳದ ನಾಯರ್‌ರನ್ನು ಕ್ಷತ್ರಿಯರೆಂದು ವರ್ಗೀಕರಿಸಬೇಕೋ, ಶೂದ್ರರೆಂದೋ ? ವಾಸ್ತವವಾಗಿ ಅಖಿಲಭಾರತ ವ್ಯಾಪ್ತಿಯಾಗಿ ಅನ್ವಯವಾಗುವ ಒಂದು ಸಮಾನ ಶ್ರೇಣಿ ವ್ಯವಸ್ಥೆ ಇಲ್ಲ. ಕೆಲವು ಜಾತಿಗಳಿಗೆ ದೇಶದ ಒಂದು ಭಾಗದಲ್ಲಿ ಒಂದು ಬಗೆಯ ವರ್ಗೀಕೃತ ಸ್ಥಾನವಿದ್ದರೆ ಇನ್ನೊಂದು ಭಾಗದಲ್ಲಿ ಬೇರೊಂದೇ ಸ್ಥಾನವಿರುತ್ತದೆ. ವರ್ಣಗಳ ಹಂಚಿಕೆಯೂ ಹಿಂದೂ ಸಮಾಜದಾದ್ಯಂತ ಏಕರೂಪದಲ್ಲಿಲ್ಲ; ದಕ್ಷಿಣದಲ್ಲಿ ಸ್ಥಳೀಯರಾದ ಅಧಿಕೃತ ಕ್ಷತ್ರಿಯರಾಗಲಿ, ವೈಶ್ಯರಾಗಲೀ ಇಲ್ಲ. ಮಾದರಿಯಲ್ಲಿ ಕಂಡುಬರುವ ಹಾಗೆ ಅಚ್ಚುಕಟ್ಟಾದ ವ್ಯವಸ್ಥೆ ಮತ್ತು ವರ್ಗೀಕರಣ ವಾಸ್ತವದಲ್ಲಿ ಇಲ್ಲ. ಕೆಲವು ಜಾತಿಗಳ ನೆಲೆ ಅಸ್ಪಷ್ಟವಾಗಿದೆ.

ಹಿಂದೆ ವಿದ್ವದ್ಗೋಷ್ಠಿಗಳಲ್ಲಿ, ರಾಜರ ಆಸ್ಥಾನಗಳಲ್ಲಿ, ಈಚೆಗೆ ನ್ಯಾಯಾಲಯಗಳಲ್ಲಿ ಅದು ಚರ್ಚಿತವಾಗುತ್ತದೆ. ಕೆಲವು ವಿವಾದಗಳು ಸಂಘರ್ಷದಲ್ಲಿ ಪರ್ಯವಸಾನವಾಗಿ ಕೊನೆಗೆ ತೀರಾ ವಿರುದ್ಧವಾದ ಫಲಿತಾಂಶ ವ್ಯಕ್ತವಾಗುವುದುಂಟು. ವರ್ಣ ಸ್ಥಾನಮಾನದ ಬದಲಾಗದಿರುವಿಕೆಯನ್ನೂ ಪ್ರಶ್ನಿಸಲಾಗಿದೆ. ನಿಗದಿತ ಹಂತದಿಂದ ಮೇಲು ಬಡ್ತಿ ನೀಡಿದ ಕೆಲವು ನಿದರ್ಶನಗಳನ್ನು ಶಾಸ್ತ್ರಗ್ರಂಥಗಳು ಕೊಡುತ್ತವೆ. ಇಡೀ ಜಾತಿಯು ನಿರೀಕ್ಷಿತ ಗುಣಮಟ್ಟಕ್ಕೆ ತಕ್ಕಂತೆ ನಡೆದಿಲ್ಲವೆಂದು ತಿಳಿದಾಗ ಅದರ ಸ್ಥಾನವನ್ನು ಕೆಳಗೆಳೆದಿರುವ ನಿದರ್ಶನವೂ ಇದೆ. ಭಕ್ತಿಪಂಥದ ಸಾಧು, ಸಂತರು ವಿನ್ಯಾಸದ ಬದಲಾಗದ ಕಠಿಣ ಲಕ್ಷಣವನ್ನು ಪ್ರಶ್ನಿಸಿದ್ದಾರೆ. ವ್ಯವಸ್ಥೆಯ ಕಠಿಣತೆಯನ್ನೂ, ಅಸಮತೆಯನ್ನೂ ವಿರೋಧಿಸಿ ಆಗಾಗ ಶಕ್ತಿಯುತವಾದ ಚಳುವಳಿಗಳು ಕಾಣಿಸಿಕೊಂಡಿರುವುದೂ ಉಂಟು.

ಸಮಾಜ ವ್ಯವಸ್ಥೆಯ ಕಾರ್ಯವಿಧಾನದಲ್ಲಿ ವರ್ಣ ಪಂಗಡಗಳಿಗೆ ಸೀಮಿತ ಪ್ರಯೋಜನಗಳಿವೆ. ನಿಗದಿತ ಸ್ಥಾನಮಾನವನ್ನು ತಟಕ್ಕನೆ ಸೂಚಿಸುವ, ಸ್ಥೂಲವಾದ ಅಂಶಗಳನ್ನು ಅವು ಕೊಡುತ್ತವೆ. ಸಮಾಜ ಜೀವನದ ಕೆಲವು ಕ್ಷೇತ್ರಗಳಲ್ಲಿ ಪರಿಣತ ಕ್ರಿಯೆಯನ್ನೂ ನಡವಳಿಕೆಯ ಗುಣಮಟ್ಟಗಳು ಏನಿರುತ್ತವೆಂಬುದನ್ನೂ ತಿಳಿಸಿಕೊಡುತ್ತವೆ. ಈಚಿನ ದಶಕಗಳಲ್ಲಿ ವರ್ಣನಿಷ್ಠೆಯ ಆಧಾರದ ಮೇಲೆ ವೋಟುಗಳನ್ನು ಕೂಡಿಸಿಕೊಳ್ಳುವ ಪ್ರಯತ್ನಗಳು ನಡೆದಿವೆ. ಆದರೆ ನಿಜವಾಗಿ ಕಾರ್ಯತತ್ಪರವಾಗಿರುವ ಘಟಕಗಳೆಂದರೆ ಜಾತಿ, ಕುಟುಂಬ, ವಂಶ ಹಾಗೂ ಬಂಧು, ಬಾಂಧವರ ಸಂಬಂಧಜಾಲ.

ಜಾತಿಯನ್ನು ಕುರಿತು ವಿಸ್ತಾರವಾಗಿ ಚರ್ಚೆಯನ್ನು ಬೆಳೆಸುವುದಕ್ಕಿಂತ ಮುಂಚೆ "ಜಾತಿ"ಗಳ ಮೂಲ ಹೇಗಾಯಿತೆಂಬುದನ್ನು ಹೇಳುವ ಕೆಲವು ಸಿದ್ಧಾಂತಗಳನ್ನು ಸಂಕ್ಷೇಪವಾಗಿ ನೋಡೋಣ. ಅವು ವರ್ಣದ ಮೇಲೆ ನೇರವಾದ ಪ್ರಭಾವ ಹೊಂದಿವೆ. ವಾಸ್ತವವಾಗಿ ಅವು ಹೇಳುವುದು ವರ್ಣಗಳ ಮೂಲವನ್ನೇ ಹೊರತು ಜಾತಿಗಳ ಮೂಲವನ್ನಲ್ಲ.

ದೈವ ಮೂಲ ತುಂಬ ಪ್ರಸಿದ್ಧವಾದದ್ದು, ಪದೇ ಪದೇ ಉದ್ಧರಿಸಿ ಹೇಳುವಂಥದು. ಅದರ ಮೂಲವನ್ನು ಋಗ್ವೇದದ ಪುರುಷಸೂಕ್ತದಲ್ಲಿ ಗುರುತಿಸಬಹುದು. ಪುರುಷನ ಯಜ್ಞದಲ್ಲಿ ಅವನಿಂದ ಸಮಾಜದ ನಾಲ್ಕು ವರ್ಗಗಳು ಜನ್ಮಿಸಿದುವು ಎಂದು ನಂಬುತ್ತಾರೆ. ಪುರುಷನೇ ಸೃಷ್ಟಿಕರ್ತ, ಸತ್. ಒಂದು ಸೂಕ್ತವಾದ ಸಮಾಜವು ಉದಯಿಸುವುದಕ್ಕೋಸ್ಕರವಾಗಿ ಪುರುಷನು ತನ್ನನ್ನು ತಾನು ಆಹುತಿ ಮಾಡಿಕೊಂಡನು. ಬ್ರಾಹ್ಮಣನು ಅವನ ಮುಖದಿಂದಲೂ, ಕ್ಷತ್ರಿಯನು ಬಾಹುಗಳಿಂದಲೂ, ವೈಶ್ಯನು ತೊಡೆಗಳಿಂದಲೂ, ಶೂದ್ರನು ಪಾದಗಳಿಂದಲೂ ಹುಟ್ಟಿದರು. ಇದು ಒಂದು ರೀತಿಯಲ್ಲಿ ಚತುರ್ವರ್ಣಗಳ ನೆಲೆ ಮತ್ತು ಕರ್ತವ್ಯಗಳ ಒಂದು ಸಾಂಕೇತಿಕ ಅಭಿವ್ಯಕ್ತಿ ಎಂದು ಹೇಳಬಹುದು. ಸಾಂಸ್ಕೃತಿಕ ದೇಹದಲ್ಲಿ ತಲೆ, ತೋಳುಗಳು, ತೊಡೆಗಳು, ಪಾದಗಳು ಹೀಗೆ ಅವರೋಹಣ ಕ್ರಮದಲ್ಲಿ ನೆಲೆಯನ್ನು ಗುರುತಿಸಲಾಗಿದೆ . ಹಾಗೆಯೇ ಸಂಪ್ರದಾಯದಿಂದ ಬಂದ ವೃತ್ತಿಗಳೂ ಕೂಡ.

ಅಧ್ಯಯನ – ಅಧ್ಯಾಪನ, ಯಾಗಾದಿಗಳನ್ನು ನಡೆಸುವುದು – ಬ್ರಾಹ್ಮಣನ ಈ ಕರ್ತವ್ಯಗಳಿಗೆ ಅತ್ಯುನ್ನತವಾದ ಸ್ಥಾನ. ಶ್ರೇಣಿಯಲ್ಲಿ ಮುಂದಿನ ಸ್ಥಾನ ರಕ್ಷಣೆ, ಯುದ್ಧ, ಆಡಳಿತ ಮತ್ತು ಸರಕಾರ – ಕ್ಷತ್ರಿಯನಿಗೆ ವಿಧಿಸಿದ ಕರ್ತವ್ಯಗಳು. ಮೂರನೆಯದು ವೈಶ್ಯನ ಕೆಲಸ – ವಾಣಿಜ್ಯ, ವ್ಯಾಪಾರ, ಕೃಷಿ ಮೊದಲಾದುವು. ಕೊನೆಯದಾಗಿ ತಮ್ಮ ಕುಶಲ ಕರ್ಮಗಳಿಂದ ಮತ್ತು ದುಡಿಮೆಯಿಂದ ಇತರರಿಗೆ ಸೇವೆ ಸಲ್ಲಿಸುವ ಶೂದ್ರರ ಸ್ಥಾನ. ಅನುಕ್ರಮದಲ್ಲಿ ಅದೇ ಕೊನೆಯದು, ತೀರ ಕೆಳಗಿನದು.

ಅಷ್ಟು ಪ್ರಸಿದ್ಧವಲ್ಲದ್ದು ವರ್ಣದ ಮೂಲವನ್ನು ಕುರಿತ ತ್ರಿಗುಣ ಸಿದ್ಧಾಂತ. ಪ್ರಾಚೀನ ಭಾರತದ ತಾತ್ವಿಕ ಚಿಂತನೆ ಮೂರು ಗುಣಗಳನ್ನು ಗುರುತಿಸಿತು. ಮಾನವರಲ್ಲಿ ಚೇತನ – ಅಚೇತನಗಳಲ್ಲಿ, ಮಾನವ ಕ್ರಿಯೆಗಳಲ್ಲಿ *ಸತ್ವ, ರಜಸ್,* ಮತ್ತು *ತಮಸ್* ಎಂಬ ಮೂರು ಗುಣಗಳನ್ನು ಗುರುತಿಸಲಾಗಿದೆ. ಉದಾತ್ತ ಆಲೋಚನೆಗಳು ಮತ್ತು ಕಾರ್ಯಗಳು, ಒಳ್ಳೆಯತನ, ಸದ್ಗುಣ, ಸತ್ಯ ಮತ್ತು ವಿವೇಕಗಳು *ಸತ್ವ* ಗುಣದಲ್ಲಿ ಬರುತ್ತವೆ. ಇದಕ್ಕೆದುರಾಗಿ ರಜೋಗುಣವು ಸೂಚಿಸುವುದು ಉನ್ನತವಾದ ಶ್ರೀಮಂತ ಜೀವನ, ಸಿರಿ–ಸಂಪತ್ತು, ಭಾವೋದ್ವೇಗಗಳು, ಗರ್ವ ಮತ್ತು ಪರಾಕ್ರಮಗಳನ್ನು. ಅದರ ನಂತರ ಕೆಳಗಿನದು ತಮೋಗುಣ. ಜಡತ್ವ – ಮಂದಬುದ್ಧಿ, ಮಿತಿ ಮೀರಿದ ಅಹಂಕಾರ, ಅಭಿರುಚಿಯಿಲ್ಲದ ನಡವಳಿಕೆ, ಅಷ್ಟಾಗಿ ಯೋಚನಾಶಕ್ತಿಯನ್ನು ಬಳಸದೆ ಕಷ್ಟದ ಕೆಲಸಗಳನ್ನು ಮಾಡುವ ಶಕ್ತಿ ಈ ಗುಂಪಿನಲ್ಲಿ ಬರುತ್ತವೆ. *ಸಾತ್ವಿಕ* ಗುಣಗಳುಳ್ಳವರನ್ನು ಬ್ರಾಹ್ಮಣರೆಂದೂ, *ರಾಜಸಿಕ* ಗುಣಗಳಿದ್ದವರನ್ನು ಕ್ಷತ್ರಿಯ ಮತ್ತು ವೈಶ್ಯರೆಂದೂ, *ತಾಮಸಿಕ* ಗುಣ ಸ್ವಭಾವವಿದ್ದವರನ್ನು ಶೂದ್ರರೆಂದೂ ವರ್ಗೀಕರಿಸಲಾಯಿತು. ಈ ಗುಣಗಳನ್ನು ಚತುರ್ವರ್ಣಗಳಲ್ಲಿ ನೋಡಬಹುದು. ಆದರೆ ಇಡೀ ಜನಸ್ತೋಮವನ್ನು ಹೀಗೆ ವರ್ಗೀಕರಿಸುವ ಅಗಾಧಕಾರ್ಯವನ್ನು ಹೇಗೆ ನಿರ್ವಹಿಸಿರಬಹುದು ಎಂಬುದನ್ನು ಚಿತ್ರಿಸಿಕೊಳ್ಳುವುದು ಕಷ್ಟ.

ಮೂರನೆಯ ಸಿದ್ಧಾಂತವು ಕುಲಸಂಬಂಧಿ ಮಿಶ್ರಣ, ಸಂಸ್ಕೃತಿ, ಸಂಪರ್ಕ, ಕಾರ್ಯವೈಶಿಷ್ಟ್ಯಗಳನ್ನು ಗಮನಕ್ಕೆ ತಂದುಕೊಳ್ಳುತ್ತದೆ. ಈ ಮೂರು ಅಂಶಗಳಲ್ಲಿ ಯಾವುದೊಂದೂ ಬಿಡಿಯಾಗಿ ವರ್ಣಗಳ ಮೂಲವನ್ನು ವಿವರಿಸುವುದಿಲ್ಲ. ಹಿಂದೂ ಸಮಾಜ ವಿಕಾಸದ ಪ್ರಾರಂಭಿಕ ಹಂತದಲ್ಲಿ, ವೈದಿಕ ಹಂತದಲ್ಲಿ – ಜನಾಂಗ ಮತ್ತು ಬಣ್ಣ ಮುಖ್ಯವಾದ ಅಂಶಗಳಾಗಿದ್ದುವು. ಆದರೆ ಪೂರ್ಣ ವಿಕಸಿತ ರೂಪದಲ್ಲಿ ಅದು ನಂಬಿಕೆಯ ವಿಷಯವಾಗಿತ್ತೇ ಹೊರತು ಜೈವಿಕ ಸತ್ಯವಾಗಿರಲಿಲ್ಲ. ಆರ್ಯೀಕರಣವೆನ್ನುವುದು ಸಂಸ್ಕೃತಿ ಸಂಪರ್ಕದ ಫಲ. ದಾನಿ–ಗ್ರಾಹಕ ಸಂಬಂಧವನ್ನು ಒಳಗೊಂಡ ಅದು ಏಕಮುಖ ಪ್ರಕ್ರಿಯೆಯಾಗಿತ್ತು. ಮೊದಲೇ ಸೂಚಿಸಿದಂತೆ ಆರ್ಯ–ಪೂರ್ವ ಪ್ರಾಚ್ಯ ಸಂಪ್ರದಾಯಗಳು ತಮ್ಮ ಪ್ರಭುತ್ವ ಸ್ಥಾಪಿಸಿ, ಸಮಾಜರಚನೆ, ಆಚರಣೆಗಳು, ನಂಬಿಕೆಗಳು, ವಿಶ್ವದೃಷ್ಟಿ, ಮೊದಲಾದ ಅಂಶಗಳಲ್ಲಿ ಆರ್ಯವ್ಯವಸ್ಥೆಯನ್ನು ಬದಲಿಸಿದುವು. ನೂತನವಾಗಿ ಉದಯಿಸುತ್ತಿದ್ದ ಸಾಮಾಜಿಕ

ವ್ಯವಸ್ಥೆಗೆ ತಂಡ ತಂಡವನ್ನೇ ಇಡಿಯಾಗಿ ಸೇರಿಸಿಕೊಳ್ಳಲಾಯಿತು. ಕೆಲವು ನೂತನ ಲಕ್ಷಣಗಳು ಅವಕ್ಕೆ ಸೇರಿಕೊಂಡುವು. ಮತ್ತೆ ಕೆಲವು ಉಳಿದುಕೊಂಡುವು. ವಿಶಾಲತರ ಸಮಾಜದ ಮೇಲೆ ತಮ್ಮ ಮುದ್ರೆಯನ್ನು ಒತ್ತಿದುವು. ವೃತ್ತಿಯಿಂದ ಕುಶಲರಾಗಿದ್ದ ಹಲವು ವರ್ಗಗಳು ಆಗಲೇ ಇದ್ದುವು; ಸೂಕ್ತ ಸಾಮಾಜಿಕ ಸ್ಥಾನಮಾನ ಮತ್ತು ಧಾರ್ಮಿಕಾಚರಣೆಯಲ್ಲಿ ನಿರ್ದಿಷ್ಟ ಸ್ಥಾನಗಳನ್ನು ನೀಡಿ ನೂತನ ಸಮಾಜದೊಳಗೆ ಅವುಗಳನ್ನು ಸೇರಿಸಿಕೊಳ್ಳಲಾಯಿತು.

**ಜಾತಿ**

"ಕ್ಯಾಸ್ಟ್" ಎನ್ನುವುದು ಗೊಂದಲ ಉಂಟುಮಾಡುವ ಪದ. ಬೇರೆ ಬೇರೆ ಸಂದರ್ಭಗಳಲ್ಲಿ ಅದನ್ನು ಬೇರೆ ಬೇರೆ ಅರ್ಥ ಕೊಡುವಂತೆ ಉಪಯೋಗಿಸಲಾಗಿದೆ. ಬೇರೆ ಬೇರೆ ಸಾಮಾಜಿಕ ಅಂತಸ್ತುಗಳನ್ನು ಅದು ಸೂಚಿಸುತ್ತದೆ. ಧಾರ್ಮಿಕಾಚರಣೆಗಳನ್ನು ಹೆಚ್ಚು ಕಡಮೆ ಸ್ಪಷ್ಟವಾಗಿ ನಿರ್ದಿಷ್ಟಪಡಿಸಿರುವ, ಸಂಪ್ರದಾಯದಿಂದ ಅಂಟಿಕೊಂಡು ಬಂದ ಯಾವುದೇ ಒಂದು ವೃತ್ತಿಯಿರುವ, ಸ್ವಗೋತ್ರ ವಿವಾಹ ಪದ್ಧತಿಯಿರುವ ಒಂದು ಸಮುದಾಯ ಎಂಬ ಅರ್ಥದಲ್ಲಿ ಜಾತಿ ಎಂಬ ಪದವನ್ನು ಬಳಸುವುದು ಸೂಕ್ತವೆಂದು ತೋರುತ್ತದೆ. ಇಲ್ಲಿ ಎರಡು ಎಚ್ಚರಿಕೆಗಳು ಅಗತ್ಯ. ಮೊದಲನೆಯದಾಗಿ, ಮೊದಲ ಮೂರು ವರ್ಣಗಳನ್ನು ಅವುಗಳ ಸಾಮಾನ್ಯ ಸಾಮದಿಂದಲೇ ಕರೆಯಬಹುದು, ವಾಸ್ತವವಾಗಿ ಜಾತಿಗಳು ಅವುಗಳ ಉಪವಿಭಾಗಗಳಾಗಿರುತ್ತವೆ. ಎರಡನೆಯದಾಗಿ, ಕೆಲವು ಜಾತಿಗುಚ್ಛಗಳಿಗೆ ಸಮಾನವಾದ ಒಂದು ಹೆಸರಿರುತ್ತದೆ. ಅದರ ಮುಂದೋ, ಹಿಂದೋ, ಒಂದು ಪ್ರತ್ಯಯ ಸೇರಿಸಿ ನಿರ್ದಿಷ್ಟ ಜಾತಿಯನ್ನು ಗುರುತಿಸಲಾಗುತ್ತದೆ. ಉತ್ತರ ಭಾರತದಲ್ಲಿ ಬ್ರಾಹ್ಮಣರನ್ನು ಹಲವು ಸ್ವಗೋತ್ರ ವಿವಾಹವುಳ್ಳ ಜಾತಿಗಳನ್ನಾಗಿ ವಿಂಗಡಿಸಲಾಗಿದೆ – ಕಾನ್ಯಕುಬ್ಜ, ಸರಯೂಪರೀನ್, ಗೌರ್ ಇತ್ಯಾದಿ. ಮಹಾರಾಷ್ಟ್ರದಲ್ಲಿ ಅವರ ವಿಭಜನೆ ದೇಶಸ್ಥ, ಕೊಂಕಣಸ್ಥ, ಕರ್ಹಾಡೆ ಮತ್ತು ಸಾರಸ್ವತ ಎಂದಿರುತ್ತದೆ. ತಮಿಳುನಾಡಿನಲ್ಲಿ ಎರಡು ಮುಖ್ಯ ವರ್ಗಗಳು – ಅಯ್ಯಂಗಾರ್ ಮತ್ತು ಅಯ್ಯರ್. ಈ ಜಾತಿಗಳಲ್ಲಿ ಇನ್ನೂ ಹಲವು ಶಾಖೆಗಳು ಸ್ವತಂತ್ರವಾಗಿರಬಹುದು. ಅವಕ್ಕೂ ಬಿಡಿಯಾಗಿ ನಿರ್ದಿಷ್ಟ ಲಕ್ಷಣಗಳಿರಬಹುದು. ಇವು ಹಲವು ಬಗೆ. ಉದಾಹರಣೆಗೆ, ಕಾನ್ಯಕುಬ್ಜರಿಗೆ ಲಕ್ಷಣಗಳ ಇಪ್ಪತ್ತು ಪಾಯಿಂಟುಗಳ ಮಾನಕದಲ್ಲಿ ಬಿಸ್ವಾ ಪದವಿ ಸೇರಿಸಲಾಗುತ್ತದೆ. ಬಿಸ್ವಾಗಳ ಸಂಖ್ಯೆ ಎಷ್ಟು ಹೆಚ್ಚಾಗಿರುತ್ತದೋ ಆ ತಂಡದ ಸ್ಥಾನಮಾನ ಅಷ್ಟು ಹೆಚ್ಚಿನದಾಗಿರುತ್ತದೆ. ಬಿಸ್ವ ಎಂದರೆ ಇಪ್ಪತ್ತು, ಎಲ್ಲಾ ಇಪ್ಪತ್ತು ಬಿಸ್ವಾಗಳನ್ನು ಹೊಂದಿರುವ ತಂಡವು ಅತ್ಯುನ್ನತ ಸ್ಥಾನವನ್ನು ಹೊಂದಿರುತ್ತದೆ. ಮಿಕ್ಕ ತಂಡಗಳು ಅವು ಹೊಂದಿರುವ ಬಿಸ್ವಾಗಳ ಲೆಕ್ಕದ ಪ್ರಕಾರ ವಿಲೋಮ ಕ್ರಮದಲ್ಲಿ ಕೆಳಗಿನ ಸ್ಥಾನಗಳನ್ನು ಪಡೆಯುತ್ತವೆ. ಇಪ್ಪತ್ತೋ, ಹದಿನೆಂಟೋ ಬಿಸ್ವಾಗಳನ್ನು ಹೊಂದಿರುವ ತಂಡಗಳು ಇಂದಿಗೂ ಆ ಸಂಖ್ಯೆಯ ಬಗೆಗೆ ಗರ್ವ ಪಡುವುದೀಗ

ಆಶ್ಚರ್ಯದ ಸಂಗತಿ. ಸರಯೂಪರೀನ್ ಬ್ರಾಹ್ಮಣರಲ್ಲಿ ಮತಾಚರಣೆಯ ಪರಿಶುದ್ಧಿಯ ಹಂತಗಳನ್ನನುಸರಿಸಿ ವಿಭಾಗಗಳಿವೆ. ಅತ್ಯುನ್ನತರಾದವರು ಪಂಕ್ತಿಪಾವನರು. ತಾವು ಅತ್ಯಂತ ಪರಿಶುದ್ಧರು ಎಂದು ಹೇಳಿಕೊಳ್ಳುತ್ತಾರೆ. ಊಟದ ಸಮಯದಲ್ಲಿ ಈ ಗುಂಪಿನವರು ಬೇರೆಯಾಗೇ ಕುಳಿತುಕೊಳ್ಳುತ್ತಾರೆ. ಅವರಿಗಿಂತ ಕಡಮೆ ಪರಿಶುದ್ಧಿಯುಳ್ಳವರು ಅವರೂ ಸರಯೂಪರೀನ್ ಆಗಿದ್ದರೂ ಅವರ ಪಂಕ್ತಿಯಲ್ಲಿ ಕುಳಿತು ಭೋಜನ ಮಾಡುವಂತಿಲ್ಲ. ಈ ಕಟ್ಟುನಿಟ್ಟಾದ ಆಚರಣೆಗಳನ್ನು ಪಾಲಿಸುವುದು ಕಿರಿಯ ಪೀಳಿಗೆಯವರಿಗೆ ತುಂಬ ಕಷ್ಟವಾಗುತ್ತದೆ. ಆದರೇನು, ಒಂದು ವರ್ಗವು ತಮ್ಮ ಅತ್ಯಂತ ಶ್ರೇಷ್ಠ ಪರಿಶುದ್ಧಿಯ ಬಗೆಗೆ ಮಧುರವಾದ ನೆನಪುಗಳನ್ನು ಹೊಂದಿದೆ. ಮೇಲುವರ್ಗಗಳು ಕೆಳವರ್ಗಗಳೊಡನೆ ವಿವಾಹ ಸಂಬಂಧವನ್ನು ಮಾಡಬಹುದು; ಕೆಳವರ್ಗಗಳಿಗೆ ತಮ್ಮ ಹೆಣ್ಣುಮಕ್ಕಳನ್ನು ಕೊಡುವುದಿಲ್ಲ; ತಮ್ಮ ಗುಂಪಿನಲ್ಲಿ ಸಮಾನ ನೆಲೆಯುಳ್ಳ ಕುಟುಂಬದ ಹೆಣ್ಣು ಸಿಕ್ಕದೇ ಹೋದ ಸಂದರ್ಭದಲ್ಲಿ ಕೆಳವರ್ಗದಿಂದ ತಂದುಕೊಳ್ಳುತ್ತಾರೆ. ದ್ವಿಜರಲ್ಲದವರಲ್ಲೂ ಹಲವು ನಿರ್ದಿಷ್ಟ ಸ್ವಗೋತ್ರ ವಿವಾಹದ ಸಮುದಾಯ ಶಾಖೆಗಳು ಒಟ್ಟಾಗಿ ಈ ಗುಚ್ಛವಾಗಿದ್ದರೂ ಅವುಗಳಲ್ಲಿ ಸಮಾನವಾದ ಹೆಸರೊಂದಿರುವುದುಂಟು. ಹೊರಗಿನವರ ಕಣ್ಣಿಗೆ ಅದು ಸಮಾನ ಸ್ಥಾನಮಾನವುಳ್ಳ ಒಂದೇ ಘಟಕವಾಗಿರುತ್ತದೆ. ಆದರೆ ಒಳಗೆ ಸ್ವಗೋತ್ರ ವಿವಾಹದ ಕಟ್ಟುನಿಟ್ಟಾದ ಗಡಿರೇಖೆಗಳಿರುತ್ತವೆ. ಅವುಗಳಲ್ಲೇ ಅತಿ ಸೂಕ್ಷ್ಮವಾದ ಸ್ಥಾನಮಾನ ವ್ಯತ್ಯಾಸವಿರುತ್ತದೆ. ದಕ್ಷಿಣ ನೀಲಗಿರಿಯಲ್ಲಿ ಬಡಗ ಎಂದು ಸಮಾನ ಹೆಸರಿರುವ ಜಾತಿ ಗುಚ್ಛವಿದೆ. ಆದರಲ್ಲಿ ಹಲವು ಸ್ವಗೋತ್ರ ವಿವಾಹದ ಜಾತಿಗಳಿವೆ. ಪ್ರತಿಯೊಂದಕ್ಕೂ ಬೇರೆ ಬೇರೆ ಹೆಸರಿದೆ. ಜಾತಿಗುಚ್ಛದೊಂದಿಗೆ ಹೊಂದಿಸುವ ಸಾಮಾನ್ಯ ಲಕ್ಷಣಗಳು ಕೆಲವಿರುತ್ತವೆ. ಮಹಾರಾಷ್ಟ್ರದ ಕುಂಬಿಗಳಲ್ಲಿ, ಗುಜರಾತಿನ ಪತಿದಾರ್ ಮತ್ತು ಬಾರಿಯಾರಲ್ಲಿ ಅದನ್ನು ನೋಡಬಹುದು. ಮಧ್ಯಪ್ರದೇಶದ ಛತ್ತೀಸಘರ್ ಪ್ರದೇಶದಲ್ಲಿ ದನಗಾಹಿಗಳು ಮತ್ತು ನೀರು ಹೊರುವ ತಂಡಗಳಿಗೆ ರಾವತ್ ಎಂದು ಹೆಸರು. ಅವರಲ್ಲೇ ಹಲವು ಸ್ವಗೋತ್ರವಿವಾಹ ಜಾತಿಗಳಿವೆ – ಕನೋಜಿಯ, ಝೇರಿಯ, ಕೊಸಾರಿಯ, ಒರಿಯಾ, ಮತ್ತು ಇನ್ನೂ ಹಲವು. ಇದೇ ರೀತಿ ಕ್ಷೌರಿಕರು, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಮೊದಲಾದ ಹಲವು ಜಾತಿಗುಚ್ಛಗಳಲ್ಲಿ ಇಂಥವೇ ಸ್ವಗೋತ್ರ ವಿವಾಹ ತಂಡಗಳು ಕಂಡುಬರುತ್ತವೆ. ಈ ಸರಳವಾದ ನಿರೂಪಣೆಯೂ ದಿಕ್ಕುಗೆಡಿಸುವಂತಿದೆ. ಅದು ಹಾಗಿರುವುದು ಅನಿವಾರ್ಯವಾಗಿದೆ. ಏಕೆಂದರೆ ಸಾಮಾಜಿಕ ವಾಸ್ತವತೆ ಅನಂತ ಸಂಕೀರ್ಣತೆಯುಳ್ಳದ್ದು. ಹಲವಾರು ಪ್ರಾದೇಶಿಕ ಸಂದರ್ಭಗಳಲ್ಲಿ ವಿವಿಧ ವರ್ಗಗಳ ಮತ್ತು ವ್ಯವಸ್ಥೆಗಳ ಹೊಂದಾಣಿಕೆ ಪ್ರವೃತ್ತಿಯಲ್ಲಿ ಅಚ್ಚುಕಟ್ಟಾದ ಒಂದು ರಚನೆಯುಳ್ಳ ಮಾದರಿ ಇರುವುದು ಸಾಧ್ಯವಿಲ್ಲ. ಅದರಲ್ಲಿ ವಿವಿಧ ಘಟಕಗಳು ಮತ್ತು ಅಂಗಗಳು ಒಂದು ತರ್ಕಬದ್ಧವಾದ, ಸುಸಂಗತವಾದ ರಚನೆಯಾಗಲು ಸಾಧ್ಯವಿಲ್ಲ. ಹಾಗಾಗಿ ನಾವು ಈ ವ್ಯವಸ್ಥೆಯನ್ನು ಮೂರು ಹಂತಗಳಲ್ಲಿ ಕಲ್ಪಿಸಿಕೊಳ್ಳಬೇಕು. ಮೇಲುತುದಿಯಲ್ಲಿ

ಅಧಿಕೃತವಾಗಿ, ಮನ್ನಣೆ ಪಡೆದ ನಾಲ್ಕು (ಅಂಗೀಕರಿಸಿಲ್ಲದ ಒಂದು) ವರ್ಣಗಳಿವೆ. ಇವು ಆನುವಂಶಿಕವಾದವು. ಹೆಚ್ಚು ಕಡಮೆ ಒಂದೇ ಬಗೆಯ ಆಚರಣೆಗಳುಳ್ಳವು. ಮಧ್ಯದ ಹಂತದಲ್ಲಿ ಜಾತಿಗುಚ್ಛಗಳಿವೆ. ಇವಕ್ಕೆ ಸಮಾನವಾದ ಹೆಸರುಗಳಿದ್ದರೂ, ಸ್ವಗೋತ್ರ ವಿವಾಹ ಪದ್ಧತಿಯಿರುವ ಉಪವಿಭಾಗಗಳಿರುತ್ತವೆ. ಕೆಳಗಿನ ಹಂತದಲ್ಲಿ ಬಿಡಿಜಾತಿಗಳಿರುತ್ತವೆ. ಅವು ವರ್ಗೀಕರಿಸಬಹುದಾದ ಆಚರಣೆಯ ಸ್ಥಾನಮಾನ ನಿರ್ದೇಶಕವಾಗಿರುತ್ತವಲ್ಲದೆ ಸಾಮಾಜಿಕ ರಚನೆಯಲ್ಲಿ ಪರಿಣಾಮಕಾರಿಯಾಗಿ ಕಾರ್ಯಪ್ರವೃತ್ತವಾಗಿರುವ ಘಟಕಗಳಾಗಿರುತ್ತವೆ.

ಈಗ ಜಾತಿಯ ಕೆಲವು ಮುಖ್ಯ ಲಕ್ಷಣಗಳನ್ನು ಪರಿಶೀಲಿಸೋಣ.

1. ಜಾತಿಗಳು ಸ್ವಗೋತ್ರ ವಿವಾಹ ಪದ್ಧತಿಯಿರುವ ಘಟಕಗಳು.
2. ಅವುಗಳನ್ನು ಸ್ಥಾನಾನುಗುಣವಾಗಿ ಶ್ರೇಣೀಕರಿಸಲಾಗಿದೆ.
3. ಸಾಮಾನ್ಯವಾಗಿ ಜಾತಿ ಸಂಬಂಧಿಯಾದ ವೃತ್ತಿಯೊಂದಿರುತ್ತದೆ.
4. ಪರಿಶುದ್ಧಿ ಮತ್ತು ಮಲಿನತೆ ಇವು ವಿಭಿನ್ನ ಘಟಕಗಳ ನಡುವೆ ಸಂಬಂಧವನ್ನು ನಿರ್ಧರಿಸುತ್ತವೆ.
5. ಒಂದು ಜಾತಿಯ ಸದಸ್ಯರು ಸಾಮಾನ್ಯವಾಗಿ ಒಂದು ಸಂಸ್ಕೃತಿಯನ್ನು ಹಂಚಿಕೊಳ್ಳುತ್ತಾರೆ. ಆಲೋಚನೆ ಮತ್ತು ನಡವಳಿಕೆಗಳಲ್ಲಿ ಸಾಂಪ್ರದಾಯಿಕ ವಿನ್ಯಾಸಗಳನ್ನು ಹೊಂದಿರುವ ಜೀವನ ವಿಧಾನವಿರುತ್ತದೆ (ನಂಬಿಕೆಗಳು, ಮೌಲ್ಯಗಳು, ನಡವಳಿಕೆಯ ನಿಯಮಾವಳಿ, ಆರ್ಥಿಕ, ರಾಜಕೀಯ, ಧಾರ್ಮಿಕ ಮತ್ತು ಸಾಮಾಜಿಕ ವ್ಯವಸ್ಥೆ ಮೊದಲಾದುವೆಲ್ಲ ಇದರಲ್ಲಿ ಸೇರುತ್ತವೆ). ಈ ಅಂಶಗಳು ಒಂದು ಪೀಳಿಗೆಯಿಂದ ಇನ್ನೊಂದಕ್ಕೆ ಕೇವಲ ಆನುವಂಶಿಕತೆಯಿಂದಲ್ಲದೆ, ಕಲಿಕೆಯಿಂದ ಹರಿದುಬರುತ್ತವೆ.
6. ಭಾರತದ ಹಲವು ಭಾಗಗಳಲ್ಲಿ ಜಾತಿಗಳು ಸಾಮಾಜಿಕ ನಿಯಂತ್ರಣ ಮತ್ತು ನ್ಯಾಯ ನಿರ್ಣಯಗಳಿಗೆ ಹಳ್ಳಿಯ ಒಳಗೂ, ಹಲವು ಹಳ್ಳಿಗಳ ನಡುವೆಯೂ ವಿಶಿಷ್ಟ ಕಾರ್ಯತಂತ್ರಗಳನ್ನು ಹೊಂದಿರುತ್ತವೆ.

ಈ ಲಕ್ಷಣಗಳನ್ನು ವ್ಯಾಪಕವಾಗಿ ಮತ್ತು ಸ್ಥೂಲವಾಗಿ ಎಲ್ಲ ಕಡೆಗೂ ಅನ್ವಯಿಸಬಹುದು. ಆದರೆ ಅವುಗಳಲ್ಲಿ ಒಂದೊಂದಕ್ಕೂ ಅಪವಾದಗಳೂ ಇವೆ. ಜಾತಿ ಒಂದು ಸ್ವಗೋತ್ರ ವಿವಾಹದ ಘಟಕವಾದರೂ ಕೆಲವು ಕೆಳಜಾತಿಗಳಲ್ಲಿ ವಿವಾಹ ಸಂಬಂಧವಾಗಿ ತಮ್ಮಲ್ಲಿಗೆ ಬರುವ ಗಂಡಸನ್ನೊ, ಹೆಂಗಸನ್ನೋ ತಮ್ಮೊಳಗೆ ಅರಗಿಸಿಕೊಂಡುಬಿಡುತ್ತವೆ. ಇಂತಹ ಸಂಪರ್ಕಗಳಿಂದ ಜನಿಸುವ ಸಂತಾನಗಳನ್ನು ಜಾತಿಯಲ್ಲಿ ಅಂಗೀಕರಿಸಲಾಗುತ್ತದೆ. ಕೆಲವು ಮೇಲುಜಾತಿಗಳಲ್ಲೂ, ಅನ್ಯಗೋತ್ರ ಸಂಬಂಧಗಳನ್ನು ಕೆಲವೊಮ್ಮೆ ಅನುಮತಿಸಿರುವುದುಂಟು. ಒಬ್ಬ ಗಂಡಸು, ತನ್ನದಕ್ಕಿಂತ ಸ್ವಲ್ಪ ಕೆಳಮಟ್ಟದ ಕೆಲವು ಜಾತಿಗಳ ಹೆಣ್ಣನ್ನು ಮದುವೆಯಾಗಬಹುದು. ಅವನ ಸಂತಾನಕ್ಕೆ ಈ ಸಂಕರದ ಕಳಂಕ ತಟ್ಟುವುದಿಲ್ಲ. ಜಾತಿಯ ಪೂರ್ಣ ಸದಸ್ಯತ್ವ ದೊರಕುತ್ತದೆ. ಸ್ಥಾನಾನುಕ್ರಮವು ಒಂದು ಮುಖ್ಯವಾದ ಲಕ್ಷಣವೇ ಸರಿ. ಆದರೆ ಸ್ಥಾನವನ್ನೂ ಅನುಕ್ರಮಣಿಯ ನೆಲೆಯನ್ನೂ ನಿರ್ದೇಶಿಸುವ ಮಾನಕಗಳು

ಖಚಿತವಾಗಿಲ್ಲ. ಅವು ಸ್ಪಷ್ಟವಾಗಿ ನಿರೂಪಿತವಾಗಿಲ್ಲ. ಮೂರು ದ್ವಿಜ ಹಂತದ ಜಾತಿಗಳಲ್ಲಿ ಒಂದೊಂದೂ ತನ್ನದೇ ಅತ್ಯುತ್ತಮವಾದ ಸ್ಥಾನ ಎಂದು ಹೇಳಿಕೊಳ್ಳುತ್ತದೆ. ಅದೇ ಹಂತದ ಇತರ ಜಾತಿಗಳು ತಾವೇ ಅತ್ಯುತ್ತಮರೆಂದು ಹೇಳಿಕೊಳ್ಳುವುದನ್ನು ಖಂಡಿಸುತ್ತದೆ. ನಾಲ್ಕನೆಯ ಶೂದ್ರ ಹಂತದಲ್ಲಿ ಗೊಂದಲ ಇನ್ನೂ ಹೆಚ್ಚು. ಹಲವು ಜಾತಿಗಳು ಪೌರಾಣಿಕವಾದ ತಮ್ಮ ಪ್ರಾಚೀನತೆಯನ್ನು ಪುನರ್ ನಿರ್ಮಿಸಲು ಹೆಣಗಾಡುತ್ತವೆ. ಈಗ ತಮಗೆ ದೊರೆತಿರುವುದಕ್ಕಿಂತ ಉತ್ತಮ ತರವಾದ ಸ್ಥಾನವನ್ನು ಪಡೆಯಲು ಶ್ರಮಿಸುತ್ತವೆ. ಅವರಲ್ಲಿ ಯಜ್ಞೋಪವೀತವನ್ನು ಧರಿಸುವ ಹಕ್ಕು ಪಡೆಯಲು ಸ್ಪರ್ಧೆ. ಕೆಲವು ಧಾರ್ಮಿಕ · ಸಂಸ್ಥೆಗಳೋ, ಅಧಿಕಾರಿಗಳೋ ಪ್ರತಿಫಲವನ್ನು ಪಡೆದು ಈ ಯಜ್ಞೋಪವೀತ ಧಾರಣೆಯ ಹಕ್ಕನ್ನು ಅವರಿಗೆ ನೀಡುತ್ತವೆ. ಜಾತಿಗಳ ಅಸ್ಪೃಶ್ಯ ಹಂತದಲ್ಲಿ ಇನ್ನೂ ಅಸ್ಪೃಶ್ಯತೆಯ ಆಚರಣೆ ರೂಢಿಯಲ್ಲಿದೆ. ಆಂಧ್ರಪ್ರದೇಶದಲ್ಲಿ ಮಾಳರು ತಾವು ಮಾದಿಗರಿಗಿಂತ ಮೇಲು ಎಂದುಕೊಳ್ಳುತ್ತಾರೆ. ಮಹಾರಾಷ್ಟ್ರದ ಮಾಹರ್ ಪಂಗಡದವರು ಧೇಡ್, ಮಂಗ್ ಮತ್ತು ಇತರ ದಲಿತ ವರ್ಗಗಳಿಗಿಂತ ಮೇಲು ಮಟ್ಟದವರೆಂದು ಭಾವಿಸುತ್ತಾರೆ. ಉತ್ತರಪ್ರದೇಶ ಮತ್ತು ಬಿಹಾರಗಳಲ್ಲಿ ಚಮ್ಮಾರರು ಅನುಸೂಚಿತ ಜಾತಿಗಳಲ್ಲಿ ಮೇಲಿನ ಜಾತಿ.

ಅನುಕ್ರಮಶ್ರೇಣಿ ಮತ್ತು ವೃತ್ತಿ ಲಕ್ಷಣಗಳು ಪರಸ್ಪರ ಸಂಬಂಧಿಸಿವೆ. ಬೇರೆ ಬೇರೆ ವರ್ಣ ಹಂತಗಳಲ್ಲೂ ಒಂದೇ ವರ್ಣ ಹಂತದ ಬೇರೆ ಬೇರೆ ಜಾತಿಗಳಲ್ಲೂ ಅದಕ್ಕಿಂತ ಹೊರಗೂ ಸಾಮಾಜಿಕವಾದ ಮತ್ತು ಆಚರಣೆಗೆ ಸಂಬಂಧಿಸಿದ ಅಂಗೀಕೃತ ಅಂತರಗಳಿವೆ. ಮೂಲಭೂತವಾಗಿ ಇಂತಿಷ್ಟು ಪ್ರಮಾಣದ ಆಚರಣ ಶುದ್ಧಿಯಿದೆಯೆಂದು ಅಂಗೀಕರಿಸಲಾಗುತ್ತದೆ. ಆಕಸ್ಮಿಕವಾಗಿ ವ್ಯಕ್ತಿಯು ಒಂದು ಕುಟುಂಬದಲ್ಲಿ ಹುಟ್ಟುವುದರಿಂದ ಅದು ಅವನಿಗೆ ಬರುತ್ತದೆ. ಸ್ಥೂಲವಾಗಿ ಬೇಕಾದರೆ "ಶುದ್ಧ"ವಾದ ಮತ್ತು "ಉದಾತ್ತ"ವಾದ ವೃತ್ತಿಯು ಜಾತಿಗೆ ಮೇಲುಮಟ್ಟದ ಸಾಮಾಜಿಕ ಮತ್ತು ಧಾರ್ಮಿಕ ಸ್ಥಾನವನ್ನು ನೀಡುತ್ತದೆ; "ಅಶುದ್ಧವೂ", "ಮಲಿನವೂ" ಆದ ವೃತ್ತಿಯು ಅದನ್ನು ಕೆಳನೂಕುತ್ತದೆ ಎಂದು ಹೇಳಬಹುದು. ವೇದಾಧ್ಯಯನ, ಅಧ್ಯಾಪನ, ಪುರೋಹಿತ ಕಾರ್ಯಗಳು ಇವೆಲ್ಲ "ಶುದ್ಧ" ಮತ್ತು "ಉದಾತ್ತ". ಹಾಗಾಗಿ ಅವು ಬ್ರಾಹ್ಮಣನಿಗೆ ಶ್ರೇಣಿಯಲ್ಲಿ ಅತಿ ಉನ್ನತ ಸ್ಥಾನವನ್ನು ಕೊಡುವವು. ತೊಗಲು ಹದ ಮಾಡುವುದು ಅಥವಾ ಕಕ್ಕಸು ತೊಳೆಯುವುದು (ಮಾನವ ಮಲವನ್ನು ಎತ್ತಿಹಾಕಿ ಶುಚಿಗೊಳಿಸುವುದೂ ಸೇರಿ) "ಅಶುದ್ಧ" ಮತ್ತು "ಮಲಿನ"; ಆದ್ದರಿಂದ ಈ ವೃತ್ತಿಗಳನ್ನು ನಿರ್ವಹಿಸುವವರದು ಕೆಳಜಾತಿ. ಹೀಗೆ ಶುದ್ಧಿ – ಅಶುದ್ಧಿ, ನಿರ್ಮಲ – ಮಲಿನ ಭಾವನೆಗಳು ಅಂತರ್ಜಾತೀಯ ಹಾಗೂ ಜಾತಿಯೊಳಗಣ ನಡವಳಿಕೆ ಮತ್ತು ಪರಸ್ಪರ ಸಂಬಂಧಗಳ ಮೇಲೆ ಪರಿಣಾಮ ಬೀರುತ್ತವೆ. ಇವು ಹಿಂದೂ ಮನೋವಿಜ್ಞಾನದ ಭಾಗವಾಗಿ ಪರಿಣಮಿಸಿವೆ. ಆದರೆ ಪರಿಸ್ಥಿತಿ ಬದಲಾಗುತ್ತಿದೆ. ಇಂದಿನ ವಾಸ್ತವ ಚಿತ್ರ ಸಂಪ್ರದಾಯದಿಂದ ದೂರ ಸರಿಯುತ್ತಿದೆ.

ಈ ಸಂದರ್ಭದಲ್ಲಿ ಸಾಮಾನ್ಯವಾದ ಇನ್ನೊಂದು ಸೂತ್ರವನ್ನೂ ಹೇಳಿಬಿಡಬಹುದು. ಜಾತಿಯು ಮೇಲುಮಟ್ಟದ್ದಾದಷ್ಟೂ ಅದು ಹೆಚ್ಚು ಜಟಿಲವಾಗುತ್ತಾ ಹೋಗುತ್ತದೆ. ಶುದ್ಧಿಯನ್ನು ಕಾಪಾಡಿಕೊಳ್ಳುವ ಹಾಗೂ ಅಶುದ್ಧಿಯನ್ನು ನಿವಾರಿಸುವ ವಿಸ್ತಾರವಾದ ನಿಯಮಾವಳಿ ರೂಪುಗೊಳ್ಳುತ್ತದೆ. ಅಂತರ–ಜಾತಿ ಅಶುದ್ಧಿಯ ಬಗೆಗೆ ಹೇಳುವುದಾದರೆ, ಆಹಾರ ಮತ್ತು ದೈಹಿಕ ಸಂಪರ್ಕದಿಂದ ಅಶುದ್ಧಿ ಉಂಟಾಗುತ್ತದೆ ಎಂಬ ಅಂಶವನ್ನು ಗಮನಕ್ಕೆ ತಂದುಕೊಳ್ಳಬೇಕು. ಈ ಸಂದರ್ಭದಲ್ಲಿ ಎತ್ತುವ ಪ್ರಶ್ನೆಗಳು ಯಾವ ಆಹಾರ? ಯಾರು ಬೇಯಿಸಿದ್ದು? ಯಾವ ಜಾತಿಯವರೊಂದಿಗೆ ಕುಳಿತು ನೀವು ತಿನ್ನುತ್ತೀರಿ ಎಂಬುವು. ಸಾತ್ವಿಕ ಆಹಾರ – ಹಣ್ಣು, ಹಾಲು, ಅನೇಕ ಬಗೆಯ ಗೆಡ್ಡೆಗೆಣಸುಗಳು ಮತ್ತು ಸಾಮಾನ್ಯವಾಗಿ ಶಾಕಾಹಾರ – "ಶುದ್ಧತೆ"ಯ ಶ್ರೇಣಿಯಲ್ಲಿ ಮೊದಲನೆಯ ಸ್ಥಾನ ಪಡೆಯುತ್ತದೆ. ಅತ್ಯಂತ ನೀಚ ಜಾತಿಯ ವ್ಯಕ್ತಿಯು ತಂದುಕೊಟ್ಟ ಹಣ್ಣನ್ನಾದರೂ ಬ್ರಾಹ್ಮಣನು ಸೇವಿಸಬಹುದು. ಇದ್ದುದರಲ್ಲಿ ಮೇಲುಜಾತಿಯವನು ಸೇದಿಕೊಟ್ಟ ನೀರಿನಿಂದ ಅದನ್ನು ಚೆನ್ನಾಗಿ ತೊಳೆದು ಸೂಕ್ತವಾಗಿ ಮಡಿಗೊಳಿಸಿದ ಶುಭ್ರವಾದ ವಸ್ತ್ರದಿಂದ ಒರೆಸಿಕೊಟ್ಟರೆ; ಹಾಲು, ಮೊಸರುಗಳದ್ದು ಸ್ವಲ್ಪ ಸಮಸ್ಯೆ. ನೀರಿನೊಂದಿಗೆ ಸುಲಭವಾಗಿ ಬೆರೆತು ಅಶುಚಿಯಾಗುವ ಸಾಧ್ಯತೆ ಇದೆ. ಬಹುತೇಕ ಹಳ್ಳಿಗಳಲ್ಲಿ ಮಡಿವಂತ ಜಾತಿಗಳಿಗೆ ಬೇರೆ ಕುಡಿಯುವ ನೀರಿನ ಬಾವಿಗಳು, ಅನುಸೂಚಿತ ಜಾತಿಗಳಿಗೇ ಬೇರೆ ಬಾವಿಗಳಿರುವುವು. ಊರಿನಲ್ಲಿ ಒಂದೇ ಬಾವಿಯಿದ್ದರೆ ಅದನ್ನು "ಶುದ್ಧ" ಜಾತಿಯವರು ಮಾತ್ರವೇ ಉಪಯೋಗಿಸುತ್ತಾರೆ. ಅನುಸೂಚಿತ ಜಾತಿಗಳವರು ಬಾವಿಯನ್ನು ಮುಟ್ಟಲು ಅವಕಾಶವಿರುವುದಿಲ್ಲ. ಸಾಂಪ್ರದಾಯಿಕವಾಗಿ ನೀರು ಹೊರುವವರು ನಾಲ್ಕನೆಯ ವರ್ಣದವರು. ಅವರು ಹೊತ್ತು ತಂದ ನೀರನ್ನು ಸಾಮಾನ್ಯವಾಗಿ ಎಲ್ಲರೂ ಬಳಸುತ್ತಾರೆ, ಪರಿಶುದ್ಧಿಯ ಅತ್ಯುನ್ನತ ನೆಲೆಯಲ್ಲಿ ಇರುವವರ ಹೊರತಾಗಿ. ತಮ್ಮಷ್ಟೇ "ಶುದ್ಧ"ರಾದವರು ಅದರಲ್ಲೂ ವ್ಯಕ್ತಿಗತವಾಗಿ ಶುಚಿಯಾದವನು ತಂದುಕೊಡುವ ನೀರೇ ಆಗಬೇಕು ಅವರಿಗೆ. *ರಾಜಸಿಕ* ಮತ್ತು *ತಾಮಸಿಕ* ಆಹಾರಗಳ ನಡುವೆ ವ್ಯತ್ಯಾಸ ತೋರಿಸುವುದು ಕಷ್ಟ. ಅವುಗಳ ವಿವರಣೆಯಲ್ಲಿ ಪ್ರಾದೇಶಿಕ ಭಿನ್ನತೆಗಳು ಹಲವಿವೆ ಮತ್ತು ಸಂಕೀರ್ಣವಾಗಿವೆ. ಜಿಂಕೆಯ ಮಾಂಸ *ರಾಜಸಿಕ* ಎಂದು ಭಾವಿಸಲಾಗುತ್ತಿತ್ತು; ಹಾಗೆಯೇ ದ್ರಾಕ್ಷಿ ಮತ್ತು ಇತರ ಕೆಲವು "ಅಶುದ್ಧ"ವಲ್ಲದ ಹಣ್ಣುಗಳ ರಸವೂ ಅಷ್ಟೆ. ಖಾರವಾದ ಮತ್ತು ಕಟುವಾದ ವಾಸನೆಯುಳ್ಳ ಈರುಳ್ಳಿ, ಬೆಳ್ಳುಳ್ಳಿ ಮೊದಲಾದ ತರಕಾರಿಗಳು *ತಾಮಸಿಕ*ವೆನಿಸುತ್ತಿದ್ದುವು. ಎಮ್ಮೆ ಮತ್ತು ಹಂದಿಯ ಮಾಂಸವೂ ಅಷ್ಟೆ. ಕಾಡುಹಂದಿ ಮತ್ತು ಕಾಡುಕೋಳಿಗಳು ಸಾಕಿದವುಗಳಿಗಿಂತ ಪರಿಶುದ್ಧಗಳು. ಬ್ರಾಹ್ಮಣ ಮತ್ತು ವೈಶ್ಯ ಜಾತಿಗಳು *ಸಾತ್ವಿಕ* ಆಹಾರಕ್ಕೆ ಸೀಮಿತಗೊಂಡಿದ್ದುವು. ಇದಕ್ಕೆ ಅಪವಾದವಿರಲಿಲ್ಲವೆಂದಲ್ಲ. ಕಾಶ್ಮೀರೀ ಪಂಡಿತರು, ಮಹಾರಾಷ್ಟ್ರದ ಪಶ್ಚಿಮ ಕರಾವಳಿಯ ಸಾರಸ್ವತರು, ಬಂಗಾಳ ಮತ್ತು ಒರಿಸ್ಸಾಗಳಲ್ಲಿನ ಬ್ರಾಹ್ಮಣರು ಮೀನನ್ನೂ, ಮಾಂಸವನ್ನೂ ತಿನ್ನುತ್ತಾರೆ. ಕ್ಷತ್ರಿಯರು *ರಾಜಸಿಕ* ಆಹಾರವನ್ನು

ತೆಗೆದುಕೊಳ್ಳುತ್ತಿದ್ದರು. ಶೂದ್ರರಿಗೆ *ತಾಮಸಿಕ* ಆಹಾರವನ್ನು ವಿಧಿಸಲಾಗಿತ್ತು. ಅವರಿಗಿಂತ ಕೆಳಗಿನವರು ನಿಷೇಧಿತ ಆಹಾರವನ್ನು ಸೇವಿಸಬಹುದಾಗಿತ್ತು. ''ಮಡಿ'' ಜಾತಿಗಳಲ್ಲಿ *ಕಚ್ಚಾ* ಆಹಾರ ಮತ್ತು *ಪಕ್ಕಾ* ಆಹಾರಗಳ ನಡುವೆ ಭೇದ ಕಲ್ಪಿಸಲಾಗುತ್ತದೆ. ಮೊದಲನೆಯ ಆಹಾರವನ್ನು ಬೇಯಿಸುವಲ್ಲಿ ನೀರು ಒಂದು ಅಗತ್ಯ ವಸ್ತು; ಎರಡನೆಯ ಬಗೆಯ ಆಹಾರ ಎಣ್ಣೆಯಲ್ಲೋ, ತುಪ್ಪದಲ್ಲೋ, ಕರಿದದ್ದು. ದ್ರವವಸ್ತು ಬೇಕಾಗಿರುವಾಗ (ಉದಾಹರಣೆಗೆ ಗೋಧಿಹಿಟ್ಟನ್ನು ಕಲಸಿ ನಾದ ಬೇಕಾದಾಗ) ನೀರಿಗೆ ಬದಲು ಹಾಲನ್ನು ಬಳಸಬೇಕು. ಖೀರು ಅಥವಾ ಪಾಯಸವು ಪರಿಶುದ್ಧವೆಂದು ಪರಿಗಣಿಸಲಾಗುತ್ತದೆ, ಅಕ್ಕಿಯನ್ನು ಸ್ವಲ್ಪ ತುಪ್ಪದಲ್ಲಿ ಹುರಿದು ಆಮೇಲೆ ಹಾಲಿನಲ್ಲಿ ಬೇಯಿಸಿ ತಯಾರಿಸಿದ್ದರೆ. *ಕಚ್ಚಾ* ಆಹಾರವನ್ನು ತನಗಿಂತ ಮೇಲ್ಪಟ್ಟ ಜಾತಿಯವರು ಮಾತ್ರ ಸೇವಿಸಬಹುದು, ಕೆಲವು ಸಂದರ್ಭಗಳಲ್ಲಿ ತನ್ನದೇ ಸಮಾನ ಸ್ಥಾನವುಳ್ಳ ಜಾತಿಯವರೂ ಸೇವಿಸಬಹುದು. *ಪಕ್ಕಾ* ಆಹಾರದ ವಿಷಯದಲ್ಲಿ ಇನ್ನೂ ಸ್ವಲ್ಪ ಕೆಳಕ್ಕೆ ಬರಬಹುದು. ಶುಚಿ ಜಾತಿಯವರು ಕ್ಷೌರಿಕ, ಅಗಸ, ಮೇದ, ಮೊದಲಾದ ಅಶುಚಿ ಶೂದ್ರರಿಂದ *ಪಕ್ಕಾ* ಆಹಾರವನ್ನು ಕೂಡ ತೆಗೆದುಕೊಳ್ಳುವಂತಿಲ್ಲ. ಸಾಂಪ್ರದಾಯಿಕವಾಗಿ ಅಸ್ಪೃಶ್ಯರೆಂದು ಪರಿಗಣಿತರಾಗಿರುವ ಸಮುದಾಯಗಳಿಂದ ನಾಲ್ಕು ವರ್ಣಗಳ ಯಾವ ಜಾತಿಗಳವರೂ *ಪಕ್ಕಾ* ಆಹಾರವನ್ನೂ ಸ್ವೀಕರಿಸುವುದಿಲ್ಲ.

ಸಹಜೀವನವನ್ನು ಕುರಿತ ನಿಯಮಗಳೂ ಕೂಡ ದಿಕ್ಕುಗೆಡಿಸುವಷ್ಟು ಜಟಿಲವಾಗಿವೆ. ಒಂದೇ ಜಾತಿಯಲ್ಲೇ ಸಹಪಂಕ್ತಿ ಭೋಜನವನ್ನು ನಿಷೇಧಿಸುವ ವಿಭಿನ್ನ ಸ್ತರಗಳಿರಬಹುದು. ಕಾನ್ಯಕುಬ್ಜ ಬ್ರಾಹ್ಮಣರನ್ನು ಕುರಿತ ಒಂದು ಗಾದೆಯೇ ಇದೆ: *ತೀನ್ ಕನೋಜಿಯಾ ತೇರಾ ಚುಲ್ಹೇ* –ಮೂವರು ಕಾನ್ಯಕುಬ್ಜ ಬ್ರಾಹ್ಮಣರು ಹದಿಮೂರು ಒಲೆಗಳಲ್ಲಿ ಆಹಾರವನ್ನು ಬೇಯಿಸಿಕೊಳ್ಳುತ್ತಾರೆ– ಎಂದು. ಈ ಉಕ್ತಿ ಉತ್ಪ್ರೇಕ್ಷೆಯಿರಬಹುದು. ಆದರೆ ಚಿತ್ರ ಎಷ್ಟು ಗೊಂದಲಮಯವಾಗಿದೆ ಎಂಬುದನ್ನು ಅದು ಸೂಚಿಸುತ್ತದೆ. ಇಲ್ಲಿ ಬರುವ ಮುಖ್ಯ ಪ್ರಶ್ನೆ: ಒಟ್ಟಿಗೆ ಊಟ ಮಾಡಲು ಕುಳಿತಾಗ ಯಾರಿಗೆ ಯಾರು ಮೈಲಿಗೆ ಉಂಟು ಮಾಡುತ್ತಾರೆ ? *ಪಕ್ಕಾ* ಆಹಾರದ ವಿಷಯದಲ್ಲಿ ನಿಷಿದ್ಧ ವರ್ಗಗಳು ಕಡಿಮೆ, *ಕಚ್ಚಾ* ಆಹಾರದ ವಿಷಯದಲ್ಲಿ ಹೆಚ್ಚು. ಜಾತಿಗಳ ನಡುವೆ ಸಾಮಾಜಿಕ ದೂರವನ್ನು ಇರುವ ಅತ್ಯುತ್ತಮ ಮಾರ್ಗವೆಂದರೆ, ಪೂರ್ವ ನಿದರ್ಶನವನ್ನೂ ವ್ಯವಸ್ಥೆಯನ್ನೂ; ಮದುವೆಯ ಔತಣಗಳಲ್ಲಿ ಬೇರೆ ಬೇರೆಯಾಗಿರುವುದು, ಒಟ್ಟಾಗುವುದು; ಮರಣಾನಂತರ ಹನ್ನೊಂದು ಮತ್ತು ಹದಿಮೂರನೆಯ ದಿನದ ಶೌಚಕ್ರಿಯೆಗಳು, ಪಾಪಕಾರ್ಯ ಅಥವಾ ಗಂಭೀರ ರೂಪದ ಸಾಮಾಜಿಕ ಅಕೃತ್ಯ ನಡೆಸಿದಾಗ ಅದರ ಶುದ್ಧಿಗಳು ನಡೆಸುವ ಪ್ರಾಯಶ್ಚಿತ್ತ ರೂಪದ ಕ್ರಿಯೆಗಳು ಇವುಗಳನ್ನೂ ಗಮನಿಸುವುದು. ನಿರ್ದಿಷ್ಟ ಸಂದರ್ಭದ ಹಿನ್ನೆಲೆಯಲ್ಲಿ ಅವು ಒಂದು ಜಾತಿಯ ಅನುಕ್ರಮಸ್ಥಾನ ನಿರ್ದೇಶ ಮಾಡುತ್ತವೆ.

ಶುದ್ಧಜಾತಿಗಳಿಗೂ ಹಲವು ವರ್ಗದ ನೀಚಜಾತಿಗಳಿಗೂ ನಡುವೆ ದೈಹಿಕ ಸಂಪರ್ಕವನ್ನು ನಿವಾರಿಸಬೇಕು. ಅಸ್ಪೃಶ್ಯತೆಯ ಆಚರಣೆಗೆ ದಕ್ಷಿಣ ಭಾರತವು

ಅತಿರೇಕದ ನಿದರ್ಶನಗಳನ್ನು ನೀಡಿತು. ಕೆಲವು ಅತಿ ನೀಚ ಜಾತಿಗಳ ಜನರನ್ನು ನೋಡುವುದೇ ಮೈಲಿಗೆ ಎಂದು ಭಾವಿಸಲಾಗುತ್ತಿತ್ತು. ಕೆಲವು ಜಾತಿಯವರ ನೆರಳು ಸೋಂಕುವುದೂ ಮೈಲಿಗೆ ಎಂದು ನಂಬಲಾಗಿತ್ತು. ತಮಿಳುನಾಡು ಮತ್ತು ಕೇರಳಗಳಲ್ಲಿ ಈ ಕ್ರೂರ ಪದ್ಧತಿ ಆಚರಣೆಯಲ್ಲಿತ್ತು. ಕೇರಳದ ತೀಯನ್ (ಹೆಂಡ ಇಳಿಸುವವರು) ಜಾತಿಯವರು ನಂಬೂದಿರಿ ಬ್ರಾಹ್ಮಣರಿಂದ ಮೂವತ್ತಾರು ಹೆಜ್ಜೆ ದೂರದಲ್ಲಿರಬೇಕು; ಪುಲ್ಯನ್ (ಬೇಸಾಯ ಮಾಡುವವರು) ತೊಂಬತ್ತಾರು ಹೆಜ್ಜೆ ಅಂತರದಲ್ಲಿರಬೇಕಾಗಿತ್ತು. ಅತ್ಯಂತ ಸಾಮಾನ್ಯವಾದ ಮತ್ತು ಅತಿ ಕಡಮೆ ಕ್ರೂರವಾದ ರೀತಿಯ ಅಸ್ಪೃಶ್ಯತೆಯೆಂದರೆ ಶುದ್ಧಜಾತಿಗಳೊಂದಿಗೆ ದೈಹಿಕ ಸಂಪರ್ಕ ಪಡೆಯಕೂಡದು ಎನ್ನುವುದು ಹಾಗೂ ಅವರ ಮನೆಗಳಿಗೆ ಪ್ರವೇಶ ನಿಷಿದ್ಧ ಎನ್ನುವುದು. ಅಸ್ಪೃಶ್ಯ ಜಾತಿಗಳಿಗೆ ಊರಿನ ದೇವಾಲಯದೊಳಕ್ಕೆ ಪ್ರವೇಶವಿರಲಿಲ್ಲ; ಕುಡಿಯುವ ನೀರಿನ ಬಾವಿಯನ್ನು ಅವರು ಬಳಸುವಂತಿರಲಿಲ್ಲ. ಅವರು ತಮ್ಮ ವಸತಿಗಳನ್ನು ಹಳ್ಳಿಯಿಂದ ಹೊರಗೆ, ಅನೇಕ ವೇಳೆ ಸ್ವಲ್ಪ ದೂರದಲ್ಲಿ ಕಟ್ಟಿಕೊಳ್ಳಬೇಕಾಗಿತ್ತು. ಶಾಲೆಗಳಲ್ಲಿ ಈ ಜಾತಿಯ ಮಕ್ಕಳು ಪ್ರತ್ಯೇಕವಾಗಿ ಕುಳಿತುಕೊಳ್ಳಬೇಕಾಗಿತ್ತು. ಟೀ ಅಂಗಡಿಗಳಲ್ಲೂ ಕೂಡ ಅವರು ಬೇರೆಯೇ ಬಟ್ಟಲುಗಳಲ್ಲಿ ಕುಡಿದು ಅವರೇ ಅವುಗಳನ್ನು ತೊಳೆದು ಪ್ರತ್ಯೇಕವಾಗಿ ಇಡಬೇಕಾಗಿತ್ತು. ಈಗ ಕಾನೂನು ಅಸ್ಪೃಶ್ಯತೆಯನ್ನು ನಿಷೇಧಿಸಿದೆ. ಅನುಸೂಚಿತ ಜಾತಿಗಳನ್ನು ಇತರರೊಂದಿಗೆ ಸಮಾನವಾಗಿ ಪರಿಗಣಿಸತಕ್ಕದ್ದು ಎಂದು ತಾತ್ವಿಕವಾಗಿ ಹೇಳಿದೆ. ಆದರೆ ರೋಷವ್ಯಕ್ತಿಸುವಂತಹ ಭೇದಗಳು ಇವತ್ತಿಗೂ ಆಚರಣೆಯಲ್ಲಿವೆ. ಸೂಕ್ಷ್ಮರೂಪದ ಪಕ್ಷಪಾತಗಳನ್ನು ಮಾಡಲಾಗುತ್ತಿದೆ.

ಇವತ್ತಿಗಿಂತ ಹೆಚ್ಚು ಪ್ರಮಾಣದಲ್ಲಿ ಹಿಂದೆ ಒಂದು ಜಾತಿಯ ಸದಸ್ಯರು ಒಂದು ಸಮಾನ ಸಂಸ್ಕೃತಿಯನ್ನು ಹಂಚಿಕೊಂಡಿದ್ದರು. ಆಗಲೂ ಈ ನಿಯಮಕ್ಕೆ ಅಪವಾದಗಳಿರಲಿಲ್ಲವೆಂದಲ್ಲ, ಬಹುತೇಕ ಜಾತಿಗಳು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತಗೊಂಡಿದ್ದುವು. ಅವು ಪ್ರಾದೇಶಿಕವಾದೊಂದು ಸಂಸ್ಕೃತಿಯ ಭಾಗವಾಗಿದ್ದುವು. ಜೊತೆಗೆ ನಿರ್ದಿಷ್ಟಜಾತಿಯ ಕೆಲವು ವಿಶಿಷ್ಟ ಸಾಂಸ್ಕೃತಿಕ ಲಕ್ಷಣಗಳನ್ನೂ ಹೊಂದಿದ್ದುವು. ರಾಜಪುತ್ರರು ಇಂತಹ ಒಂದು ಅಪವಾದ. ಸ್ಪಷ್ಟವಾಗಿ ಒಡೆದು ಕಾಣುವ ಪ್ರಾದೇಶಿಕ ಭಿನ್ನತೆ ಅವರಲ್ಲಿದ್ದಿತು. ಸ್ವಗೋತ್ರ ವಿವಾಹವನ್ನು ಅವರು ವಿಧಿಸಲಿಲ್ಲ, ಸಂಸ್ಕೃತಿಯಲ್ಲಿ, ಭಾಷೆಯಲ್ಲಿ ಬೇರೆ ಬೇರೆ ಪ್ರಾದೇಶಿಕ ವರ್ಗಗಳು ಭಿನ್ನತೆ ಹೊಂದಿದ್ದುವು, ಆದರೆ ಅವು ಯಾವುವೂ ಅಂತರ್-ವಿವಾಹವನ್ನು ವಿರೋಧಿಸಲಿಲ್ಲ. ಅಧಿಕಾರ ಮತ್ತು ಸಂಪತ್ತು ಒಂದು ವರ್ಗಕ್ಕೆ ಕೆಲವು ಸಾಂಸ್ಕೃತಿಕ ಲಕ್ಷಣಗಳನ್ನು ನೀಡಿದುವು, ಮಿಕ್ಕ ಜಾತಿಗಳಿಗೆ ಆ ಸೌಲಭ್ಯ ದೊರಕಲಿಲ್ಲ.

ಬಹುತೇಕ ಗ್ರಾಮಗಳಲ್ಲಿ ತಮ್ಮಲ್ಲಿನ ವ್ಯಾಜ್ಯಗಳನ್ನೂ, ಅಂತರ-ಗ್ರಾಮ ವ್ಯಾಜ್ಯಗಳನ್ನೂ ಪರಿಹರಿಸಿಕೊಳ್ಳುವ ಒಂದು ವ್ಯವಸ್ಥೆಯಿತ್ತು. ಇಂದು ಅವು ದುರ್ಬಲವಾಗುತ್ತಿದ್ದರೂ ಅವು ಇದ್ದುದನ್ನು ತಳ್ಳಿಹಾಕುವಂತಿಲ್ಲ. ಐದನೆಯ ಅಧ್ಯಾಯದಲ್ಲಿ ಮತ್ತೆ ಈ ವಿಷಯಕ್ಕೆ ಹಿಂದಿರುಗೋಣ.

ಜಾತಿಯ ಧಾರ್ಮಿಕಾಚರಣೆಯ ಮುಖ ಈ ಆಧುನಿಕ ಕಾಲದಲ್ಲಿ ಸಾಕಷ್ಟು ಸವಕಳಿಯನ್ನು ಕಂಡಿದೆ. ಆದರೆ ಅದೇ ಸಮಯದಲ್ಲಿ ಜಾತಿಯು ಅನಿರೀಕ್ಷಿತ ಮೂಲದಿಂದ ಹೆಚ್ಚಿನ ಬಲವನ್ನು ಪಡೆದುಕೊಂಡಿದೆ. ಪ್ರಜಾಸತ್ತಾತ್ಮಕ ಚುನಾವಣೆಗಳಿಗೆ ಒಂದುಗೂಡಿಸಿ ಸಜ್ಜುಗೊಳಿಸಿದ ಆಧಾರಗಳು ಬೇಕು. ಜಾತಿಯ ಒಗ್ಗೂಡುವಿಕೆ ಬಲವಾದ ರಾಜಕೀಯ ಪ್ರಭಾವವನ್ನು ಹೊಂದಿರುವಂತೆ ತೋರುತ್ತದೆ. ಅದನ್ನು ವ್ಯಾಪಕವಾಗಿ ಬಳಸಲಾಗುತ್ತದೆ. ಅನೇಕ ಮತಕ್ಷೇತ್ರಗಳಲ್ಲಿ ಮುಖ್ಯ ಸ್ಪರ್ಧಾಳುಗಳು ಒಂದೇ ಜಾತಿಯವರಾಗಿರುತ್ತಾರೆ. ಇದು ರಾಜಕೀಯದಲ್ಲಿ ಜಾತಿಪಟ್ಟಿಯ ಪರಿಣಾಮವನ್ನು ಸ್ವಲ್ಪಮಟ್ಟಿಗೆ ಕುಗ್ಗಿಸುತ್ತದೆ. ಈಗ ಇನ್ನೂ ಒಂದು ಪ್ರವೃತ್ತಿ ಗೋಚರಿಸುತ್ತಿದೆ. ಶ್ರೀಮಂತ ಮತ್ತು ಸಶಕ್ತ ಜಾತಿಗಳು ಒಂದುಗೂಡಿ ಗ್ರಾಮವನ್ನು ತಮ್ಮ ಅಂಕೆಗೆ ತೆಗೆದುಕೊಳ್ಳುತ್ತವೆ. ಈ ಕೂಡಿಕೆಯು ಭಯೋತ್ಪಾದಕವಾಗಿರುತ್ತದೆ. ಅವರ ರಾಜಕೀಯ ಮತ್ತು ಆರ್ಥಿಕ ಪ್ರಭಾವಗಳು ಕೆಳಜಾತಿಗಳನ್ನು ಅಧೀನ ಮಾಡಿಬಿಡುತ್ತವೆ. ಪ್ರತಿಭಟನೆಯ ಅತಿಸಣ್ಣ ಕುರುಹನ್ನೂ, ಹಿಂಸಾಚಾರದಿಂದ (ಮಾನಭಂಗ, ಕೊಲೆಗಳು ಕೂಡಿದಂತೆ) ಸದ್ದಡಗಿಸಲಾಗುತ್ತದೆ. ಕೊಯಿಲಿಗೆ ನಿಂತ ಬೆಳೆಗಳಿಗೆ ಬೆಂಕಿ ಹಚ್ಚುವುದು, ಇಡೀ ಹಳ್ಳಿಗೆ ಬೆಂಕಿ ಹಚ್ಚುವುದು ಮುಂತಾದ ಹಿಂಸಾಕೃತ್ಯಗಳಲ್ಲಿ ತೊಡಗಲಾಗುತ್ತದೆ. ಬಡಜನರನ್ನು ತಮ್ಮ ಜಾತಿಯ ಅಭ್ಯರ್ಥಿಗೇ ವೋಟು ಹಾಕುವಂತೆ ಒತ್ತಾಯ ಪಡಿಸುವುದರಿಂದ, ಅಥವಾ ಪ್ರಭಾವಶಾಲಿಗಳಾದವರ ಕಡೆಯ ಅಭ್ಯರ್ಥಿಗಳಿಗೆ ವೋಟು ಹಾಕಿಸುವುದರಿಂದ ಅಥವಾ ಮತವನ್ನೇ ಚಲಾಯಿಸದೆ ಸುಮ್ಮನಿರುವಂತೆ ಮಾಡುವುದರಿಂದ ತಮಗೆ ಬೇಕಾದ ಫಲಿತಾಂಶವನ್ನು ಪಡೆಯಲಾಗುತ್ತದೆ. ಹೀಗೆ ಅಧಿಕಾರವನ್ನೂ, ಜಾತಿಯನ್ನೂ ಸಂಬಂಧಗೊಳಿಸುವುದರಿಂದ ದೇಶದ ಪ್ರಜಾಸತ್ತಾತ್ಮಕ ಪ್ರಕ್ರಿಯೆಗಳಲ್ಲಿ ಭಾರೀ ಅನಾಹುತಗಳು ಸಂಭವಿಸುತ್ತವೆ.

ಭಾರತದ "ಜಾತಿ" ಪದ್ಧತಿಯನ್ನು ಸ್ವದೇಶದಲ್ಲೂ ವಿದೇಶಗಳಲ್ಲೂ ಬಹುವಾಗಿ ಖಂಡಿಸಲಾಗಿದೆ. ಆದರೂ ವರ್ಣ ಮತ್ತು ಜಾತಿ ಅಸಾಧಾರಣ ರೀತಿಯಲ್ಲಿ ಬೇರುಬಿಟ್ಟು ನಿಂತೇ ಇವೆ. ಅವುಗಳ ಮೇಲೆ ಎಂಥೆಂಥ ಆಕ್ರಮಣ ನಡೆದರೂ ಚೆಂಡು ಪುಟಿದೇಳುವಂತೆ ಅವು ಒಂದಲ್ಲ ಒಂದು ರೂಪದಲ್ಲಿ ಉಳಿದೇ ಇವೆ. ಆದರೆ ಬದಲಾದ ಕಾಲಕ್ಕೆ ತಕ್ಕ ಹಾಗೆ ಅವೂ ಸ್ವಲ್ಪಮಟ್ಟಿಗೆ ಬದಲಾಗಬೇಕಾಯಿತು. ಉದಾಹರಣೆಗೆ ಅಸ್ಪೃಶ್ಯತೆ, ಸಹಜೀವನ, ಜಾತ್ಯಾಧಾರಿತ ವೃತ್ತಿಗಳು ಮೊದಲಾದ ಅಂಶಗಳಲ್ಲಿ ಸ್ವಲ್ಪಮಟ್ಟಿಗೆ ಸಡಿಲಿಕೆ ಕಂಡುಬಂದಿದೆ. ಆದರೆ ಅದೇ ಸಮಯಕ್ಕೆ ಅವು ನೂತನವಾಗಿ ರಾಜಕೀಯವಾದ ಪಾತ್ರಗಳನ್ನೂ ನಿರ್ವಹಿಸತೊಡಗಿವೆ. ಹಾಗಾಗಿ ಸ್ವಾತಂತ್ರ್ಯ ಪಡೆದ ನಲವತ್ತು ವರ್ಷಗಳ ಬಳಿಕವೂ ವರ್ಣ–ಜಾತಿ ಕಟ್ಟುಗಳು ಹೊಸ ಹೊಸದಾಗಿ ಬಲಗೊಳ್ಳುತ್ತಲೇ ಇರುವುದು ವಿಪರ್ಯಾಸ.

ಬೇರೆ ಕಡೆಯಿಂದ ಬಂದು ಇಲ್ಲಿ ನೆಲೆಗೊಂಡ ಧರ್ಮಗಳು – ವಿಶೇಷವಾಗಿ ಕ್ರೈಸ್ತ ಧರ್ಮ ಮತ್ತು ಇಸ್ಲಾಂ ಧರ್ಮ – ಇಲ್ಲಿನ ವರ್ಣ, ಜಾತಿ ವ್ಯವಸ್ಥೆಯೊಂದಿಗೆ ಕಟ್ಟುಪಾಡು ಮಾಡಿಕೊಳ್ಳಬೇಕಾಯಿತು, ಮೂಲತಃ ತಮ್ಮದಲ್ಲದ ಕೆಲವು

ಲಕ್ಷಣಗಳನ್ನು ಅವುಗಳಿಂದ ಪಡೆದು ಸೇರಿಸಿಕೊಳ್ಳಬೇಕಾಯಿತು ಎಂಬುದನ್ನು ಹಿಂದಿನ ಅಧ್ಯಾಯಗಳಲ್ಲಿ ನೋಡಿದ್ದೇವೆ. ಇವು ಇಂದಿಗೂ ಹಾಗೆಯೇ ಉಳಿದಿರುವುದು ಆಚ್ಚರಿಯ ಸಂಗತಿಯಾಗಿದೆ.

ಕ್ರಿಶ್ಚಿಯನರು ಮತ್ತು ಮುಸ್ಲಿಮರಲ್ಲಿ ಅತ್ಯಂತ ಸ್ಪಷ್ಟವಾದ ವರ್ಣ ವಿಭಜನೆ ಕಂಡುಬರುವುದಿಲ್ಲವಾದರೂ ಮತಾಂತರಿಗಳಲ್ಲೇ ಮೇಲುಜಾತಿ ಮತ್ತು ಕೆಳಜಾತಿ ಎಂಬ ಭೇದ ಇರುವುದನ್ನು ನೋಡಬಹುದು. ಮೊದಲಿನವರು ತಮ್ಮನ್ನು ಬ್ರಾಹ್ಮಣ ಕ್ರಿಶ್ಚಿಯನರು ಅಥವಾ ನಾಯರ್ ಕ್ರಿಶ್ಚಿಯನರು ಅಥವಾ ರಜಪೂತ ಅಥವಾ ತ್ಯಾಗಿ ಮುಸ್ಲಿಮರು ಎಂದು ಪ್ರತ್ಯೇಕಗೊಳಿಸಿಕೊಳ್ಳುತ್ತಾರೆ. ಮಂಡಲ್ ಆಯೋಗವು (1980) ಹೀಗೆ ಹೇಳಿದೆ: "....ಜಾತಿ ಪದ್ಧತಿಯು ಒಂದು ದೊಡ್ಡ ಮನೋ ನಿಯಂತ್ರಕವಾಗಿದೆ ಮತ್ತು ವ್ಯಕ್ತಿಯ ಸಾಮಾಜಿಕ ಪ್ರಜ್ಞೆಯ ಹಾಗೂ ಸಾಂಸ್ಕೃತಿಕ ಲಕ್ಷಣದ ಮೇಲೆ ಅಳಿಸಲಾಗದ ಗುರುತನ್ನು ಉಳಿಸುತ್ತದೆ."

1988 ಜನವರಿಯಲ್ಲಿ ತಮಿಳುನಾಡಿನ ಬಿಷಪ್ಪರು ತಮ್ಮ ವಾರ್ಷಿಕ ಸಭೆಯಲ್ಲಿ ಹೀಗೆ ಅಭಿಪ್ರಾಯಪಟ್ಟರು: "ಅನುಸೂಚಿತ ಜಾತಿಯ ಕ್ರಿಶ್ಚಿಯನರು, ಮತಾಂತರಗೊಂಡಾದ ಮೇಲೆಯೂ ಸಾಂಪ್ರದಾಯಿಕವಾದ ಅಸ್ಪೃಶ್ಯತೆಯಿಂದ ಬಂದ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಹಿಂದುಳಿಕೆಗೆ ಪಕ್ಕಾಗಿದ್ದಾರೆ." ತಮಿಳುನಾಡಿನ ಕ್ಯಾಥೊಲಿಕ್ ಬಿಷಪ್ಪರು 1988 ಫೆಬ್ರವರಿಯಲ್ಲಿ ಹೊರಡಿಸಿದ ಒಂದು ಮಠೀಯ ಪರಿಪತ್ರದಲ್ಲಿ "ಕ್ರಿಶ್ಚಿಯನ್ ಸಾಮಾಜಿಕ ಜೀವನದಲ್ಲಿ ಮತ್ತು ಧಾರ್ಮಿಕಾಚರಣೆ ಯಲ್ಲಿ ಜಾತಿ ಭಿನ್ನತೆಗಳು ಮತ್ತು ಅವುಗಳ ಫಲವಾದ ಅನ್ಯಾಯ ಮತ್ತು ಹಿಂಸಾಚಾರಗಳು ಇನ್ನೂ ಮುಂದುವರಿದಿವೆ. ಈ ಪರಿಸ್ಥಿತಿ ನಮಗೆ ಅರಿವಾಗಿದೆ. ಅಪಾರ ವಿಷಾದದಿಂದ ಅದನ್ನು ಒಪ್ಪಿಕೊಳ್ಳುತ್ತಿದ್ದೇವೆ" ಎಂದು ನುಡಿದರು. ಇಂದು 19 ಮಿಲಿಯನ್ ಭಾರತೀಯ ಕ್ರೈಸ್ತರಲ್ಲಿ ಶೇ. 60ರಷ್ಟು ಜನ ಹೀಗೆ ಜಾತೀಯ ಪಕ್ಷಪಾತ ಧೋರಣೆಗೆ ಗುರಿಯಾಗಿದ್ದಾರೆ. ದ್ವಿತೀಯ ದರ್ಜೆಯ ಕ್ರಿಶ್ಚಿಯನ್ನರನ್ನಾಗಿ ಅಥವಾ ಇನ್ನೂ ಕೀಳಾಗಿ ಅವರ ಬಗೆಗೆ ವ್ಯವಹರಿಸಲಾಗುತ್ತಿದೆ ಎಂಬುದಾಗಿ ಭಾರತೀಯ ಚರ್ಚ್ ಕಂಡುಕೊಂಡಿದೆ. ದಕ್ಷಿಣದಲ್ಲಿ ಅನುಸೂಚಿತ ಜಾತಿಗಳಿಂದ ಮತಾಂತರಗೊಂಡು ಕ್ರೈಸ್ತರಾದವರನ್ನು ವಸತಿಯಲ್ಲೂ, ಚರ್ಚ್‌ನಲ್ಲೂ ಪ್ರತ್ಯೇಕವೆಂದೇ ಪರಿಗಣಿಸಲಾಗುತ್ತದೆ. ಅವರ *ಚೇರಿ* ಅಥವಾ ಬಡಾವಣೆಯು ಊರಿನಿಂದ ದೂರದಲ್ಲಿ ಇರುತ್ತದೆ. ಇತರರಿಗೆ ದೊರಕುವ ಪೌರ ಸೌಲಭ್ಯಗಳು ಇವರಿಗೆ ದೊರಕುವುದಿಲ್ಲ. ಚರ್ಚ್ ಸರ್ವಿಸುಗಳಲ್ಲಿಯೂ ಕೂಡ ಇವರನ್ನು ಪ್ರತ್ಯೇಕವಾಗಿ ಬಲಗಡೆ ಕುಳಿತುಕೊಳ್ಳುವಂತೆ ಮಾಡಲಾಗುತ್ತದೆ. ಸರ್ವಿಸ್ ಸಮಯದಲ್ಲಿ ಶಾಸ್ತ್ರಗ್ರಂಥವನ್ನು ಓದಲು ಅಥವಾ ಪಾದ್ರಿಗೆ ನೆರವಾಗಲು ಇವರಿಗೆ ಅವಕಾಶವಿಲ್ಲ. ಶುದ್ಧಸ್ನಾನ, ಸ್ಥಿರೀಕರಣ ಮತ್ತು ವಿವಾಹ ಸಂದರ್ಭಗಳಲ್ಲಿ ಇವರು ಪವಿತ್ರ ಪ್ರಸಾದವನ್ನು ಎಲ್ಲರ ನಂತರ ಕೊನೆಗೆ ಪಡೆಯಬೇಕು. ಕೆಳಜಾತಿಗಳ ಕ್ರಿಶ್ಚಿಯನರ ಮದುವೆ ಮೆರವಣಿಗೆಯಾಗಲಿ, ಅಂತಿಮ ಯಾತ್ರೆಯಾಗಲಿ ಮುಖ್ಯ ಬಡಾವಣೆಯ ಬೀದಿಗಳಲ್ಲಿ ಹಾದು ಹೋಗುವಂತಿಲ್ಲ. ಕ್ರೈಸ್ತಮತಕ್ಕೆ ಬಂದ

ಅನುಸೂಚಿತ ಜಾತಿಗಳವರಿಗೇ ಪ್ರತ್ಯೇಕವಾದ ರುದ್ರಭೂಮಿಗಳುಂಟು. ಅವರಲ್ಲಿ ಸತ್ತವರಿಗಾಗಿ ಚರ್ಚಿನ ಗಂಟೆ ಮೊಳಗುವುದಿಲ್ಲ ಅಥವಾ ಸತ್ತವರ ಮನೆಗೆ ಪ್ರಾರ್ಥನೆ ಸಲ್ಲಿಸಲು ಪುರೋಹಿತನು ಬರುವುದೂ ಇಲ್ಲ. ಅಂತಿಮ ಕ್ರಿಯೆಯು ಸಲುವಾಗಿ ಅವರಲ್ಲಿನ ಮೃತದೇಹಗಳನ್ನು ಚರ್ಚಿಗೆ ಒಯ್ಯುವಂತಿಲ್ಲ. ಮೇಲುಜಾತಿಯ ಕ್ರಿಶ್ಚಿಯನರಿಗೂ ಕೆಳಜಾತಿಯ ಕ್ರಿಶ್ಚಿಯನರಿಗೂ ಅಂತರ್–ವಿವಾಹವಂತೂ ಇಲ್ಲವೇ ಇಲ್ಲ, ಸಹಪಂಕ್ತಿ ಭೋಜನವೂ ಇಲ್ಲ. ಅವರ ನಡುವೆ ಸಂಘರ್ಷ ಪದೇಪದೇ ಸಂಭವಿಸುತ್ತದೆ. ಕೆಳಜಾತಿಯ ಕ್ರಿಶ್ಚಿಯನರು ತಮ್ಮ ಸ್ಥಾನವನ್ನು ಉತ್ತಮಪಡಿಸಿಕೊಳ್ಳಲು ಹೋರಾಡುತ್ತಿದ್ದಾರೆ. ಚರ್ಚು ಅದಕ್ಕೆ ಪ್ರತಿಸ್ಪಂದಿಸುತ್ತಿದೆ. ಆದರೆ ಇಷ್ಟು ದಿನಗಳಾದರೂ ಅರ್ಥವತ್ತಾದ ಬದಲಾವಣೆ ಯಾವುದೂ ಕಂಡುಬಂದಿಲ್ಲ. ಮೇಲುಜಾತಿಯ ಕ್ರಿಶ್ಚಿಯನರಲ್ಲೂ ತಮ್ಮ ಜಾತಿಮೂಲವನ್ನು ನೆನಪಿಗೆ ತಂದುಕೊಂಡು ಸಾಮಾಜಿಕ ಸಂಬಂಧಗಳಲ್ಲಿ ಅದರ ವರ್ಣಛಾಯೆಯನ್ನು ಬೀಳಿಸುವುದುಂಟು.

ಮುಸ್ಲಿಮರಲ್ಲಿ ಪರಿಸ್ಥಿತಿ ಬೇರೆಯೇ ತೆರನಾದದ್ದು. ಪ್ರಾರ್ಥನೆ ಸಲ್ಲಿಸಲು ಮಸೀದಿಗೆ ಎಲ್ಲರೂ ಹೋಗಬಹುದು. ಅಲ್ಲಿ ಅಸ್ಪೃಶ್ಯತೆಯ ಆಚರಣೆ ಸ್ಪಷ್ಟ ಗೋಚರವಾಗಿಲ್ಲ. ಆದರೂ ವರ್ಣ – ಜಾತಿ ಭೇದಗಳ ಹಾಗೆ ಸಾಮಾಜಿಕ ಅಂತಸ್ತನ್ನು ಸೂಚಿಸುವ ಹಾಗೂ ಸಾಮಾಜಿಕ ಅಂತರ್–ಕ್ರಿಯೆಗಳಿಗೆ ಆಧಾರವಾಗುವ ಭೇದ ಕಲ್ಪನೆಗಳು ಅಲ್ಲೂ ಇದ್ದೇ ಇವೆ. ಅಶ್ರಫ್ ಮತ್ತು ಅಜ್ಲಫ್ ವರ್ಗಗಳನ್ನು ಕುರಿತಾಗಿ ಈ ಮೊದಲೇ ಉಲ್ಲೇಖಿಸಿದ್ದಾಗಿದೆ. ಷರೀಫ್ ಜಾಟ್ (ಉತ್ತಮ ಮೂಲದ, ಮೇಲುಜಾತಿಯ ರೀತಿಯ ರಚನೆ) ಹಾಗೂ ಅಜ್ಲಫ್ ಜಾಟ್ (ಸಾಮಾನ್ಯ ಮೂಲದ, ಕೆಳಜಾತಿ ರೀತಿಯ ರಚನೆ) ಗಳ ಬಗೆಗೆ ಮಾತನಾಡುವುದೂ ಸಾಮಾನ್ಯವಾಗಿದೆ. ಈ ಭೇದಗಳು ವಿವಾಹ, ಸಹಭೋಜನ ಮತ್ತು ಸಾಮಾಜಿಕ ಸಮಾರಂಭಗಳಲ್ಲಿ ಭಾಗವಹಿಸುವಿಕೆ ಮೊದಲಾದ ಸಾಮಾಜಿಕ ಅಂತರ್–ಕ್ರಿಯೆಗಳನ್ನು ನಿರ್ಧರಿಸುತ್ತವೆ. ಮೂಲಜಾತಿಗಳನ್ನು ಸ್ಮರಣೆಯಲ್ಲಿ ಇಟ್ಟುಕೊಂಡು, ಹಿಂದೂ ಧರ್ಮದಿಂದ ಇಸ್ಲಾಮಿಗೆ ಮತಾಂತರ ಹೊಂದಿದವರು ತಮ್ಮ ಹಿಂದಿನ ಜಾತಿಸಂಬಂಧದ ವೃತ್ತಿಗಳನ್ನೇ ಆಚರಿಸುತ್ತಾರೆ. ಮುಗಲ್ ಕಾಲದಲ್ಲಿ ಸಯ್ಯದ್, ಶೇಖ್, ಮುಘಲ್ ಮತ್ತು ಪಠಾಣ್ ಎಂಬ ವಿಭಜನೆಯನ್ನು ಅನೇಕ ವೇಳೆ ಹಿಂದೂ ಸಮಾಜದ ವರ್ಣ ವಿಭಜನೆಯೊಂದಿಗೆ ಸಮೀಕರಿಸಲಾಗುತ್ತಿತ್ತು. ಭಾರತದ ಕೆಲವು ಭಾಗಗಳಲ್ಲಿ ಇಸ್ಲಾಮಿಗೆ ಮತಾಂತರಗೊಂಡವರು ಈ ಯಾವುದಾದರೂ ಒಂದು ವರ್ಗದಲ್ಲಿ ದಾಖಲಾಗುವುದು ಅಗತ್ಯವೆಂದು ಭಾವಿಸುತ್ತಿದ್ದರು. ಇದು ಇಸ್ಲಾಂ ಧರ್ಮದ ತತ್ವಕ್ಕೆ ತಕ್ಕದ್ದೇ ಅಲ್ಲವೆ ಎಂಬುದು ಬೇರೆ ಪ್ರಶ್ನೆ. ಅದು ನಡೆಯುತ್ತಿದ್ದುದಂತೂ ವಾಸ್ತವ. ಸಯ್ಯದರು ಪ್ರವಾದಿ ಮಹಮ್ಮದನ ಮಗಳ ಮೂಲಕವಾಗಿ ಬಂದ ವಂಶಕ್ಕೆ ಸೇರಿದವರು; ಅವರು ಅರಬ್ ಮೂಲದವರು. ಆದರೆ ಇಸ್ಲಾಮಿಗೆ ಮತಾಂತರಗೊಂಡ ಹಲವು ಮೇಲುಜಾತಿಗಳವರೂ ಈ ಸ್ಥಾನವನ್ನು ಬಯಸಿದರು. ಬ್ರಾಹ್ಮಣರಾಗಿದ್ದ

ಮತಾಂತರಿಗಳು ತಮ್ಮನ್ನು ಸಯ್ಯದ್ ಸ್ಥಾನದಲ್ಲಿರಿಸಿಕೊಂಡು ಅದನ್ನು ಅಕ್ಬರ್ ಚಕ್ರವರ್ತಿಯು ಸ್ಥಿರೀಕರಿಸಿದ್ದನು ಎಂದು ಹೇಳಿದರು. ಶೇಖರೂ ಅರಬ್ ಮೂಲದವರೇ. ಆದರೆ ಪ್ರವಾದಿಯ ವಂಶಜರಲ್ಲ. ಮೊದಲ ಪೀಳಿಗೆಯ ಮತಾಂತರಿಗಳೂ ತಮ್ಮನ್ನು ಶೇಖರೆಂದು ಕರೆದುಕೊಂಡರು. ಆ ನಂತರದ ಸ್ಥಾನ ದೆಹಲಿಯ ಆಳುವ ಅಂಶವಾದ ಮುಘಲರದು. ಅವರು ಟರ್ಕಿ ಮೂಲದವರು. ಆದರೆ ಟರ್ಕಿಯ ಆಟೋಮನ್ ಅರಸರಿಂದ ತಮ್ಮನ್ನು ಬೇರೆಯಾಗಿ ತೋರಿಸಿಕೊಳ್ಳುವ ಸಲುವಾಗಿ ಈ ಪದವಿಯನ್ನು ಪಡೆದುಕೊಂಡರು. ಪಠಾಣರು ಆಫ್‌ಘನ್ ಮೂಲದವರು. ಅನೇಕರಿಗೆ ಆಫ್ಘಾನಿಸ್ಥಾನದೊಂದಿಗೆ ಅತಿ ದೂರದ ಕೂದಲೆಳೆಯಷ್ಟು ಸಂಬಂಧವಿಲ್ಲದೆ ಹೋದರೂ ಅವರು ಈ ಸ್ಥಾನವನ್ನು ಬಯಸಿದರು. ಸಾಕಷ್ಟು ಪ್ರಮಾಣದಲ್ಲಿ ಹಂತಗಳಲ್ಲಿ ನೆಗೆತ, ಸಾಮಾಜಿಕವಾಗಿ ಏರುವಿಕೆಗಳು ನಡೆದುವು. ಅಷ್ಟು ಉತ್ತಮ ಅಭಿರುಚಿಯದಲ್ಲದ ಒಂದು ತಮಾಷೆ ಈ ಪ್ರವೃತ್ತಿಯನ್ನು ಚಿತ್ರಿಸುತ್ತದೆ: "ಕಳೆದ ವರ್ಷ ನಾನೊಬ್ಬ ಜುಲಹಾ (ನೆಯ್ಗೆಯವನು) ಆಗಿದ್ದೆ; ಈ ವರ್ಷ ಶೇಖ್ ಆದೆ; ಮುಂದಿನ ವರ್ಷ ಫಸಲು ಉತ್ತಮವಾಗಿದ್ದರೆ ಸಯ್ಯದ್ ಆಗುತ್ತೇನೆ." ರಾಜಪೂತ್, ಜಾಟ್ ಮತ್ತು ಅಹಿರ್ ಮೊದಲಾದ ಮೇಲುಜಾತಿಗಳು ತಮ್ಮ ವಿಶಿಷ್ಟತೆಯನ್ನು ಉಳಿಸಿಕೊಂಡುವು. ಜುಲಹಾ, ತೇಲಿ, ಭಟ್, ಕಲಾಲ್ ಮತ್ತು ಭಿಷ್ಟಿ ಮೊದಲಾದ ಹಲವು ಜಾತಿಗಳನ್ನು ಹಿಂದೂ ಜಾತಿಗಳೊಂದಿಗೆ ಹೋಲಿಸಬಹುದು. ವಿಶಿಷ್ಟ ಕಸುಬನ್ನು ಹೊಂದಿ ಸ್ತರೀಕೃತ ಸ್ಥಾನಮಾನಗಳುಳ್ಳ ಜಾತಿಗಳು ಇವು. ಹೀಗೆ ಜಾತಿ ಭೇದವನ್ನು ಉಳಿಸಿಕೊಂಡಿರುವುದು ಮುಸ್ಲಿಂ ದೇವತಾ ಶಾಸ್ತ್ರಜ್ಞರಿಗೆ ಹಾಗೂ ಸಮಾಜ ಸುಧಾರಕರಿಗೆ ದೊಡ್ಡ ತಲೆನೋವಾಗಿದೆ. ಆದರೆ ಇತ್ತೀಚೆಗೆ ಫಂಡಮೆಂಟಲಿಸಂ (ಕ್ರೈಸ್ತ ವೇದ ಪ್ರಾಮಾಣ್ಯವಾದ) ಅಲೆಯು ಬೀಸಿದ್ದರೂ ಆ ಪದ್ಧತಿಯನ್ನು ಅಳಿಸಿಹಾಕಲು ಸಾಧ್ಯವಾಗಿಲ್ಲ.

ಜೈನಧರ್ಮ, ಬೌದ್ಧಧರ್ಮ ಮತ್ತು ಸಿಖ್‌ಧರ್ಮ – ಈ ಭಾರತ ಮೂಲವಾದ ಧರ್ಮಗಳಲ್ಲಿ ಜಾತಿಪದ್ಧತಿಯ ಮುಂದುವರಿಕೆಗೆ ಸಾಕ್ಷಿಗಳಿವೆ. ನವಬೌದ್ಧರು ಹಿಂದಿನ ಜಾತಿ ಸ್ಥಾನಮಾನಗಳಿಂದ ತಮ್ಮನ್ನು ಕಳಚಿಕೊಳ್ಳಲು ಸಾಧ್ಯವಾಗಿಲ್ಲ. ಸಿಖ್‌ಧರ್ಮದ ಜಾತ್ಯಾತೀತ ನಿಲುವು ಜಾತಿಯ ಅಸ್ತಿತ್ವದಿಂದ, ಹಾಗೂ ಅಸ್ಪಶ್ಯತೆಯ ಆಚರಣೆಯಿಂದ ಮೊಂಡಾಗಿದೆ.

ವರ್ಣ ಮತ್ತು ಜಾತಿಯ ಹಿಡಿತ ಎಷ್ಟು ತೀವ್ರವಾಗಿದೆಯೆಂದರೆ, ಅವು ಹಿಂದೂ ಧರ್ಮವನ್ನೂ ಮೀರಿ ಭಾರತೀಯ ಸಮಾಜದ ಎಲ್ಲ ವರ್ಗಗಳಲ್ಲೂ ಪ್ರವರ್ತಿಸುತ್ತಿರುವುದನ್ನು ನೋಡಬಹುದಾಗಿದೆ. ಸಮಾಜ ಸುಧಾರಕರಿಗೆ ಈ ಪ್ರವೃತ್ತಿಯನ್ನು ಬದಲಾಯಿಸುವುದು, ಅವರಲ್ಲಿ ಕೆಲವರು ಅದಕ್ಕಾಗಿ ವಿಶೇಷವಾಗಿ ಶ್ರಮಿಸಿದ್ದರೂ, ಸಾಧ್ಯವಾಗಿಲ್ಲ.

ಸಮಕಾಲೀನ ಭಾರತೀಯ ಸಮಾಜವು ಸಂಪ್ರದಾಯ ಮತ್ತು ಆಧುನಿಕತೆಗಳ ಪರಸ್ಪರ ವಿರುದ್ಧ ಸೆಳೆತಗಳಿಗೆ ಒಳಗಾಗಿದೆ. ಆವುಗಳ ಸಂಘರ್ಷದಿಂದ ಕೆಲವು ವಿಚಿತ್ರ

ಫಲಿತಾಂಶಗಳು ಕಂಡುಬಂದಿವೆ. ಒಂದು ಕಡೆ ದೇಶವು ಪ್ರಜಾಪ್ರಭುತ್ವ, ಜಾತ್ಯತೀತತೆ, ಮತ್ತು ಸಾಮಾಜಿಕ ನ್ಯಾಯಗಳ ಆದರ್ಶಗಳನ್ನು ಒಪ್ಪಿಕೊಂಡು ಅದನ್ನು ಪ್ರಸರಿಸುತ್ತಿದೆ. ಇನ್ನೊಂದು ಕಡೆ ಆದಿಮ ಜಾತಿನಿಷ್ಠೆಗಳು ಹಾಗೆಯೇ ಮುಂದುವರಿದಿವೆ. ಶೋಷಕ ಲಕ್ಷಣಗಳನ್ನು ಗಂಭೀರವಾಗಿ ಯಾರೂ ಎದುರಿಸಿಲ್ಲ. ರಾಜಕೀಯ ಲಾಭಗಳಿಗೋಸ್ಕರವಾಗಿ ಸಂಪ್ರದಾಯದ ಸ್ಮರಣೆಯನ್ನು ಉಳಿಸಿಕೊಳ್ಳಲಾಗಿದೆ. ಧಾರ್ಮಿಕ ಪುನಶ್ಚೇತನ ಅನಂತರ ಶಾಸ್ತ್ರ ಪ್ರಾಮಾಣ್ಯವಾದ ಇವುಗಳನ್ನು ಗಂಭೀರವಾಗಿ ನಿರ್ವಹಿಸಿಲ್ಲ. ಭಾವನಾತ್ಮಕ ಮತ್ತು ಬೌದ್ಧಿಕ ಅರಿವಿನ ಹಂತದಲ್ಲಿ ವರ್ಣ ಮತ್ತು ಜಾತಿಯ ಚೌಕಟ್ಟಿಗೆ ಸೇರಿಕೊಂಡ ಅಸಮಾನತೆ ಮತ್ತು ಅಮಾನವೀಯತೆಗಳನ್ನು ತೋರೆದಿದ್ದರೂ ಅವನ್ನು ತೊಡೆದು ಹಾಕಲು ಅರ್ಹವಾದ ಪ್ರಯತ್ನವನ್ನೇನೂ ಮಾಡಿದಂತೆ ತೋರುವುದಿಲ್ಲ. ದೇಶದ ಜನತೆಯ ಸುಮಾರು ಅರ್ಧಭಾಗ ಮುಖ್ಯವಾಗಿ ಅನುಸೂಚಿತ ಜಾತಿ ಮತ್ತು ಜನವರ್ಗಗಳು ಮತ್ತು ಇತರ ಹಿಂದುಳಿದ ಸಮುದಾಯಗಳಿಂದ ಕೂಡಿದೆ. ಇವರು ಇಡೀ ವ್ಯವಸಾಯ ಭೂಮಿಯ ಶೇ. 10ನ್ನು ಮಾತ್ರ ಹಂಚಿಕೊಂಡಿದ್ದಾರೆ. ಬಡವರಿಗೆ – ಪರಂಪರೆಯಿಂದ ಜೀತದಾಳಾದವರು ಮತ್ತು ನೀಚ ವೃತ್ತಿಗಳನ್ನು ನಿರ್ವಹಿಸುವವರು – ತಮ್ಮ ದುರದೃಷ್ಟ ಪರಿಸ್ಥಿತಿಯಿಂದ ಬಿಡುಗಡೆ ಪಡೆಯಲು ಕೆಲವು ದಾರಿಗಳೇನೋ ಇವೆ. ಜೀತ ಪದ್ಧತಿಯ ರದ್ದತಿಯಿಂದ ಆಗಿರುವುದಾದರೂ ಏನು ? ಒಂದು ಬಗೆಯ ಜೀತದಿಂದ ಇನ್ನೊಂದು ಬಗೆಯ ಜೀತಕ್ಕೆ ವರ್ಗಾವಣೆಗೊಂಡಂತಾಗಿರುವುದು. ಭಾರತದಲ್ಲಿ ಇಂದಿಗೂ 41,00,000 ತೆರೆದ ಕಕ್ಕಸುಗಳಿವೆ. ಒಂದು ಜಾತಿಯವರು ಅವುಗಳಿಂದ ಮಲವನ್ನು ಮುಚ್ಚಿದ ಡಬ್ಬಗಳಲ್ಲೋ, ತೆರೆದ ಮಂಕರಿಗಳಲ್ಲೋ ತಮ್ಮ ತಲೆಯ ಮೇಲೆ ಹೊತ್ತು ಒಯ್ಯಬೇಕು. ವರ್ಣ ಮತ್ತು ಜಾತಿಯನ್ನು ರಾಜಕೀಯಗೊಳಿಸಿದ್ದರಿಂದ ಕೆಳಜಾತಿಗಳ ಮೇಲೆ ವಿವಿಧ ರೀತಿಯ ಅನ್ಯಾಯಗಳನ್ನು ಹೇರಲು, ಅವರನ್ನು ಶೋಷಿಸಲು ಅವಕಾಶವುಂಟಾಗಿದೆ. ಅವರು ತಮ್ಮ ಸ್ಥಿತಿಯನ್ನು ಉತ್ತಮಪಡಿಸಿಕೊಳ್ಳುವ ಸಲುವಾಗಿ ತಮ್ಮ ಮತಕ್ಷೇತ್ರವನ್ನು ಮುಕ್ತವಾಗಿ ಬಳಸಲು ಅವರಿಗೆ ಅವಕಾಶ ಕೊಡುತ್ತಿಲ್ಲ. ಕೆಲವು ಕ್ಷೇತ್ರಗಳಲ್ಲೇನೋ ಜಾತಿಯ ಹಿಡಿತ ದುರ್ಬಲವಾಗಿರುವುದು ಹೌದು. ಆದರೆ ಇತರ ಕ್ಷೇತ್ರಗಳಲ್ಲಿ ಅದು ಇನ್ನೂ ಗರಿಗಟ್ಟಿಕೊಂಡಿದೆ, ಬಲಗೊಂಡಿದೆ. "ತುಳಿಯಲ್ಪಟ್ಟವರಿಗಾಗಿ", ದುರ್ಬಲರಿಗಾಗಿ, ಅಸಹಾಯಕರಿಗಾಗಿ, ಭಾರತದ ಸಮಾಜ, ಅರ್ಥವ್ಯವಸ್ಥೆ ಮತ್ತು ರಾಜ್ಯ ವ್ಯವಸ್ಥೆಗಳು ಕೇವಲ ತುಟಿಮಾತ್ರದ ಸಹಾನುಭೂತಿ ತೋರಿಸಿವೆ. ಅವರ ಸಮಸ್ಯೆಗಳಿಗೆ ನಿಜವಾದ ಪರಿಹಾರವನ್ನು ತೋರಿಸಲು ಶಕ್ತವಾಗಲಿಲ್ಲ. ಇದರಿಂದ ಸ್ಪಷ್ಟವಾಗಿ ಕಾಣುತ್ತಿರುವ ಫಲಿತಾಂಶವೆಂದರೆ ವಿರೋಧ ಮತ್ತು ಪ್ರತಿಭಟನೆ. ಎರಡೂ ಸುಲಭವಾಗಿ ಅರ್ಥವಾಗುತ್ತದೆ. ಸಂಪ್ರದಾಯಕ್ಕೆ ಆದರದ್ದೇ ಕೆಲವು ಉಪಯೋಗಗಳಿವೆ. ಆದರೆ ಸಂಪ್ರದಾಯಕ್ಕೆ ಮನ್ನಣೆ ಕೊಡಬೇಕೆನ್ನುವುದು ಶೋಷಣೆ, ಅಸಮಾನತೆ, ಅನ್ಯಾಯಗಳನ್ನು ಮುಂದುವರಿಸಿಕೊಂಡು ಹೋಗಲು ಒಂದು ರಕ್ಷಾಕವಚವಾಗಬಾರದು. ವರ್ಣ ಮತ್ತು ಜಾತಿಯ ಆಚರಣೆಯಲ್ಲಿ ಸ್ವಲ್ಪಮಟ್ಟಿಗೆ

ಬದಲಾವಣೆಯೇನೋ ಆಗಿದೆ. ಆದರೆ ಅದು ಅತಿ ನಿಧಾನ ಮತ್ತು ಅತ್ಯಲ್ಪ. ಕಾನೂನು ಒಂದು ಕಡೆ ಅಸ್ಪೃಶ್ಯತೆಯ ಹಾಗೂ ಜೀತ ಪದ್ಧತಿಯ ನಿಷೇಧ, ಶಿಕ್ಷಣ, ಉದ್ಯೋಗ ಮೊದಲಾದ ಕ್ಷೇತ್ರಗಳಲ್ಲಿ ಪರಿಹಾರ ರೂಪದ ಪಕ್ಷಪಾತ, ವಿವಾಹದಲ್ಲಿ ಆಯ್ಕೆ ಸ್ವಾತಂತ್ರ್ಯ ಇತ್ಯಾದಿಗಳನ್ನು ಕೊಟ್ಟಿದೆ; ಆದರೆ ಇನ್ನೊಂದು ಕೈಯಿಂದ ಅವುಗಳನ್ನು ಕಿತ್ತುಕೊಂಡಿದೆ. ಇದಕ್ಕೆ ಅಜಾಗರೂಕತೆ ಮತ್ತು ಅಸಮರ್ಪಕ ರೀತಿಯಲ್ಲಿ ಜಾರಿಗೊಳಿಸುವಿಕೆಗಳೇ ಕಾರಣ.

# ಕುಟುಂಬ ಮತ್ತು ಬಂಧುತ್ವ

ಈ ಅಧ್ಯಾಯವು ಹಲವು ತೆರನಾದ ಕುಟುಂಬಗಳು ಮತ್ತು ಅವುಗಳ ಕಾರ್ಯಗಳನ್ನೂ ಹಾಗೆಯೇ ಬಂಧುತ್ವದ ವ್ಯಾಪಕ ಗಂಟುಗಳನ್ನೂ ಚರ್ಚಿಸುತ್ತದೆ. ಇವುಗಳ ನಡುವೆ ಮದುವೆಯನ್ನು ಕುರಿತ ಪ್ರಸಕ್ತಿಯೂ ಬರುತ್ತದೆ. ಕುಟುಂಬದ ರಚನೆಯ ಮೇಲೂ ಸಂಬಂಧಗಳ ವ್ಯವಸ್ಥೆಯ ಮೇಲೂ ಹಲವು ಮುಖ್ಯವಾದ ಪರಿಣಾಮಗಳನ್ನು ಅದು ಹೊಂದಿದೆ.

## ಕುಟುಂಬ

ಕುಟುಂಬ ಎನ್ನುವುದು ಸಾಮಾನ್ಯವಾಗಿ ಬಳಕೆಯಲ್ಲಿರುವ ಪದ. ಸಾಮಾನ್ಯಾರ್ಥದಲ್ಲಿ ಅದನ್ನು ಸರಿಯಾಗಿ ತಿಳಿದುಕೊಳ್ಳಲಾಗಿದೆ. ಅದು ಸಾರ್ವತ್ರಿಕವಾದ, ಖಾಯಂ ಆದ, ವ್ಯಾಪಕವಾದ ವ್ಯವಸ್ಥೆ, ಸಾಮಾಜಿಕವಾಗಿ ಅಂಗೀಕೃತವಾದ ಲೈಂಗಿಕ ಸಂಪರ್ಕ, ಸಂತಾನಕ್ರಿಯೆ, ಸವಮಾನ ವಸತಿ, ಕೌಟುಂಬಿಕ ಕಾರ್ಯಗಳು, ಆರ್ಥಿಕ ಸಹಕಾರ ಈ ಲಕ್ಷಣಗಳು ಅದಕ್ಕಿವೆ. ಆದರೆ ಕಷ್ಟ ಶುರುವಾಗುವುದು ಇಲ್ಲಿಯೇ. ಪ್ರಾಚೀನ ಭಾರತದಲ್ಲಿ *ನಿಯೋಗ* ಪದ್ಧತಿಯಿತ್ತು, ಸಂತಾನಾಪೇಕ್ಷೆಯಾಗಿ ಗಂಡನಲ್ಲದ ಬೇರೊಬ್ಬ ಪುರುಷನೊಂದಿಗೆ ಒಬ್ಬ ಹೆಣ್ಣು ಲೈಂಗಿಕ ಸಂಪರ್ಕ ಹೊಂದಲು ಇದು ಅವಕಾಶ ಕೊಟ್ಟಿತ್ತು. ಈ ಕ್ರಿಯೆ ನಡೆದ ಮೇಲೆ ಆ ಪುರುಷನಿಗೆ ಆ ಮಹಿಳೆಯೊಂದಿಗಾಗಲಿ, ಆ ಸಂತಾನದೊಂದಿಗಾಗಲಿ ಯಾವುದೇ ಸಂಬಂಧ ಉಳಿಯುತ್ತಿರಲಿಲ್ಲ. ಆ ಮಗುವನ್ನು ಆ ಹೆಂಗಸಿನ ಗಂಡನ ವಂಶಕ್ಕೆ ಸೇರಿಸಿ ವ್ಯವಹರಿಸಲಾಗುತ್ತಿತ್ತು. ಅವರೊಟ್ಟಿಗೇ ಬೆಳೆದು ಅದೇ ಕುಟುಂಬದ ಕ್ರಿಯೆಗಳಲ್ಲಿ ಪಾಲುಗೊಳ್ಳುತ್ತಿದ್ದಿತು. ಹಿಂದೆ, ನಾಯರರಲ್ಲಿ ಹಲವು ಪುರುಷರು ಒಬ್ಬ ಹೆಂಗಸಿನೊಂದಿಗೆ *ತಾಲಿ* ಕ್ರಿಯೆಯ ಮೂಲಕ ಲೈಂಗಿಕ ಸಂಪರ್ಕವನ್ನೂ ಅಲ್ಲಿಂದ ಮುಂದಿನ *ಸಂಬಂಧ* ಬಾಂಧವ್ಯವನ್ನೂ ಪಡೆಯಬಹುದಾಗಿತ್ತು. ಒಂದು ಸರ ಮತ್ತು ಪದಕದಿಂದ ಕೂಡಿದ *ತಾಲಿ*ಯನ್ನು ಕೊರಳಿಗೆ ಆಕೆ ಧರಿಸುತ್ತಿದ್ದಳು. ಒಬ್ಬ ಗಂಡಸು ಸೂಕ್ತ ಆಚರಣೆಗಳಿಂದ "ಉಪ ಜಾತಿ"ಯ ಪರವಾಗಿ ಸಾಮೂಹಿಕ ಬಾಂಧವ್ಯರೂಪದಲ್ಲಿ ಅದನ್ನು ಅವಳ ಕೊರಳಿಗೆ ಕಟ್ಟುತ್ತಿದ್ದನು. ಇದರಿಂದ ಅವನಿಗೆ ಆ ಮಹಿಳೆಯ ಮೇಲೆ ಲೈಂಗಿಕ ಸಂಪರ್ಕದ ಹಕ್ಕು ಬರುತ್ತಿದ್ದಿತು. ಈ ಹಕ್ಕನ್ನು

ಯಾವುದೇ 'ಮೇಲುಜಾತಿ'ಯ ಸದಸ್ಯ, ಅವಳಿಂದ ಆಕರ್ಷಿತನಾಗಿ ಅವಳಿಗೆ ಒಪ್ಪಿಗೆಯಾಗಿದ್ದರೆ ಪಡೆಯಬಹುದಾಗಿದ್ದಿತು. ಈ ರೀತಿ *ಸಂಬಂಧ* ಬಾಂಧವ್ಯ ಹೊಂದಿದ್ದ ಪುರುಷರಿಗೆ ಆಕೆಯ ಗಂಡ ಅಥವಾ ತಂದೆಯ ಪೂರ್ಣ ಹಕ್ಕುಗಳು ಬರುತ್ತಿರಲಿಲ್ಲ. ಅವಳು ತನಗೆ ಇಷ್ಟ ಬಂದ ಕ್ಷಣದಲ್ಲಿ ಅವಕಾಶವನ್ನು ಹಿಂತೆಗೆದುಕೊಳ್ಳಬಹುದಾಗಿದ್ದಿತು. ಅವಳ ಸಂತಾನದ ಮೇಲೆ ಅವಳ ತಾರವಾಡ (ತಾಯಿಯ ಕಡೆಯ ಕುಟುಂಬ)ಕ್ಕೆ ಹಕ್ಕು ಬರುತ್ತಿದ್ದಿತು. ರಜೋಚಕ್ರ ಪ್ರಾರಂಭವಾಗುವುದಕ್ಕಿಂತ ಮೊದಲೇ ಮಾಡುವ ಈ ತಾಲಿ ಆಚರಣೆಯು ಒಂದು ರೀತಿಯಲ್ಲಿ ಸೂಕ್ತ "ಜಾತಿಗಳ" ಪುರುಷರೊಂದಿಗೆ ಸಾಮೂಹಿಕವಾಗಿ ನಡೆಸುವ ವಿವಾಹದ ಸಂಕೇತವಾಗುತ್ತಿತ್ತು. ಶಿಶುಜನನದ ಸಂದರ್ಭದಲ್ಲಿ ಯೋಗ್ಯ ಸ್ಥಾನಮಾನದ ಯಾರಾದರೊಬ್ಬರು ಹೆರಿಗೆಯ ವೆಚ್ಚಗಳನ್ನು ವಹಿಸಿಕೊಳ್ಳುತ್ತಿದ್ದರು. ಹೀಗೆ "ಆಚರಣೆಯ ತಂದೆ" "ಕ್ರಮಬದ್ಧ ಪಿತೃ" ಅವಕಾಶವು ಮಗುವಿಗೆ ಒಂದು ನ್ಯಾಯಸಮ್ಮತಿಯನ್ನೂ, ಅಧಿಕಾರಿಕತೆಯನ್ನೂ ಕೊಡುತ್ತಿತ್ತು, ತಾಯಿಗೆ ಅಪಮಾನ, 'ದೇಶಭ್ರಷ್ಟತ್ವಗಳಾಗದಂತೆ ರಕ್ಷಿಸುತ್ತಿದ್ದಿತು. ಮಗುವಿಗೆ ಕಾನೂನು ಬದ್ಧತೆಯನ್ನು ಕೊಡುತ್ತದೆ ಎಂಬರ್ಥದಲ್ಲಿ ಅಂತಹ ಸಂಪರ್ಕವನ್ನು ವಿವಾಹ ಎಂದು ಕರೆಯಬಹುದು. ಆದರೆ ಕುಟುಂಬದ ಇನ್ನೆರಡು ಲಕ್ಷಣಗಳು – ಸಮಾನ ವಸತಿ ಮತ್ತು ಆರ್ಥಿಕ ಸಹಕಾರ (ದೈನಂದಿನ ಮನೆವಾರ್ತೆ ಕೂಡಿದಂತೆ) ಅದರಲ್ಲಿ ಇರುತ್ತಿರಲಿಲ್ಲ. ಈ ಕೂಡಿಕೆಯು ಒಂದು ಕುಟುಂಬವಾಗುತ್ತಿರಲಿಲ್ಲ. ಲಕ್ಷದ್ವೀಪದಲ್ಲಿ ಮತ್ತು ಮಧ್ಯಕೇರಳದ ಕೆಲವು ಮಾತೃಪ್ರಧಾನ ವರ್ಗಗಳಲ್ಲಿ ಗಂಡನು ಕೇವಲ ಒಬ್ಬ ಇರುಳ ಸಂದರ್ಶಕ ಅಷ್ಟೆ. ವಿಧ್ಯುಕ್ತವಾದ ಆರ್ಥಿಕ ಪಾತ್ರವಾಗಲಿ ಅಧಿಕಾರವಾಗಲಿ ಇಲ್ಲದೆ ಹೆಂಗಸಿನೊಂದಿಗೆ ಕೇವಲ ಲೈಂಗಿಕ ಸಂಪರ್ಕವಷ್ಟನ್ನು ಮಾತ್ರ ಪಡೆಯುವವನು. ನಾಯರ್ – ನಂಬೂದಿರಿ *ಸಂಬಂಧ*ದಲ್ಲಿ ನಂಬೂದಿರಿಯು ತನ್ನ ಹೆಂಡತಿ ಅಥವಾ ಮಕ್ಕಳ ಜೊತೆಯಲ್ಲಿ ಕುಳಿತು ಊಟ ಮಾಡುವಂತಿಲ್ಲ. ಇನ್ನು ಮನೆವಾರ್ತೆಯಲ್ಲಾಗಲಿ ಆರ್ಥಿಕ ವ್ಯವಹಾರದಲ್ಲಾಗಲಿ ಭಾಗವಹಿಸುವ ವಿಚಾರ ಬಹುದೂರವೇ ಉಳಿಯಿತು. ಈ ಅಂಶಗಳು ಮಾನವಶಾಸ್ತ್ರಜ್ಞರನ್ನು ಬಹುವಾಗಿ ದಿಗ್ಭ್ರಮೆಗೊಳಿಸಿವೆ. ವಿವಾಹ (ಮತ್ತು ಅದರ ಪರಿಣಾಮವಾಗಿ ಕುಟುಂಬ)ದ ಕನಿಷ್ಠ ವಿವರಣೆಯನ್ನು ಕುರಿತು ವ್ಯಾಪಕವಾದ ಚರ್ಚೆ ನಡೆದು ನಿರ್ಣಯವಾಗದೆಯೇ ಉಳಿದಿದೆ. ಆದರೆ ಇದರಿಂದ ನಾವು ವಿಚಲಿತರಾಗಬೇಕಾಗಿಲ್ಲ. ಎಲ್ಲಿ ಒಂದು ಕೂಡಿಕೆಯು ಸಾಮಾಜಿಕ ಸಮ್ಮತಿ ಪಡೆದಿದೆಯೋ, ಸಂತಾನಕ್ಕೆ ವಿಧಿಬದ್ಧತೆಯನ್ನು ಕೊಡುತ್ತದೆಯೋ ಅದನ್ನು ವಿವಾಹವೆಂದು ಕರೆಯಬಹುದು. ವಿವಾಹ ಮತ್ತು ಕುಟುಂಬ ಜೊತೆ ಜೊತೆಯಾಗೇ ಇರಬೇಕೆಂದಿಲ್ಲ. ಪತಿ–ಪತ್ನಿ ತಮ್ಮ ತಮ್ಮ ಮಾತೃವಂಶದ ಅನುಕ್ರಮದಲ್ಲೇ ಉಳಿದುಕೊಂಡಿರಬಹುದು.

ಭಾರತೀಯ ಸಮಾಜದಲ್ಲಿ ಕುಟುಂಬದ ರಚನೆ ಅಪಾರ ವೈವಿಧ್ಯ ಹೊಂದಿದೆ. ಈ ರೂಪಗಳನ್ನು ಅನೇಕ ಬಗೆಯ ಆಧಾರಗಳಿಂದ ನಿರ್ದಿಷ್ಟಪಡಿಸಬಹುದು. ಇವು ಗೋತ್ರ, ವಸತಿ, ಸದಸ್ಯತ್ವ, ಸಹಜೀವಿಗಳ ಸಂಖ್ಯೆ ಇತ್ಯಾದಿ.

ಭಾರತದ ಬಹುತೇಕ ಸಮುದಾಯಗಳಲ್ಲಿ ತಂದೆಯ ಕಡೆಯಿಂದಲೇ ಗೋತ್ರವನ್ನು ಗುರುತಿಸಲಾಗುವುದು. ಇದು ಪಿತೃಗೋತ್ರ ಪದ್ಧತಿ. ಕೆಲವು ಮಾತೃಗೋತ್ರ ಪ್ರಾಧಾನ್ಯವಿರುವ ಸಮಾಜಗಳ ಬಗೆಗೆ ಈಗಾಗಲೇ ಉಲ್ಲೇಖಿಸಿದ್ದಾಗಿದೆ. ಈಶಾನ್ಯ ಭಾಗದ ಗಾರೋ, ಖಾಸಿ ಮತ್ತು ನಾರ್ ಪಂಗಡಗಳು, ನಾಯರ್, ಮಾಪಿಳ್ಳ, ಲಕ್ಷದ್ವೀಪ ನಿವಾಸಿಗಳು, ದಕ್ಷಿಣಭಾರತದ ಹಲವು ಆದಿವಾಸಿ ಬುಡಕಟ್ಟುಗಳು ಮತ್ತು ಇತರ ವರ್ಗಗಳು – ತಾಯಿಯ ಕಡೆಯಿಂದ ಗೋತ್ರವನ್ನು ಗಣನೆಗೆ ತೆಗೆದುಕೊಳ್ಳುತ್ತವೆ. ಈ ಎರಡು ಮುಖ್ಯ ಪದ್ಧತಿಗಳ ಜೊತೆಗೆ ಜ್ಞಾತಿ ಸಂಬಂಧ ಪ್ರಾಧಾನ್ಯವಿರುವ ಆಂಗ್ಲೋ–ಇಂಡಿಯನ್ನರು ಮತ್ತು ಕೆಲವು ಬುಡಕಟ್ಟುಗಳ ನಿದರ್ಶನಗಳೂ ಇವೆ. ಇವು ತಂದೆ, ತಾಯಿ ಇಬ್ಬರಿಗೂ ಪ್ರಾಧಾನ್ಯ ಕೊಡುತ್ತವೆ. ತಂದೆಯಿಂದ ಹೆಸರನ್ನು ತೆಗೆದುಕೊಂಡಿರಬಹುದು. ಗೋತ್ರವನ್ನು ನಿಷ್ಕರ್ಷಿಸುವಾಗ ತಾಯಿಯ ಪೀಳಿಗೆಯನ್ನೂ ಲೆಕ್ಕಕ್ಕೆ ಹಿಡಿಯುತ್ತಾರೆ. 'ಪಿತೃಗೋತ್ರ ಪದ್ಧತಿ', 'ಮಾತೃಗೋತ್ರ ಪದ್ಧತಿ' ಎಂಬ ಪದಗಳ ಜೊತೆಗೆ 'ಪಿತೃ ಯಾಜಮಾನ್ಯ' ಮತ್ತು 'ಮಾತೃ ಯಾಜಮಾನ್ಯ' ಎಂಬ ಪದಗಳನ್ನೂ ಬಳಸುತ್ತಾರೆ. ಈ ಪದಗಳು ಸಡಿಲಾಗಿವೆ, ದಾರಿತಪ್ಪಿಸುವಂತಿವೆ. ಪಿತೃಯಾಜಮಾನ್ಯ ಎಂಬುದು ಪುರುಷ ಪ್ರಧಾನತೆಯನ್ನು ಸೂಚಿಸುತ್ತದೆ. ಭಾರತೀಯ ಸಮಾಜದ ಬಹುಭಾಗದಲ್ಲಿ ಆಚರಣೆಯಲ್ಲಿರುವುದು ಈ ಪದ್ಧತಿಯೇ. ಆದರೆ ಮಾತೃ ಯಾಜಮಾನ್ಯ ಪದ್ಧತಿಯು ಆಚರಣೆಯಲ್ಲಿಲ್ಲ. ಲಿಂಗ ಸಂಬಂಧಗಳು ಎಂಬ ಆರನೆಯ ಅಧ್ಯಾಯದಲ್ಲಿ ನಾವು ನೋಡುವಂತೆ ಮಾತೃಗೋತ್ರ ಪದ್ಧತಿಯಿರುವ ವರ್ಗಗಳಲ್ಲಿ ಮಹಿಳೆಗೆ ಪ್ರಾಮುಖ್ಯವಿರುತ್ತದಾದರೂ ಹಲವು ಕ್ಷೇತ್ರಗಳಲ್ಲಿ ಪರಿಣಾಮಕಾರಿಯಾಗಿ ಅವಳು ನಿರ್ಣಯ ಕೈಗೊಳ್ಳಲಾರಳು. ಮುಖ್ಯವಾದ ವ್ಯವಹಾರ ಜವಾಬ್ದಾರಿ ಗಂಡಸಿನ ಮೇಲೆಯೇ ಬಿದ್ದಿರುತ್ತದೆ.

ವಿವಾಹಾನಂತರದ ವಸತಿಯ ವಿಷಯದಲ್ಲೂ ಹೀಗೆ ಬೇಕಾದಷ್ಟು ವ್ಯತ್ಯಾಸಗಳಿವೆ. ಹೆಂಡತಿಯು ತನ್ನ ಗಂಡನ ತಂದೆಯ ಮನೆಗೆ (ತಂದೆ ಇಲ್ಲದಿದ್ದರೆ ತಾತನ ಅಥವಾ ಚಿಕ್ಕಪ್ಪನ ಮನೆಗೆ) ವಾಸಕ್ಕೆ ಹೋದರೆ ಆ ಕುಟುಂಬವು ಪಿತೃನೆಲೆ ಸ್ವರೂಪದ್ದು. ಅದಕ್ಕೆ ವ್ಯತಿರಿಕ್ತವಾಗಿ ಗಂಡನು ಹೆಂಡತಿಯ ತಾಯಿಯ ಮನೆಗೆ ವಾಸವಾಗಿರಲು ಹೋದರೆ ಅದು ಮಾತೃನೆಲೆ ಸ್ವರೂಪದ್ದು. ಭಾರತದಲ್ಲಿ ಪಿತೃನೆಲೆ ಕುಟುಂಬಗಳೇ ಅತ್ಯಂತ ಸಾಮಾನ್ಯವಾದವು. ಖಾಸಿ, ನಾಯರ್ ಮೊದಲಾದ ಕೆಲವು ಪಂಗಡಗಳಲ್ಲಿ ಮಾತೃನೆಲೆ ಕುಟುಂಬಗಳು ಕಂಡುಬರುತ್ತವೆ. ಹಲವು ಬುಡಕಟ್ಟುಗಳಲ್ಲಿ ನೂತನ ನೆಲೆ ವಸತಿಯನ್ನು (ನೂತನ ವಿವಾಹಿತ ದಂಪತಿಗಳಿಗಾಗಿ ಹೊಸಮನೆ) ಕಟ್ಟಿಕೊಡಲಾಗುತ್ತದೆ. ಅಲ್ಲೂ ಸ್ವಲ್ಪ ಕಾಲ ಪಿತೃನೆಲೆ ಅಥವಾ ಮಾತೃನೆಲೆ ಕುಟುಂಬಗಳಲ್ಲಿ ಇದ್ದ ನಂತರವೇ ಹೊಸನೆಲೆ ಕಟ್ಟಿಕೊಳ್ಳುವುದು ರೂಢಿ. ಲಕ್ಷದ್ವೀಪ ಮತ್ತು ಮಧ್ಯ ಕೇರಳಗಳಲ್ಲಿ ದ್ವಿ–ವಸತಿ ಪದ್ಧತಿ ಚಾಲ್ತಿಯಲ್ಲಿದೆ. ಗಂಡನು ತನ್ನ ತಾಯಿಯ ತಾರವಾಡದಲ್ಲೂ ಹೆಂಡತಿಯು ತನ್ನ ತಾಯಿಯ ತಾರವಾಡದಲ್ಲೂ ವಾಸಿಸುತ್ತಾರೆ.

ಭಾರತವನ್ನು ಅವಿಭಕ್ತ ಕುಟುಂಬಗಳ ದೇಶವೆಂದು ವರ್ಣಿಸಲಾಗುತ್ತದೆ. ಸಾಮಾಜಿಕ ಮಾನವಶಾಸ್ತ್ರೀಯ ಮತ್ತು ಸಮಾಜ ಶಾಸ್ತ್ರೀಯ ಸಾಹಿತ್ಯದಲ್ಲಿ ಈ ಪದವನ್ನು ಅಷ್ಟಾಗಿ ಬಳಸುವದಿಲ್ಲ. ಮೂಲಕುಟುಂಬ ಮತ್ತು ವಿಸ್ತೃತ ಕುಟುಂಬಗಳ ನಡುವೆ ಭೇದವನ್ನು ಗುರುತಿಸಲಾಗುತ್ತದೆ. ಎರಡನೆಯದು, ಸಾಮಾನ್ಯವಾಗಿ ಅವಿಭಕ್ತ ಕುಟುಂಬವೆಂದು ಕರೆಯುವ ಘಟಕಗಳನ್ನು ಸೂಚಿಸುತ್ತದೆ. ಮೂಲಕುಟುಂಬವೆಂದರೆ ವಿವಾಹಿತ ದಂಪತಿ ಮತ್ತು ಅವರ ಮಕ್ಕಳು. ವಿಸ್ತೃತ ಕುಟುಂಬವೆನ್ನುವುದು ಅದೇ ಗೋತ್ರದ ಎರಡು, ಮೂರು ಅಥವಾ ಇನ್ನೂ ಹೆಚ್ಚು ತಲೆಮಾರಿನ ವ್ಯಕ್ತಿಗಳು ಅವರ ಗಂಡಂದಿರು ಅಥವಾ ಹೆಂಡಿರು, ಮಕ್ಕಳು ಎಲ್ಲರೂ ಸೇರುವ ದೊಡ್ಡ ತಂಡವಾಗಿರುತ್ತದೆ. ಮಾತೃಗೋತ್ರ ಪ್ರಧಾನವಾದ ವಿಸ್ತತ ಕುಟುಂಬಗಳಲ್ಲಿ ವಿವಾಹಿತ ಮಹಿಳೆಯರ ಗಂಡಂದಿರು ಸೇರುವುದಿಲ್ಲ. ಒಂದು ನಿರ್ದಿಷ್ಟ ಕಾಲದಲ್ಲಿ ಮೂಲಕುಟುಂಬಗಳ ಪರಿಮಾಣ ಅಧಿಕವಾಗಿರುತ್ತದೆ. ಆದರೆ ಬಹುತೇಕ ಮೂಲ ಕುಟುಂಬಗಳು ಬೆಳೆದು ವಿಸ್ತರಿತ ಕುಟುಂಬಗಳಾಗುತ್ತವೆ. ಕೆಲ ಕಾಲಾನಂತರ ಅವು ಅಸಂಪೂರ್ಣ ವಿಸ್ತತ ಕುಟುಂಬಗಳಾಗೋ ಹಲವು ಮೂಲಕುಟುಂಬಗಳಾಗೋ ಒಡೆಯುತ್ತವೆ. ಎರಡು ಅಥವಾ ಮೂರು ತಲೆಮಾರಿನ ಎಲ್ಲ ಸದಸ್ಯರೂ ಅಥವಾ ಅತಿಹೆಚ್ಚು ಸಂಖ್ಯೆಯ ಸದಸ್ಯರು ಒಟ್ಟಾಗಿ ವಾಸ ಮಾಡುವ ನಿದರ್ಶನ ತುಂಬ ವಿರಳ. ಒಂದೇ ಮನೆಯಲ್ಲಿ ವಾಸಿಸುವ ಸದಸ್ಯರ ಸಂಖ್ಯೆಗೆ ಮಿತಿ ಸ್ಪಷ್ಟವಾಗಿ ಕಂಡುಬರುತ್ತದೆ. ಗೃಹಕೃತ್ಯದಲ್ಲಿ ಭಿನ್ನಾಭಿಪ್ರಾಯ ಬರುವುದು ಬೇರೆ ಮನೆ ಹೂಡುವುದಕ್ಕೆ ದಾರಿ ಮಾಡಿಕೊಡುತ್ತದೆ. ಇವುಗಳನ್ನು ಸಂಸಾರಗಳು ಎನ್ನಬಹುದು. ವಿಸ್ತೃತ ಕುಟುಂಬವೂ ಒಂದೇ ಮನೆಯಲ್ಲಿ ವಾಸ ಮಾಡುತ್ತಿರಬಹುದು. ಕೆಲವು ಆರ್ಥಿಕ ವ್ಯವಹಾರಗಳನ್ನು ಒಟ್ಟಾಗಿಯೇ ನಿರ್ವಹಿಸುತ್ತಿರಬಹುದು. ಆದರೆ ಅಲ್ಲೇ ಹಲವು ಮೂಲಕುಟುಂಬಗಳು ಪ್ರತ್ಯೇಕ ಗೃಹಕೃತ್ಯವ್ಯವಸ್ಥೆ ಮಾಡಿಕೊಂಡಿರುವ ಸಾಧ್ಯತೆ ಹೆಚ್ಚು, ಕ್ರಮೇಣ ಬೇರೆ ಬೇರೆ ಒಲೆಗಳನ್ನು ಹೂಡಿಕೊಂಡು ಅಡಿಗೆ ಮಾಡಿಕೊಂಡು ಪ್ರತ್ಯೇಕವಾಗಿ ಊಟ ಮಾಡುವ ವ್ಯವಸ್ಥೆ ಮಾಡಿಕೊಳ್ಳುತ್ತಾರೆ. ಹಲವು ಮೂಲಕುಟುಂಬಗಳು ಬೇರೆ ಬೇರೆಯಾಗಿ ವಾಸಿಸುತ್ತಿದ್ದು ಕೆಲಸ ಮಾಡುತ್ತಿದ್ದ ಸಂದರ್ಭದಲ್ಲಿ ಒಂದು ಬಗೆಯ ಕೂಡುತನ, ಅವಿಭಕ್ತತೆ ವ್ಯಕ್ತವಾಗುತ್ತದೆ. ಆದರೆ ಪಿತ್ರಾರ್ಜಿತ ಆಸ್ತಿಯ ವಿಭಜನೆ ಆಗಿಲ್ಲದಾಗ ಕುಟುಂಬದ ಎಲ್ಲ ಸದಸ್ಯರೂ ಮದುವೆ, ಮರಣ, ಹಾಗೆಯೇ ಇತರ ಮುಖ್ಯ ಸಮಾರಂಭಗಳಲ್ಲಿ ಒಂದಾಗಿ ನೆರೆಯುತ್ತಾರೆ. ಕುಟುಂಬದಲ್ಲಿ ಏಕತೆ ತುಂಬ ಅಗತ್ಯವಾದ ಮೌಲ್ಯವೇ ಸರಿ. ಆದರೆ ಸಂಸಾರಗಳಲ್ಲೂ ರಾಜಕೀಯ ನುಸುಳುತ್ತದೆ. ಅಭೇದ್ಯವಾದ ಸಮಸ್ಯೆಗಳು ತಲೆದೋರುತ್ತವೆ.

ಸಹಜೀವಿಗಳ ಸಂಖ್ಯೆಯ ಆಧಾರದ ಮೇಲೆ ಕುಟುಂಬದ ಮಾದರಿಯನ್ನು ವರ್ಗೀಕರಿಸಬಹುದು. ಒಮ್ಮದುವೆ ಪದ್ಧತಿಯಲ್ಲಿ ವ್ಯಕ್ತಿಯು ಒಂದು ಸಾರಿಗೆ ಒಬ್ಬ ಪತಿಯನ್ನೊ, ಪತ್ನಿಯನ್ನೋ ಹೊಂದಬಹುದು. 1856ರಲ್ಲಿ ವಿಧವಾ ಪುನರ್ವಿವಾಹ ಶಾಸನ ಜಾರಿಗೆ ಬರುವುದಕ್ಕಿಂತ ಮೊದಲು ಹಲವು ಹಿಂದೂ ಮೇಲು ಜಾತಿಗಳಲ್ಲಿ

ವಿಧವೆಯರಿಗೆ ಮರುಮದುವೆ ಮಾಡಿಕೊಳ್ಳಲು ಅವಕಾಶ ಕೊಡುತ್ತಿರಲಿಲ್ಲ. ಅವರಿಗೆ ಅದು ನೇರವಾದ ಒಮ್ಮದುವೆ; ಏಕಪತಿವ್ರತ. ಪಾಶ್ಚಾತ್ಯ ದೇಶಗಳಲ್ಲೂ, ಕಾನೂನು ಪ್ರಕಾರ ಈಗ ಭಾರತವೂ ಕೂಡಿದಂತೆ ಹಲವು ಸಮಾಜಗಳಲ್ಲೂ ಇರುವ ಕ್ರಮಶಃ ಒಮ್ಮದುವೆಯಲ್ಲ. ಬಹುಮದುವೆಯನ್ನು ಎರಡು ಬಗೆಯಾಗಿ ವಿಭಜಿಸಬಹುದು. ಒಬ್ಬ ಗಂಡಸು ಇಬ್ಬರು ಅಥವಾ ಹೆಚ್ಚು ಹೆಂಡಿರನ್ನು ಹೊಂದಿರುವ ಬಹುಪತ್ನೀತ್ವ, ಒಬ್ಬ ಹೆಂಗಸು ಇಬ್ಬರು ಅಥವಾ ಹೆಚ್ಚು ಗಂಡಂದಿರನ್ನು ಹೊಂದಿರುವ ಬಹುಪತಿತ್ವ ಎಂಬುದಾಗಿ.

ಬಹುಪತ್ನೀತ್ವವು ಭಾರತದ ಆದಿವಾಸಿಗಳಲ್ಲಿ, ಹಿಂದೂಗಳಲ್ಲಿ ಮತ್ತು ಮುಸ್ಲಿಮರಲ್ಲಿ ವ್ಯಾಪಕವಾಗಿ ಚಾಲ್ತಿಯಲ್ಲಿದೆ. 1955ರ ಹಿಂದೂ ವಿವಾಹಶಾಸನವು ಹಿಂದೂಗಳಲ್ಲಿ ಏಕಪತ್ನೀತ್ವವನ್ನು ಕಡ್ಡಾಯವಮಾಡಿತು. ಆದರೂ ಜನಗಣತಿಯ ಅಂಕಿಸಂಖ್ಯೆಗಳು ತೋರಿಸುವಂತೆ, ಮಿತಪ್ರಮಾಣದಲ್ಲಾದರೂ ಬಹುಪತ್ನೀತ್ವವು ಇನ್ನೂ ಆಚರಣೆಯಲ್ಲಿದೆ. ಅನುಸೂಚಿತ ಜನಜಾತಿಗಳಿಗೆ ತಮ್ಮ ಸಾಂಪ್ರದಾಯಿಕ ಕಟ್ಟುಕಟ್ಟಳೆ ನಡೆಸಿಕೊಳ್ಳಲು ಅನುಮತಿ ಕೊಡಲಾಗಿದೆ. ಬಹಳ ಸೂಕ್ಷ್ಮವಾದ ವಿಷಯವಾದ್ದರಿಂದ ಮುಸ್ಲಿಂ ವ್ಯಕ್ತಿ ಶಾಸನವನ್ನು ಭಾರತದಲ್ಲಿ ಮುಟ್ಟಿಯೇ ಇಲ್ಲ. ಇಲ್ಲಿ ಅವರಿಗೆ ಬಹುಪತ್ನೀತ್ವಕ್ಕೆ ಅವಕಾಶವಿದೆ. ಬೇರೆ ಹಲವು ಮುಸ್ಲಿಂ ದೇಶಗಳು (ಪಾಕಿಸ್ತಾನವೂ ಸೇರಿದಂತೆ) ಬಹುಪತ್ನೀತ್ವವನ್ನು ದುರುಪಯೋಗಪಡಿಸಿಕೊಳ್ಳುವುದನ್ನು ತಡೆಗಟ್ಟುವ ಸಲುವಾಗಿ ಶಾಸನಗಳನ್ನು ಜಾರಿಗೆ ತಂದಿವೆ. ಎಲ್ಲ ಮುಸ್ಲಿಮರೂ ನಾಲ್ವರು ಹೆಂಡಿರನ್ನು ಮದುವೆಯಾಗುವುದಿಲ್ಲ. ಭಾರತದ ಮುಸ್ಲಿಮರಲ್ಲಿ ಬಹುಪತ್ನೀತ್ವವು 1931–40 ರಲ್ಲಿ ಶೇ. 7.29 ಆಗಿತ್ತು. 1941–50 ರಲ್ಲಿ ಶೇ. 7.06 ಮತ್ತು 1951–60 ರಲ್ಲಿ ಅದು ಶೇ. 4.31 ಆಗಿತ್ತು. ಹಿಂದೂಗಳಲ್ಲಿ ಇದೇ ಕಾಲಾವಧಿಯಲ್ಲಿ ಶೇ. ಸಂಖ್ಯೆ ಕ್ರಮವಾಗಿ 6.79, 7.15 ಮತ್ತು 5.06 ಆಗಿತ್ತು. ಈ ಸಂಖ್ಯೆಗಳಿಗೆ ಆಧಾರ ಸುಮಾರು 1,00,000ಮದುವೆಗಳ ಸರ್ವೆ ಮಾಡಿ ದೊರೆತ ಫಲಿತಾಂಶ. ಬಹುಪತ್ನೀ ವಿವಾಹಗಳ ಸಂಭವವು ಕಡಮೆಯಾಗುತ್ತಿರುವುದನ್ನೂ ಅದರಿಂದಾಗಿ ಬಹುಪತ್ನಿ ಕುಟುಂಬಗಳು ಕಡಮೆಗೊಂಡಿರುವುದನ್ನೂ ಇದು ಸೂಚಿಸುತ್ತದೆ.

ಬಹುಪತಿತ್ವವು ಎಲ್ಲೋ ಕೆಲವು ಸಣ್ಣಪುಟ್ಟ ತಂಡಗಳಿಗೆ ಸೀಮಿತಗೊಂಡಿದೆ. ಉತ್ತರ ಪ್ರದೇಶದ ಖಾಸಾ (ಜೌನ್ಸಾರಿಗಳು) ಜನರು, ಹಿಮಾಚಲ ಪ್ರದೇಶದ ಕಿನ್ನೌರ್ ಲಾಹೌಲ್ ಮತ್ತು ಸ್ಪೀತೀ ಜನರು ಅದನ್ನು ಆಚರಿಸುತ್ತಾರೆ. ಅನುಸೂಚಿತ ಜನಜಾತಿಗಳೆಂದು ವರ್ಗೀಕರಿಸಿರುವುದರಿಂದಾಗಿ ಬಹುಪತಿತ್ವವನ್ನು ನಿಷೇಧಿಸುವ ಹಿಂದೂ ಶಾಸನವು ಅವರಿಗೆ ಅನ್ವಯವಾಗುವುದಿಲ್ಲ. ಅವರು ಸೋದರ ಬಹುಪತಿತ್ವವನ್ನು ಆಚರಿಸುತ್ತಾರೆ. ಅವರಲ್ಲಿ ಹಿರಿಯ ಸಹೋದರನು ಮದುವೆ ಮಾಡಿಕೊಂಡರೆ ಅವನ ತಮ್ಮಂದಿರೆಲ್ಲರೂ ಏಕಕಾಲದಲ್ಲಿ ಅವಳ ಗಂಡಂದಿರಾಗುತ್ತಾರೆ. ಸೋದರರು ಒಬ್ಬಳಿಗಿಂತ ಹೆಚ್ಚು ಸ್ತ್ರೀಯರನ್ನೂ ವಿವಾಹವಾಗಬಹುದು. ಈ ಸಂದರ್ಭವನ್ನು 'ಸಮೂಹ ವಿವಾಹ' ಎಂದು

ಭಾವಿಸಬಹುದು. ದಕ್ಷಿಣ ಭಾರತದ ತೋಡರಲ್ಲಿ ಒಬ್ಬ ಹೆಂಗಸಿನ ಗಂಡಂದಿರು ಸಹೋದರರೇ ಆಗಬೇಕೆಂದಿಲ್ಲ. ಇದನ್ನು ಸೋದರಿಕೆಯಲ್ಲದ ಬಹುಪತಿತ್ವ ವೆನ್ನಬಹುದು. ಇಲ್ಲಿ ಅನಿವಾರ್ಯವಾಗಿ ಪಿತೃತ್ವದ ಪ್ರಶ್ನೆ ಬರುತ್ತದೆ. ತೋಡರು 'ಬಿಲ್ಲುಬಾಣ' ಸಮಾರಂಭದ ಮೂಲಕ ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳುತ್ತಾರೆ. ಆ ಹೆಂಗಸಿನ ಗಂಡಂದಿರಲ್ಲಿ ಒಬ್ಬನು ಈ ಆಚರಣೆಯನ್ನು ಸಾಮಾನ್ಯವಾಗಿ ಮಾಡುತ್ತಾನೆ. ಆದರೆ ಒಂದು ವೇಳೆ ಮದುವೆಗೆ ಮೊದಲೇ ಹೆಂಗಸು ಗರ್ಭಧಾರಣೆ ಮಾಡಿಬಿಟ್ಟಿದ್ದರೆ, ಅಥವಾ ಬೇರೆ ಯಾವುದೇ ಕಾರಣದಿಂದ ಅವಳ ಗಂಡಂದಿರ ಪೈಕಿ ಯಾರೂ ಈ ಆಚರಣೆಗೆ ಅಶಕ್ತರಾಗಿದ್ದರೆ, ಸೂಕ್ತವಾದ ಪಂಗಡದ (ಅವಳನ್ನು ಮದುವೆಯಾಗಲು ಅರ್ಹವಾದ ಗುಂಪಿನ) ಯಾವನೇ ಒಬ್ಬ ವ್ಯಕ್ತಿಯು ಅದನ್ನು ನಿರ್ವಹಿಸಬಹುದು. ಮೊದಲ ಬಸಿರಿನ ಸಂದರ್ಭದಲ್ಲಿ ಈ ಆಚರಣೆ ಮಾಡುವ ಪುರುಷನು ಅವಳನ್ನು ಕೆಲ ಸಮೀಪ ಬಂಧುಗಳ ಜೊತೆಯಲ್ಲಿ ಹತ್ತಿರದ ಕಾಡಿನೊಳಕ್ಕೆ ಕರೆದುಕೊಂಡು ಹೋಗುತ್ತಾನೆ. ಒಂದು ಮರದ ಕಾಂಡದಲ್ಲಿ ಚೌಕಾಕಾರದ ಒಂದು ತೂತನ್ನು ಕೊರೆಯಲಾಗುತ್ತದೆ. ಅದರೊಳಗೆ ಒಂದು ಸಣ್ಣ ಹಣತೆಯನ್ನು ಹಚ್ಚಿಡಲಾಗುತ್ತದೆ. ಗಂಡಸು ಮರದ ಬಿಲ್ಲುಬಾಣಗಳ ಒಂದು ಕಟ್ಟನ್ನು ತಯಾರಿಸಿ ಆಕೆಯ ಕೈಗೆ ಕೊಡುತ್ತಾನೆ. ಅವಳು ಅವುಗಳನ್ನು ಎತ್ತಿಕೊಂಡು ಮಿದುವಾಗಿ ತನ್ನ ಹಣೆಗೆ ಮುಟ್ಟಿಸಿಕೊಳ್ಳುತ್ತಾಳೆ. ಆಮೇಲೆ ಅವಳು ಉರಿಯುತ್ತಿರುವ ದೀಪದ ಕುಡಿಯನ್ನು ನೆಟ್ಟದೃಷ್ಟಿಯಿಂದ ಅದು ನಂದಿ–ಹೋಗುವವರೆಗೂ ನೋಡುತ್ತಾಳೆ. ಆಮೇಲೆ ಆ ಪುರುಷನು ಊಟವನ್ನು ತಯಾರಿಸುತ್ತಾನೆ. ಇಬ್ಬರೂ ಅದನ್ನು ಸೇವಿಸಿ ಅಲ್ಲೇ ಒಟ್ಟಾಗಿ ರಾತ್ರಿಯನ್ನು ಕಳೆಯುತ್ತಾರೆ. ಮಾರನೆಯ ದಿನ ಹಳ್ಳಿಗೆ ಹಿಂದಿರುಗುತ್ತಾರೆ. ಹೆಂಗಸು ಗರ್ಭಿಣಿಯಾಗಿರುವಾಗ ಯಾವ ಪುರುಷನು ಈ ವಿಧಿಯನ್ನು ಆಚರಿಸುತ್ತಾನೋ ಅವನೇ ಹುಟ್ಟುವ ಮಗುವಿನ ತಂದೆಯೆನಿಸುತ್ತಾನೆ. ಮುಂದೆ ಹುಟ್ಟುವ ಎಲ್ಲ ಮಕ್ಕಳಿಗೂ ಅವನೇ ತಂದೆ. ಅವನು ಸತ್ತಮೇಲೆ ಇನ್ನೊಬ್ಬ ಪುರುಷನು ಈ 'ಬಿಲ್ಲು ಬಾಣ' ವಿಧಿಯನ್ನು ನಡೆಸುವವರೆಗೂ ಹುಟ್ಟುವ ಮಕ್ಕಳೆಲ್ಲರಿಗೂ ಅವನೇ ತಂದೆಯೆನಿಸುತ್ತಾನೆ. ಹಾಗಾಗಿ ತೋಡರಲ್ಲಿ ಜೈವಿಕ ಪಿತೃತ್ವಕ್ಕಿಂತ, ಸಾಮಾಜಿಕ ಪಿತೃತ್ವಕ್ಕೆ ಪ್ರಾಧಾನ್ಯ ಹೆಚ್ಚು. ಕೇರಳದ ನಾಯರರೂ ಬಹು ಪತಿತ್ವವನ್ನು ಆಚರಿಸುತ್ತಾರೆ ಎಂದು ನಂಬಲಾಗಿದ್ದರೂ, ಅದು ಸುಮಾರು ಒಂದು ನೂರಕ್ಕಿಂತಲೂ ಹೆಚ್ಚು ವರ್ಷಗಳ ಹಿಂದೆ. ಉತ್ತರ ಭಾರತದ ಭೂಮಿಕಾಣಿಯಿರುವ ಜಾತಿಯೊಂದರಲ್ಲಿ ಬಹುಪತಿತ್ವದ ಕುರುಹುಗಳಿವೆಯೆಂದು ನಂಬಲಾಗಿದೆ. ಒಬ್ಬ ವ್ಯಕ್ತಿಯ ತಮ್ಮಂದಿರಿಗೆ ಅವನ ಪತ್ನಿಯೊಂದಿಗೆ ಲೈಂಗಿಕ ಸಂಪರ್ಕ ಹೊಂದಲು ಅವಕಾಶವಿದೆ. ಗಂಡನ ಅಣ್ಣಂದಿರಿಗೂ ಈ ಸೌಲಭ್ಯ ಇರುತ್ತಿತ್ತೆಂದು ತೋರುತ್ತದೆ. ಹೆಂಗಸು ವಿಧವೆಯಾದರೆ, ಕರೇವಾ ಪದ್ಧತಿಯ ಪ್ರಕಾರ, ಗಂಡನ ತಮ್ಮಂದಿರಲ್ಲಿ ಯಾರಾದರೂ ಒಬ್ಬನ ಪತ್ನಿಯೆಂದು ಪರಿಗಣಿಸಲಾಗುತ್ತದೆ. ತಮ್ಮ ಇಲ್ಲದೇ ಹೋದರೆ ಅಣ್ಣ ಆಗಬಹುದು. ಕೊನೆಗೆ ಮಾವನೂ ತನ್ನ ಹಕ್ಕನ್ನು ಸಾಧಿಸಬಹುದು.

ಕೆಲವರು ಹೀಗೆ ಹಕ್ಕು ಸ್ಥಾಪಿಸುವುದಕ್ಕಾಗಿ ನ್ಯಾಯಾಲಯದ ಕಟ್ಟೆ ಹತ್ತಿರುವುದೂ ಉಂಟು. ಹೇಗೆ ಇರಲಿ ಈ ಅಂಶವನ್ನು ಕಟುವಾಗಿ ವಿರೋಧಿಸಲಾಗಿದೆ. ಸಾಮಾಜಿಕ ಗೌರವ ಉಳಿಸಿಕೊಳ್ಳಬೇಕೆಂಬ ದೃಷ್ಟಿಯಿಂದ ಈ ಆಚರಣೆ ತಮ್ಮಲ್ಲಿ ಇಲ್ಲವೆಂದು ಹೇಳಿಕೊಳ್ಳುವುದೂ ಇದೆ. ಈ ಜಾತಿಯ ವಿದ್ಯಾವಂತ ವರ್ಗದಲ್ಲಿ ಈ ಪದ್ಧತಿ ನಿಂತುಹೋಗಿದೆಯೆಂದಾದರೂ, ವಿದ್ಯಾವತಿಯರಾದ ಮಹಿಳೆಯರಿಗೆ ಆಘಾತವುಂಟಾಗುವಂತೆ ಅವರ ಕಿರಿಯ ಮೈದುನರು ಸಾಂಪ್ರದಾಯಿಕ ಹಕ್ಕನ್ನು ಸಾಧಿಸುತ್ತಾರೆ.

ಕುಟುಂಬದಲ್ಲಿ ವ್ಯಕ್ತಿಗಳ ನಡುವಣ ಸಂಬಂಧವನ್ನು, ತಂದೆ/ತಾಯಿ – ಮಗ; ಸೋದರರು – ಸೋದರಿಯರು; ಅಕ್ಕ–ತಂಗಿಯರು; ಅತ್ತೆ – ಸೊಸೆ; ಗಂಡ – ಹೆಂಡತಿ; ಭಾವ – ಅತ್ತಿಗೆ; ನಾದಿನಿ; ಹೀಗೆ ಬೇರೆ ಬೇರೆಯ ಸಂಬಂಧಗಳಿಂದ ವಿವರಿಸಲಾಗುತ್ತದೆ. ಈ ನಂಟುಗಳು ವ್ಯಕ್ತಿಗಳಿಗೆ ಸೂಕ್ತವಾದ ನಡವಳಿಕೆಗೆ ಮಾದರಿಗಳಾಗಿ ನಿರ್ದೇಶಕ ತತ್ವಗಳನ್ನು ಒದಗಿಸುತ್ತದೆ. ಆದರೆ ಈ ನಂಟಿನ ಆಚರಣೆಯಲ್ಲಿ ಸಾಕಷ್ಟು ವ್ಯತ್ಯಾಸಗಳಿರುತ್ತವೆ. ಒಂದು ಮನೆಯ ಯಾವುದೇ ಇಬ್ಬರು ಮಕ್ಕಳು ಒಂದೇ ತೆರನಾಗಿರುವುದಿಲ್ಲ. ಎರಡು ಸಂಸಾರಗಳು ಒಂದು ರೀತಿಯಲ್ಲಿರುವುದಿಲ್ಲ. ಸೊಸೆಯರು ಬೇರೆ ಸಾಮಾಜಿಕ ಪರಿಸರದಿಂದ ಬಂದವರಾದ್ದರಿಂದ ಬೇರೆ ಸ್ವಭಾವಗಳು, ಮನೋಧರ್ಮಗಳನ್ನು ತರುತ್ತಾರೆ. ಇವುಗಳನ್ನು ಒಪ್ಪಿಕೊಂಡು ತಮ್ಮ ಮನೆಯ ಆಚರಣೆಗಳೊಳಗೆ ಅಳವಡಿಸಿಕೊಳ್ಳಲು ಪ್ರಯತ್ನಿಸಲಾಗುತ್ತದೆ. ಪ್ರಮಾಣಕಗಳಾದ ವಯಸ್ಸು, ಲಿಂಗ, ಬಂಧುತ್ವದ ಅಂತರ ಇವುಗಳ ಹಿಂದಿರುವ ತತ್ವಗಳು ಬಹಳ ಮುಖ್ಯವಾಗಿರುತ್ತವೆ. ವಯಸ್ಸಿಗೆ ಮನ್ನಣೆ ಬೇಕೆಂದು ನಿರೀಕ್ಷಿಸಲಾಗುತ್ತದೆ. ಪಿತೃಗೋತ್ರ ಪ್ರಧಾನ ತಂಡಗಳಲ್ಲಿ ಪುರುಷರಿಗೆ ಹೆಚ್ಚಿನ ಆದ್ಯತೆ. ಬಂಧುತ್ವ ನಿರ್ಣಯದಲ್ಲಿ ಅಂತರವನ್ನು ಪಾಲಿಸಲೇಬೇಕು. ಹೆಂಗಸು ತನ್ನ ಗಂಡನ ತಂದೆ, ಚಿಕ್ಕಪ್ಪಂದಿರು, ಅಣ್ಣಂದಿರು ಮೊದಲಾದವರೊಂದಿಗೆ ಸಾಮೀಪ್ಯವನ್ನು ನಿವಾರಿಸಬೇಕು. ಉತ್ತರ ಭಾರತದ ಸಾಂಪ್ರದಾಯಿಕ ಮನೆಗಳಲ್ಲಿ ಅವರ ಎದುರಿಗೆ ಅವಳು ಮುಖವನ್ನು ಮರೆ ಮಾಡಿಕೊಂಡಿರಬೇಕು. ಅವರೊಂದಿಗೆ ಮಾತನಾಡಬೇಕಾದ ಸಂದರ್ಭವಿದ್ದರೆ ಎಷ್ಟು ಸಾಧ್ಯವೋ ಅಷ್ಟು ಕಡಮೆ ಪದಗಳನ್ನು ಉಪಯೋಗಿಸಬೇಕು, ದನಿಯನ್ನು ಕುಗ್ಗಿಸಿ ಮಿದುವಾಗಿ ಮಾತನಾಡಬೇಕು. ಸಮವಯಸ್ಸಿನ ಚಿಕ್ಕಪ್ಪಂದಿರು, ಇನ್ನು ಕಿರಿಯರಾದವರು ಕೂಡ ತಮ್ಮ ಮೇಲ್ಪಟ್ಟದ ಬಾಂಧವ್ಯವನ್ನು ಸ್ಥಾಪಿಸಿರುತ್ತಾರೆ. ಉದಾಹರಣೆಗೆ, ಉತ್ತರ ಭಾರತದಲ್ಲಿ ಗಂಡನಿಗೂ ಅವನ ಹೆಂಡತಿಯ ತಂಗಿಯರಿಗೂ ಹಾಗೆಯೇ ಹೆಂಗಸಿಗೂ ಅವಳ ಗಂಡನ ತಮ್ಮಂದಿರಿಗೂ ನಡುವೆ ಒಂದು "ತಮಾಷೆಯ ಸಂಬಂಧ"ವಿರುತ್ತದೆ. ಇನ್ನೊಂದು ವಿಚಾರವನ್ನೂ ಗಮನಿಸಬೇಕು. ಕೆಲವು ನಂಟುಗಳ ಬಿಸಿ, ಕಾಲಕಳೆದಂತೆ ತಣ್ಣಗಾಗುತ್ತದೆ. ಕಾಲದಂತೆ ದೇಶದ ಅಂತರವೂ ಬಂಧುಗಳ ನಡುವೆ ಕ್ರಿಯೆ – ಪ್ರತಿಕ್ರಿಯೆಗಳಲ್ಲಿ ವ್ಯತ್ಯಾಸವುಂಟು ಮಾಡುತ್ತದೆ. ಬಾಂಧವ್ಯದ ಸ್ವರೂಪವೇನೋ ಉಳಿದಿರುತ್ತದೆ. ಆದರೆ ನಿಕಟತೆಯ ಭಾವನೆ ಹೊರಟುಹೋಗಿರುತ್ತದೆ.

ಕುಟುಂಬದ ಐಕ್ಯದ ಮೇಲೂ ಅದರೊಳಗಿನ ನಂಟುಗಳ ಗುಣಮಟ್ಟದ ಮೇಲೂ ಆಧುನಿಕ ಕಾಲದಲ್ಲಿ ಅನೇಕ ಅಂಶಗಳು ಪರಿಣಾಮವುಂಟು ಮಾಡಿವೆ. ಶಿಕ್ಷಣ, ಸಂಪ್ರದಾಯೇತರ ವೃತ್ತಿಗಳು, ವರಮಾನದಲ್ಲಿ ಏರಿಳಿತಗಳು, ಪರಸ್ಪರ ದೂರ ಇವು ನಂಟುಗಳ ಮೇಲೆ ಪರಿಣಾಮ ಮಾಡುವ ಅವುಗಳನ್ನು ಬದಲಾವಣೆಯತ್ತ ನೂಕುವ ಕೆಲವು ಅಂಶಗಳು. ದಂಪತಿ ತಮ್ಮಿಷ್ಟಕ್ಕೆ ತಾವು ಸ್ವತಂತ್ರವಾಗಿ ಜೀವಿಸುವ, ಒಂಟಿ ಹೆಂಗಸು, ಒಂಟಿಯಾಗಿ ಬದುಕುವ, ಮದುವೆಯಾಗದ ತಾಯಂದಿರ ಸಮಸ್ಯೆಗಳು, ಈ ಸಂಸ್ಕೃತಿಗಳು ಭಾರತಕ್ಕೆ ಇನ್ನೂ ದೊಡ್ಡ ಪ್ರಮಾಣದಲ್ಲಿ ಬಂದಿಲ್ಲ. ಆದರೂ ಕೊನೆಯಪಕ್ಷ ನಗರದ ಕುಟುಂಬವು ಪರಿವರ್ತನೆಗೊಳ್ಳುತ್ತಿದೆ.

ಕಾಲಕಳೆದಂತೆ ಗಣನೀಯ ಪ್ರಮಾಣದಲ್ಲಿ ಬದಲಾವಣೆಗಳಾಗುತ್ತಿದ್ದರೂ, ಕುಟುಂಬವು ಕೆಲವು ಮಹತ್ವದ ಕೆಲಸಗಳನ್ನು ನೆರವೇರಿಸುತ್ತಲೇ ಇದೆ. ಅದರ ಮೂಲಕ ಬದಲಿ ಸದಸ್ಯತ್ವ ದೊರಕುತ್ತದೆ. ಸಮಾಜದ ಭೌತಿಕ ಉಳಿವು ಖಚಿತವಾಗುತ್ತದೆ. ಅದು ಸಂತಾನವನ್ನು ಕ್ರಮಬದ್ಧಗೊಳಿಸಿ, ಬದುಕಿನ ಕನಿಷ್ಠ ಅಗತ್ಯಗಳನ್ನು, ಉದಾಹರಣೆಗೆ ಪೋಷಕತ್ವ, ವಸತಿ, ಅನಾರೋಗ್ಯಪೀಡಿತರ ಶುಶ್ರೂಷೆ ಇತ್ಯಾದಿಗಳನ್ನು ಪೂರೈಸುತ್ತದೆ. ಕಿರಿಯರಿಗೆ ಸಾಮಾಜಿಕ ಪ್ರಜ್ಞೆಯನ್ನು ಉಂಟು ಮಾಡಿಕೊಡುತ್ತದೆ. ಕುಟುಂಬದ ಚೌಕಟ್ಟಿನೊಳಗೆ ಸಮಾಜದ ನೀತಿ, ನಿಯಮಗಳ ವಿಷಯದಲ್ಲಿ ಅವರು ತರಬೇತಿ ಪಡೆಯುತ್ತಾರೆ. ಸೂಕ್ತ ನಡವಳಿಕೆಗೆ ಹೊಂದಿಕೊಳ್ಳುವ ಹಾಗೆ ವರ್ತಿಸಲು ತೊಡಗುತ್ತಾರೆ. ನಡವಳಿಕೆಯ ವಿಭಿನ್ನತೆಗಳನ್ನು ನಿಯಂತ್ರಿಸಿ ಸದಸ್ಯರ ಅದರಲ್ಲೂ ಕಿರಿಯರ ವರ್ತನೆಯಲ್ಲಿ ಒಂದು ಸಾಮರಸ್ಯ ಉಂಟು ಮಾಡುತ್ತದೆ. ಪ್ರೀತಿ, ಮೆಚ್ಚುಗೆ, ಪ್ರೋತ್ಸಾಹ ಮೊದಲಾದ ಭಾವನಾತ್ಮಕ ಬೆಂಬಲವನ್ನೂ ಕುಟುಂಬವು ಒದಗಿಸಿಕೊಡುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ಅದೊಂದು ಆರ್ಥಿಕ ಘಟಕ. ಉತ್ಪಾದನೆ ಮತ್ತು ಅನುಭೋಗ ಎರಡೂ ದೃಷ್ಟಿಗಳಿಂದ ಅದೊಂದು ಘಟಕವಾಗಿತ್ತು. ನಗರ ಕುಟುಂಬವು ಕೇವಲ ಅನುಭೋಗದ ಘಟಕವಾಗುತ್ತಿದೆ. ಹೊರಗಿನ ಕೆಲಸದಿಂದ ಬರುವ ವರಮಾನವನ್ನು ಅದು ಅವಲಂಬಿಸಿದೆ. ಆದರೂ ಒಟ್ಟಾರೆ ಭಾರತದಲ್ಲಿ ಕುಟುಂಬವು ಉತ್ಪಾದನೆಯ ಅತಿ ಮುಖ್ಯ ಘಟಕಗಳಲ್ಲಿ ಒಂದಾಗಿದೆ ಕೂಡ. ಸಾಮಾಜಿಕ ವ್ಯವಸ್ಥೆಯ ಒಂದು ಘಟಕವಾಗಲು ಕುಟುಂಬಕ್ಕೆ ಈ ಮುಖ್ಯ ಅಂಶಗಳು ಸಹಕಾರಿಯಾಗಿವೆ.

## ಮದುವೆ

ಕುಟುಂಬವು ಅಸ್ತಿತ್ವಕ್ಕೆ ಬರುವುದು ವಿವಾಹದ ಫಲವಾಗಿ. ಅದು ಮುಂದುವರಿಯುವುದೂ ವಿವಾಹದ ಮೂಲಕವೇ. ಆದ್ದರಿಂದ ಕುಟುಂಬದಲ್ಲಿ ಮದುವೆ ಹಲವು ಬಗೆಗಳಿಂದ ಪರಿಣಾಮಕರವಾದ ಘಟನೆ. ಅದು ಬಂಧುತ್ವದ ಜಾಲದ ಮೇಲೂ ಪರಿಣಾಮ ಬೀರುತ್ತದೆ. ಕುಟುಂಬ ಮತ್ತು ಬಂಧುತ್ವ ಈ ಎರಡರ ಅರಿವಿಗಾಗಿ ವಿವಾಹವನ್ನು ಕುರಿತು ಪರಿಶೀಲಿಸುವುದು ಅತ್ಯಂತ ಅಗತ್ಯ.

ಕುಟುಂಬದ ಬಗೆಗೆ ಪರಿಶೀಲಿಸುವಾಗಲೇ ವಿವಾಹದ ಕೆಲವು ಮುಖಗಳನ್ನು

ನೋಡಿದ್ದಾಗಿದೆ. ಅದಕ್ಕೆ ಸಂಬಂಧಿಸಿದ ಇತರ ಮುಖ್ಯ ವಿಚಾರಗಳನ್ನು ಇಲ್ಲಿ ನೋಡೋಣ.

ಮೊದಲಿಗೆ, ಒಬ್ಬ ವ್ಯಕ್ತಿಯು ಯಾವ ವರ್ಗದೊಂದಿಗೆ ವಿವಾಹ ಸಂಬಂಧ ನಡೆಸಬಹುದು, ಯಾರೊಂದಿಗೆ ಬಾರದು ಎಂಬುದನ್ನು ಪರಿಶೀಲಿಸಬಹುದು. ಸಾಮಾಜಿಕ ಸಮ್ಮತಿಯೊಂದಿಗೆ ವಿವಾಹ ಸಂಬಂಧ ನಡೆಸಬಹುದಾದ ವರ್ಗವನ್ನು ಸ್ವಗೋತ್ರ ವಿವಾಹ ಪದ್ಧತಿಯು ವಿವರಿಸುತ್ತದೆ. ಅವು ಸಾಮಾನ್ಯವಾಗಿ ಬುಡಕಟ್ಟು ಅಥವಾ ಜಾತಿ. ಕೆಲವು ಸಂದರ್ಭದಲ್ಲಿ ಇದಕ್ಕೆ ಅಪವಾದಗಳೂ ಇವೆ. *ಅನುಲೋಮ* ವಿವಾಹವು ಕೆಳಜಾತಿಯ ಹೆಣ್ಣು, ಮೇಲುಜಾತಿಯ ಗಂಡಿನೊಂದಿಗೆ ವಿವಾಹವಾಗಲು ಅನುಮತಿ ಕೊಡುತ್ತದೆ. ಆದರೆ ಈ ಬಗೆಯ ವಿವಾಹದಲ್ಲಿ ಎಷ್ಟು ಕೆಳಹಂತದ ಜಾತಿಯವರೆಗೆ ಹೋಗಬಹುದು ಎಂಬುದನ್ನು ಸಂಸ್ಕೃತಿಯು ನಿರ್ದೇಶಿಸುತ್ತದೆ. ಸಾಮಾಜಿಕ ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರಗಳ ತಾಂತ್ರಿಕ ಪರಿಭಾಷೆಯಲ್ಲಿ ಇದನ್ನು ಹೈಪರ್‌ಗಮಿ ಎಂದು ಕರೆಯುತ್ತಾರೆ. *ಪ್ರತಿಲೋಮ* ವಿವಾಹಗಳಲ್ಲಿ ಮೇಲುಜಾತಿಯ ಹೆಣ್ಣು ಕೆಳಜಾತಿಯ ಗಂಡಿನೊಂದಿಗೆ ವಿವಾಹ ಸಂಬಂಧ ನಡೆಸಬಹುದು. ಇದನ್ನು ಹೈಪೋಗಮಿ ಎನ್ನುತ್ತಾರೆ. ಸಾಮಾಜಿಕ ವಿರೋಧ ಬಾರದಂತೆ ಯಾವ ತಂಡಗಳೊಂದಿಗೆ ಈ ಬಗೆಯ ಸಂಬಂಧ ಬೆಳೆಸಬಹುದು ಎಂಬುದನ್ನು ಸ್ಥಳೀಯ ಹಾಗೂ ಪ್ರಾದೇಶಿಕ ಸಂಪ್ರದಾಯಗಳು ನಿಗದಿಪಡಿಸುತ್ತವೆ. ಮುಸ್ಲಿಮರು ಮತ್ತು ಕ್ರಿಶ್ಚಿಯನರಲ್ಲಿ ಜಾತಿಯನ್ನು ಅಧಿಕೃತವಾಗಿ ಅಂಗೀಕರಿಸಿಲ್ಲ. ತಾತ್ವಿಕವಾಗಿ ಒಬ್ಬ ಮುಸ್ಲಿಂ ಇನ್ನೊಬ್ಬ ಯಾವನೇ ಮುಸ್ಲಿಮನನ್ನು ಮದುವೆಯಾಗಬಹುದು; ಕ್ರಿಶ್ಚಿಯನ್ ವ್ಯಕ್ತಿಯು ಕ್ರಿಶ್ಚಿಯನ್ ವ್ಯಕ್ತಿಯನ್ನು. ಆದರೂ ಈಗಾಗಲೇ ನಾವು ನೋಡುವಂತೆ, ಮುಸ್ಲಿಮರಲ್ಲಿ ಅಶ್ರಫ್ ಮತ್ತು ಅಜ್ಲಫ್ ವ್ಯತ್ಯಾಸಗಳನ್ನು ಪರಿಗಣಿಸಲಾಗುತ್ತದೆ. ಮತಾಂತರಿಗಳ ಮೂಲ ಜಾತಿಗಳನ್ನು ಮರೆಯುವುದಿಲ್ಲ, ಕ್ರಿಶ್ಚಿಯನರು, ವಿಶೇಷವಾಗಿ ದಕ್ಷಿಣ ಭಾರತದಲ್ಲಿ, ತಮ್ಮ ಪೂರ್ವಜರ ಜಾತಿಯನ್ನು ಸ್ಮರಣೆಯಲ್ಲಿಟ್ಟುಕೊಂಡಿರುತ್ತಾರೆ. ಆಗಾಗ ವಿವಾಹ ಸಂಬಂಧಿ ಜಾಹೀರಾತುಗಳಲ್ಲಿ ಕನ್ಯಾರ್ಥಿಯನ್ನು "ಬ್ರಾಹ್ಮಣ ಕ್ಯಾಥೊಲಿಕ್" ಎಂದೋ "ಸಾರಸ್ವತ ಗೋವನ್ ಕ್ರಿಶ್ಚಿಯನ್" ಎಂದೋ ವರ್ಣಿಸುವುದನ್ನು ನೋಡಬಹುದು. ಇಲ್ಲಿ ಇದನ್ನೂ ಉಲ್ಲೇಖಿಸಬೇಕು. ಹಿಂದೂಗಳಲ್ಲಿ ಅಲ್ಪಸಂಖ್ಯೆಯ ಜನರು ಜಾತಿವ್ಯತ್ಯಾಸಗಳನ್ನು ಅಲಕ್ಷಿಸುತ್ತಾರೆ. ಕೆಲವು ವಿವಾಹ ಸಂಬಂಧ ಜಾಹೀರಾತುಗಳು "ಉಪಜಾತಿ ಅಡ್ಡಿಯಾಗುವುದಿಲ್ಲ", "ಜಾತಿಯ ಅಡ್ಡಿಯಿಲ್ಲ" ಎಂಬಂಥ ಉಕ್ತಿಗಳಿಂದ ಕೂಡಿರುತ್ತವೆ. ಗೋಚರವಾಗದ ವರ್ಗಪ್ರಜ್ಞೆಯು ತಡೆಯೂ ವಿವಾಹ ಸಂಬಂಧಗಳನ್ನು ಕೂಡಿಸುವುದರಲ್ಲಿ ಒಂದು ನಿರ್ಣಾಯಕ ಅಂಶವಾಗಿರುತ್ತದೆ.

ಯಾರೊಂದಿಗೆ ವಿವಾಹ ಸಂಬಂಧಗಳನ್ನು ನಡೆಸಬಾರದೋ ಅದನ್ನು ಭಿನ್ನಗೋತ್ರ ವಿವಾಹ ನಿಯಮವು ನಿರ್ಣಯಿಸುತ್ತದೆ. ಹಿಂದೂಗಳು ತಮ್ಮದೇ ಗೋತ್ರವಿರುವವರನ್ನು ಮದುವೆಯಾಗಕೂಡದು. ಏಕೆಂದರೆ ಆ ಗೋತ್ರದ ಎಲ್ಲರಿಗೂ ಒಬ್ಬನೆ ಮೂಲಪುರುಷನೆಂದು ನಂಬಲಾಗುತ್ತದೆ. *ಸಪಿಂಡರೊಂದಿಗೂ*

ವಿವಾಹ ನಿಷಿದ್ಧ. *ಸಪಿಂಡ* ಎಂಬ ಪದಕ್ಕೆ ಎರಡು ಅರ್ಥಗಳಿವೆ. ಮೃತರಿಗೆ ಪಿಂಡವನ್ನು – ಅನ್ನದ ಉಂಡೆಯನ್ನು – ಅರ್ಪಿಸಬಹುದಾದವರು; ಒಂದೇ ದೇಹದ ಕಣಗಳನ್ನು ಹಂಚಿಕೊಂಡಿರುವವರು ಎಂದು. ವೈವಾಹಿಕ ಸಂಬಂಧಗಳ ಸಂದರ್ಭದಲ್ಲಿ ಗೌತಮನ ಧರ್ಮಶಾಸ್ತ್ರದ ಪ್ರಕಾರ, ತಂದೆಯ ಕಡೆ ಏಳು ತಲೆಯವರೆಗೆ, ತಾಯಿಯ ಕಡೆ ಐದು ತಲೆಯವರೆಗೆ *ಸಪಿಂಡ*ರಾಗುತ್ತಾರೆ. ಇತರ ಧರ್ಮಶಾಸ್ತ್ರಕಾರರು ಈ ಸಂಖ್ಯೆಯನ್ನು ಇಳಿಸಲು ಪ್ರಯತ್ನಿಸಿರುವುದುಂಟು. 1955ರ ಹಿಂದೂ ವಿವಾಹ ಶಾಸನದ ಪ್ರಕಾರ ತಂದೆಯ ಕಡೆ ಐದು ತಲೆಯವರೆಗೆ ತಾಯಿಯ ಕಡೆ ಮೂರು ತಲೆಯವರೆಗೆ ಸಂಬಂಧ ಹೊಂದಿರುವ ಯಾವ ವ್ಯಕ್ತಿಯೊಂದಿಗೂ ಮದುವೆ ಸಂಬಂಧ ಕೂಡದು. ಸ್ಥಳೀಯ ಆಚರಣೆಗಳು ರೂಢಿಗಳು ಅವಕಾಶ ಕೊಟ್ಟಿದ್ದರೆ ಮಾತ್ರ ಅಂತಹ ಸಂಬಂಧ ಸಾಧ್ಯ. ಬುಡಕಟ್ಟು ಜನರಲ್ಲೂ ಕೂಡ ವಿವಾಹವು ತಮ್ಮದಕ್ಕಿಂತ ಹೊರಗಿನ ತಂಡದೊಂದಿಗೆ ಆಗಬೇಕು. ಉತ್ತರಭಾರತದ ಕೆಲವು ಭಾಗಗಳಲ್ಲಿ ಪ್ರಾದೇಶಿಕ ಭಿನ್ನಗೋತ್ರ ವಿವಾಹಪದ್ಧತಿಯಿದೆ. ಒಂದು ದಿಕ್ಕಿನ ಕನ್ಯೆಯರನ್ನು ಇನ್ನೊಂದು ದಿಕ್ಕಿನ ವರರೊಂದಿಗೆ ಕೊಟ್ಟು ವಿವಾಹ ಮಾಡುತ್ತಾರೆ. ಭಿನ್ನಗೋತ್ರ ವಿವಾಹದ ನಿಯಮಗಳನ್ನು ಇನ್ನೂ ಕಟ್ಟುನಿಟ್ಟಾಗಿ ಆಚರಿಸುತ್ತಿದ್ದಾರೆ.

ಒಂದು ಮದುವೆಯನ್ನು ವ್ಯವಸ್ಥೆ ಮಾಡುವುದು ತುಂಬ ಸರಳವಾಗಿರಬಹುದು ಇಲ್ಲವೆ, ಅತ್ಯಂತ ಜಟಿಲವೂ ಸಂಕೀರ್ಣವೂ ವಿಸ್ತಾರವೂ ಆಗಿರಬಹುದು. ಬುಡಕಟ್ಟು ಸಮಾಜದಲ್ಲಿ ಹುಡುಗ ಮತ್ತು ಹುಡುಗಿ ಮನೆಬಿಟ್ಟು ಓಡಿಹೋಗಬಹುದು. ಕೆಲಕಾಲಾನಂತರ ಹಿಂದಿರುಗಿ ಒಂದು ಸಣ್ಣ ಔತಣ ಕೊಟ್ಟರೆ ತೀರಿತು. ಅಲ್ಲಿಂದ ಮುಂದಕ್ಕೆ ಅವರನ್ನು ಗಂಡ–ಹೆಂಡತಿ ಎಂದು ಪರಿಗಣಿಸಲಾಗುತ್ತದೆ. ಸಿವಿಲ್ ಮ್ಯಾರೇಜ್ ಆಕ್ಟ್ ಅಥವಾ ಸ್ಪೆಷಲ್ ಮ್ಯಾರೇಜ್ ಆಕ್ಟ್ ಪ್ರಕಾರ ಯಾರು ಬೇಕಾದರೂ ನಿರ್ದಿಷ್ಟ ಪೂರ್ವ ತಿಳುವಳಿಕೆ ಕೊಟ್ಟು ಮದುವೆ ಮಾಡಿಕೊಳ್ಳಬಹುದು. ಒಂದು ಸಣ್ಣ ಶುಲ್ಕವನ್ನು ನೀಡಿ ಇಬ್ಬರು ಸಾಕ್ಷಿಗಳ ಸಮ್ಮುಖದಲ್ಲಿ ಮದುವೆ ಮಾಡಿಕೊಂಡರಾಯಿತು. ಹಿಂದೂಗಳಲ್ಲಿ ಆರ್ಯಸಮಾಜ ವಿವಾಹ ಹಾಗೂ ದೇವಸ್ಥಾನಗಳಲ್ಲಿ ಮದುವೆ ಈಗ ಹೆಚ್ಚು ಜನಪ್ರಿಯವಾಗುತ್ತಿವೆ. ಆದರೆ ಪೂರ್ವ ವ್ಯವಸ್ಥಿತ ವಿವಾಹಗಳಲ್ಲಿ ಬಹಳ ಜಾಗರೂಕತೆಯಿಂದ ಲೆಕ್ಕಾಚಾರ ಹಾಕಬೇಕಾಗುತ್ತದೆ, ಮಾತುಕತೆಗಳನ್ನು ನಡೆಸಬೇಕಾಗುತ್ತದೆ. ನಿಯಮ ಪ್ರಕಾರ ಅನುಮತಿಯಿರುವ ವರ್ಗಗಳಿಂದ ಬಂದ ವಧೂ–ವರರು ಜತೆಗೂಡುತ್ತಿದ್ದರೆ ಕಷ್ಟ ಕಡಮೆ. ಮುಸ್ಲಿಮರಲ್ಲಿ ಸಮಾಂತರ ದಾಯಾದಿಗಳು, ಅಂದರೆ ಇಬ್ಬರು ಸೋದರರ ಅಥವಾ ಸೋದರಿಯರ ಗಂಡುಮಕ್ಕಳು, ಹೆಣ್ಣುಮಕ್ಕಳು, ಕೆಲವು ಬುಡಕಟ್ಟುಗಳಲ್ಲಿ ಮತ್ತು ದಕ್ಷಿಣ ಭಾರತದ ಹಾಗೂ ಮಹಾರಾಷ್ಟ್ರದ ಕೆಲವು ಜಾತಿಗಳಲ್ಲಿ ಇರುವಂತೆ ಅಡ್ಡ ದಾಯಾದಿಗಳು, ಅಂದರೆ ಸೋದರ–ಸೋದರಿಯರ ಮಕ್ಕಳು ಇಂಥವರು. ಆಂಧ್ರಪ್ರದೇಶ, ಕರ್ನಾಟಕ ಮತ್ತು ತಮಿಳುನಾಡಿನ ಮತ್ತೆ ಕೆಲವು ಭಾಗಗಳಲ್ಲಿ ಕೆಲವು ವರ್ಗಗಳಲ್ಲಿ ಒಬ್ಬ ಗಂಡಸಿಗೂ ಅವನ ಅಕ್ಕನ ಮಗಳಿಗೂ ಮದುವೆ ಮಾಡುವುದನ್ನು ಹೆಚ್ಚು ಅಪೇಕ್ಷಿಸುತ್ತಾರೆ. ಇಂತಹ ಮದುವೆಗಳಲ್ಲಿ ಸ್ವಗೋತ್ರ ವಿವಾಹ

ನಿಯಮಗಳನ್ನು ಅತ್ಯಂತ ಕಟ್ಟುನಿಟ್ಟಾಗಿ ಆಚರಿಸಲಾಗುತ್ತದೆ ಮತ್ತು ಇವುಗಳಲ್ಲಿ ಆರ್ಥಿಕ ಅನುಕೂಲತೆಗಳೂ, ಆಸ್ತಿ, ಪಾಸ್ತಿ ವಿನಿಮಯದ ದೃಷ್ಟಿಯಿಂದ ಅನುಕೂಲಗಳೂ ಉಂಟು. ತನ್ನ ಮಗಳು ತನ್ನ ತಮ್ಮನ ಮಗನನ್ನೇ ಮದುವೆಯಾದರೆ ಆ ಸಂದರ್ಭದಲ್ಲಿ ಕೊಟ್ಟ ಉಡುಗೊರೆಗಳೂ ಆಸ್ತಿಯೂ ತನಗೇ ಹಿಂದಕ್ಕೆ ಬರುತ್ತವೆಯಷ್ಟೆ. ಸಮೀಪಬಂಧುಗಳಾದ ಹೊರಗಿನವರನ್ನು ಕೊಟ್ಟೋ, ತಂದೋ ವಿವಾಹ ನಡೆದರೆ ಆಗ ಅನೇಕ ಅಂಶಗಳನ್ನು ಪರಿಶೀಲಿಸಬೇಕಾಗುತ್ತದೆ. ಮನೆತನಗಳ ಸ್ಥಾನಮಾನ, ಹುಡುಗ–ಹುಡುಗಿಯರ ಚಾರಿತ್ರ್ಯ, ವಿವಾಹದ ಅಂದಾಜುವೆಚ್ಚ (ನಗದು ಮತ್ತು ವಸ್ತು ರೂಪದಲ್ಲಿ ಕೊಡುವ ಉಡುಗೊರೆಗಳೂ ಕೂಡಿ), ಹುಡುಗ ಮತ್ತು ಹುಡುಗಿಯ ಜಾತಕಗಳು ಹೊಂದಿಕೆಯಾಗುತ್ತವೆಯೇ ಇತ್ಯಾದಿ ಎಷ್ಟೋ ವೇಳೆ ಮಾತುಕತೆ ಬಹು ದೀರ್ಘಕಾಲ ನಡೆಯುತ್ತದೆ. ಕೊಡುವ, ಬಿಡುವ ವಿಚಾರದಲ್ಲಿ ಬೇಕಾದಷ್ಟು ಚರ್ಚೆಗಳಾಗುತ್ತವೆ. ಮಾತುಕತೆಗಳ ನಡುವೆ ಭಾರೀ ತಡೆಯೇನಾದರೂ ಬಂದರೆ, ಹಿರಿಯರು ಮತ್ತು ಇತರ ಪ್ರಭಾವೀ ಗಣ್ಯರು ಮಧ್ಯೆ ಪ್ರವೇಶಿಸುತ್ತಾರೆ. ಮಾತನಾಡಿ ತಡೆಯನ್ನು ನಿವಾರಿಸುತ್ತಾರೆ. ಪದೇ ಪದೇ ಘರ್ಷಣೆಗಳು, ಅಸಮಾಧಾನಗಳು ಪುಟಿದೇಳುತ್ತವೆ. ಅವೆಲ್ಲವನ್ನೂ ನಿವಾರಿಸಿ ಕೊನೆಗೊಮ್ಮೆ ವಿವಾಹ ಸಮಾರಂಭವು ಸಮಾಪನಗೊಂಡಾಗ ಸಂಬಂಧಿಸಿದ ಎಲ್ಲರೂ ಸಮಾಧಾನದ ನಿಟ್ಟುಸಿರುಬಿಡುತ್ತಾರೆ.

ಮದುವೆಯ ಹಣಕಾಸಿನ ವಿಚಾರ ತುಂಬ ಮುಖ್ಯವಾದದ್ದು. ಕೆಲವು ಬುಡಕಟ್ಟುಗಳಲ್ಲಿ ಮದುವೆಯಿಂದಾಗಿ ವಧುವಿನ ತಾಯ್ತಂದೆಯರಿಗೆ ಆಗುವ ನಷ್ಟವನ್ನು ತುಂಬಿಕೊಡಲು "ವಧುದಕ್ಷಿಣೆ" ಅಥವಾ ತೆರ ಕೊಡುತ್ತಾರೆ. ಇದು ನಗದಾಗಿರಬಹುದು ಇಲ್ಲವೇ ವಸ್ತುರೂಪದಲ್ಲಿರಬಹುದು, ಅಥವಾ ಎರಡೂ ಆಗಿರಬಹುದು. ಬಿಹಾರದ ಛೋಟಾನಾಗಪುರದಲ್ಲಿ ಉರವರು ಕನ್ಯೆಗೂ ಮತ್ತು ಅವಳ ಸಂಬಂಧಿಕರಿಗೂ ಬಟ್ಟೆಬರೆಗಳ ಉಡುಗೊರೆ ತೆಗೆದುಕೊಂಡು ಹೋಗುತ್ತಾರಾದರೆ, ಹೋ ಮತ್ತು ಮುಂಡ ಬುಡಕಟ್ಟಿನವರು ನಿರ್ದಿಷ್ಟ ಸಂಖ್ಯೆಯ ಹಸುಗಳನ್ನು ಕೊಡುತ್ತಾರೆ. ಅರುಣಾಚಲ ಪ್ರದೇಶದಲ್ಲಿ ಉಡುಗೊರೆಯು ಮಿಥುನ (ಆರೆ ಸಾಕುಪ್ರಾಣಿ)ದ ರೂಪದಲ್ಲಿರುತ್ತದೆ. ಅವೋ ನಾಗಾಗಳು ಬತ್ತ ತುಂಬಿದ ಗೂಡೆಗಳನ್ನೂ ಒಂದು ಅವೋ ಕಠಾರಿಯನ್ನೂ ಕೊಡುತ್ತಾರೆ. ಮಹಿಳೆಯರ ಸ್ಥಾನಮಾನವನ್ನು ಅಧ್ಯಯನ ಮಾಡಲು ಕುರಿತ ಸಮಿತಿಯೊಂದು ವಧುದಕ್ಷಿಣೆಯ ಮೊಬಲಗಿನಲ್ಲಿ ತುಂಬ ವ್ಯತ್ಯಾಸಗಳಿರುವುದನ್ನು ಗುರುತಿಸಿತು. ಅದು 40 ರೂಪಾಯಿನಿಂದ 1000 ರೂಪಾಯಿವರೆಗೆ ವ್ಯತ್ಯಾಸವಾಗುತ್ತಿತ್ತು. ಅಧ್ಯಯನದಿಂದ ವ್ಯಕ್ತವಾದ ಒಂದು ಮಹತ್ವ ಪೂರ್ಣವಾದ ಅಂಶವೆಂದರೆ ವಧುದಕ್ಷಿಣೆ ಏರುತ್ತಿರುವುದು. ತಮಿಳುನಾಡಿನ ಇರುಳರು ಸಂಪ್ರದಾಯದಿಂದ 0.25 ಪೈಸೆ ಕೊಡುತ್ತಿದ್ದವರು ಈಗ 40–00 ರೂಪಾಯಿ ವೆಚ್ಚ ಮಾಡುತ್ತಾರೆ. ಒರಿಸ್ಸಾದ ಬಿಂಜಾಲರು ಮೊದಲು 40ರಿಂದ 100 ರೂಪಾಯಿ ವೆಚ್ಚ ಮಾಡುತ್ತಿದ್ದವರು ಈಗ 400 ರೂ. ವೆಚ್ಚ ಮಾಡುತ್ತಾರೆ. ರಾಜಾಸ್ಥಾನದ ಭಿಲ್ಲರು ಈ ಶೀರ್ಷಿಕೆಗೆ 60 ರಿಂದ

120 ರೂಪಾಯಿ ಖರ್ಚು ಮಾಡುತ್ತಿದ್ದರು. ಈಗ ಅವರಿಗೆ 300 ರಿಂದ 1000 ರೂಪಾಯಿ ಬೇಕು. ಈ ಪದ್ಧತಿಯು ಕೆಲವು ಕೆಳಜಾತಿಗಳಲ್ಲೂ ಕಂಡುಬರುತ್ತದೆ. ಬೇರೆ ವರ್ಗಗಳಲ್ಲಿ ವಧು, ವರ ಇಬ್ಬರಿಗೂ ಜೊತೆಗೆ ಕೆಲವು ಹತ್ತಿರದ ಸಂಬಂಧಿಗಳಿಗೂ ಉಡುಗೊರೆಗಳನ್ನು ಕೊಡುವುದು ರೂಢಿಯಾಗಿತ್ತು. ಹಿಂದೂಗಳಲ್ಲಿ ಮದುವೆಯ ಗಂಡಿಗೆ ವಿಶೇಷವಾದ ಸ್ಥಾನವಿದೆ. ಹಿಂದೂ ವಿವಾಹದಲ್ಲಿ ಅತ್ಯಗತ್ಯವಾದ ಒಂದು ವಿಧಿ ಕನ್ಯಾದಾನ, ವಧುವಿನ ತಂದೆ ತಾಯಿ ಅವಳನ್ನು ಉಡುಗೊರೆಯಾಗಿ ಕೊಟ್ಟುಬಿಡುವುದು. ದಾನದ ಹಿಂದೆಯೇ ದಕ್ಷಿಣೆ, ಸಾಂಪ್ರದಾಯಿಕವಾದ ಕೊಡುಗೆ, ಬರಬೇಕು. ಸಾಂಪ್ರದಾಯಿಕವಾದ ವರದಕ್ಷಿಣೆ ಕೇವಲ ಸಾಂಕೇತಿಕವಾದ ಉಡುಗೊರೆಯಾಗಿತ್ತು. ಶ್ರೀಮಂತ ಜಮೀನ್ದಾರ ಜಾತಿಗಳಾದ ಆಂಧ್ರದ ರೆಡ್ಡಿ ಮತ್ತು ಕಮ್ಮ ತಮಿಳುನಾಡಿನ ಪಾವಳ್‌ಗೇರಿ ಮತ್ತು ಅಂಬಲಕ್ಕರರ್ ಅವರು ಮದುವೆಯಲ್ಲಿ ತಮ್ಮ ಮಗಳಿಗೆ ನಗದು ಹಣ, ಆಭರಣಗಳು, ಭೂಮಿ ಮೊದಲಾದವನ್ನು ಕೊಡುತ್ತಾರೆ. ನಗದು ಹಣವನ್ನು ವರನಿಗೋ, ಅವನ ತಂದೆಗೋ ಕೊಡುತ್ತಾರೆ. ವಧುವು ಆಭರಣಗಳನ್ನು ತನ್ನ ಬಳಿ ಇಟ್ಟುಕೊಳ್ಳುತ್ತಾಳೆ. ಉಡುಗೊರೆಯಾಗಿ ಬಂದ ಭೂಮಿಯನ್ನೂ ಅವಳ ಹೆಸರಲ್ಲಿ ರಿಜಿಸ್ಟರ್ ಮಾಡಿಸಲಾಗುತ್ತದೆ. ಆದರೆ ಇವು ಅಪರೂಪದ ಸಂದರ್ಭಗಳು. ಇತರರಲ್ಲಿ ಉಡುಗೊರೆಗಳು ಮಿತ ಪ್ರಮಾಣದಲ್ಲಿರುತ್ತವೆ. ನಮ್ಮ ದೇಶದಲ್ಲಿ ಸ್ವಾತಂತ್ರ್ಯನಂತರ ಉಡುಗೊರೆಗಳು, ವರದಕ್ಷಿಣೆ ಪೆಡಂಭೂತವಾಗಿ ಬೆಳೆದಿದೆ. ಈಗ ಅವನ್ನು ಸ್ವಯಂ ಪ್ರೇರಣೆಯಿಂದ ಕೊಡುತ್ತಿಲ್ಲ. ಒತ್ತಾಯದಿಂದ ಕೇಳಲಾಗುತ್ತದೆ, ಚೌಕಾಸಿ ಮಾಡಲಾಗುತ್ತದೆ. ಹೊಸ ಶ್ರೀಮಂತರು ಭಾರೀ ಪ್ರಮಾಣದ ವರದಕ್ಷಿಣೆ, ವರೋಪಚಾರಗಳನ್ನೂ ಆದ್ದೂರಿಯಿಂದ ಔತಣಗಳನ್ನೂ ಕೊಟ್ಟು ಪರಿಸ್ಥಿತಿಯನ್ನು ಇನ್ನಷ್ಟು ಹಾಳುಮಾಡಿದ್ದಾರೆ. ಐಎಎಸ್ ಹಾಗೂ ಇತರ ಉನ್ನತ ಸರಕಾರಿ ಹುದ್ದೆಗಳಲ್ಲಿರುವವರು ಭಾರೀ ವರದಕ್ಷಿಣೆಯನ್ನು ಬಯಸುತ್ತಾರೆ, ಪಡೆಯುತ್ತಾರೆ. ಇತರ ಉತ್ತಮ ದರ್ಜೆಯಲ್ಲಿರುವವರೂ ಇಲ್ಲಿ ಹಿಂದೆ ಬಿದ್ದಿಲ್ಲ. ಮುಸ್ಲಿಮರಲ್ಲೂ, ಕ್ರಿಶ್ಚಿಯನ್ನರಲ್ಲೂ ಈ ಪದ್ಧತಿ ರೂಢಿಯಲ್ಲಿದೆ. ಮದುವೆಯಾದ ನಂತರವೂ ಕೇಳುವುದು ನಿಲ್ಲುವುದಿಲ್ಲ. ಮುಂದುವರಿದೇ ಇರುತ್ತದೆ. ವಧುದಹನ, ವರದಕ್ಷಿಣೆ ಸಾವು ಮೊದಲಾದ ಕ್ರೌರ್ಯಗಳ ವರದಿ ಇಂದಿನ ಭಾರತೀಯ ಪತ್ರಿಕೆಗಳಲ್ಲಿ ಒಂದೇ ಸಮನೆ ಬರುತ್ತಲೇ ಇರುತ್ತದೆ. ವಧುವಿಗೆ ಭದ್ರತೆಯನ್ನು ಒದಗಿಸಲೆಂಬ ಉದ್ದೇಶದಿಂದ ಪ್ರಾರಂಭವಾದದ್ದು ಇಂದು ಅವಳ ಜೀವಕ್ಕೆ ಕುತ್ತಾಗಿ ಪರಿಣಮಿಸಿದೆ.

ಹಿಂದೂ ಸಂಪ್ರದಾಯವು ವಿವಾಹ ವಿಚ್ಛೇದನವನ್ನು ಮಾನ್ಯ ಮಾಡುವುದಿಲ್ಲ. ಆದರೆ ಹಲವು ಜಾತಿಗಳ ರೂಢಿಯ ಕಟ್ಟಳೆ ಅದನ್ನು ಒಪ್ಪುತ್ತದೆ. ಈ ಅಂಶವನ್ನು ಒಪ್ಪುವ ಜಾತಿಗಳು ಬಹುಮಟ್ಟಿಗೆ ದ್ವಿಜ ಜಾತಿಗಳಲ್ಲ. ಪರಸ್ಪರ ಸಮ್ಮತಿಯಿಂದ ವಿಚ್ಛೇದನವನ್ನು ಪಡೆಯಬಹುದು. ಜಾತಿಯ ಅಥವಾ ಗ್ರಾಮ ಪಂಚಾಯತಿಯ ಮಧ್ಯ ಪ್ರವೇಶ ಬೇಕಾಗಬಹುದು, ಬೇಕಾಗದೆಯೂ ಇರಬಹುದು. ಇಂಥ ವಿಚ್ಛೇದನಗಳಿಗೆ "ಛೋರ್ ಚುಟ್ಟಿ" ಅಥವಾ "ಚುಟ್ಟಂ ಚುಟ್ಟಿ" – "ಬಿಡು ಮತ್ತು

ಸ್ವತಂತ್ರವಾಗು'' ಎಂದು ಹೆಸರು. ಏಕಪಕ್ಷೀಯ ವಿಚ್ಛೇದನಕ್ಕೆ ಕೆಲವು ಪ್ರದೇಶಗಳಲ್ಲಿ ಮತ್ತು ಸಮುದಾಯಗಳಲ್ಲಿ ಅವಕಾಶವಿದೆ. ಮಣಿಪುರದಲ್ಲಿ, ಖನಿಯಾಬಾ ಪದ್ಧತಿಯ ಪ್ರಕಾರ ಗಂಡಸು ತನ್ನ ಹೆಂಡತಿಯನ್ನು ತನಗಿಚ್ಛೆ ಬಂದಾಗ ಯಾವ ಕಾರಣವನ್ನೂ ನೀಡದೆಯೇ ಬಿಟ್ಟುಬಿಡಬಹುದು. ಖಾಂದೇಶದ ರಜಪೂತ ಗುಜರಾತಿಗಳಲ್ಲಿ, ಪಖಿಯಾರಲ್ಲಿ ಗೋರಖ್‌ಪುರದ ವೈಶ್ಯರಲ್ಲೂ ಕೂಡ ಗಂಡನು ತನ್ನ ಹೆಂಡತಿಯನ್ನು ತೊರೆದರೆ, ಅಗಲಿದರೆ ಅದು ವಿಚ್ಛೇದನದಲ್ಲಿ ಪರ್ಯವಸಾನ ಹೊಂದುತ್ತದೆ ಎಂದು ಒಂದು ಸರಕಾರೀ ವರದಿ ತಿಳಿಸುತ್ತದೆ. ದೇಶದ ಎಲ್ಲ ಭಾಗಗಳಲ್ಲೂ ಕಾಗದ ಪತ್ರಗಳ ಮೂಲಕ ವಿಚ್ಛೇದನ ಪಡೆಯಲು ಸಾಂಪ್ರದಾಯಿಕ ಪಂಚಾಯಿತಿಗಳ ಮಧ್ಯಸ್ಥಿಕೆ ಅಗತ್ಯ; ಅದರಲ್ಲೂ ಹೆಚ್ಚಾಗಿ ದಕ್ಷಿಣದಲ್ಲಿ ಇದು ಪ್ರಚಲಿತವಾಗಿದೆ. 1968ರಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯವೂ ಇಂತಹ ವಿಚ್ಛೇದನಗಳನ್ನು ಎತ್ತಿ ಹಿಡಿಯಿತು.

1955ರ ಹಿಂದೂ ವಿವಾಹ ಶಾಸನವು ವಿವಾಹ ವಿಚ್ಛೇದನವನ್ನು ಅಂಗೀಕರಿಸಿ ಅದನ್ನು ಪಡೆಯಲು ಆಧಾರಗಳನ್ನು ನಿರೂಪಿಸಿದೆ. ಅವು, ವ್ಯಭಿಚಾರ, ಮತಾಂತರ, ಬುದ್ಧಿವಿಕಲ್ಪ, ವಾಸಿಮಾಡಲಾಗದಂತಹ ಕುಷ್ಠರೋಗ, ಗುಹ್ಯರೋಗ, ವಿರಕ್ತಿ, ಏಳು ವರ್ಷ ಅಥವಾ ಹೆಚ್ಚು ಸಮಯ ತನ್ನ ಗಂಡನಾಗಲಿ, ಹೆಂಡತಿಯಾಗಲಿ ಜೀವಂತವಾಗಿರುವುದು ತಿಳಿಯದೆ ಹೋಗುವ ಪರಿಸ್ಥಿತಿ, ನ್ಯಾಯಾಲಯದ ಆಜ್ಞೆಯಾದ ಮೇಲೆ ಎರಡು ವರ್ಷಗಳ ಕಾಲ ಒಟ್ಟಿಗೆ ವಾಸ ಮಾಡಲು ಸಾಧ್ಯವಾಗದಿರುವುದು, ಮತ್ತು ದಾಂಪತ್ಯದ ಹಕ್ಕುಗಳನ್ನು ಪೂರ್ವಸ್ಥಿತಿಗೆ ತರಬೇಕೆಂಬ ಆದೇಶವನ್ನು ಪಾಲಿಸಲು ಅಸಮರ್ಥವಾಗಿರುವುದು. ಗಂಡನು ಒಬ್ಬಳಿಗಿಂತ ಹೆಚ್ಚು ಜೀವಂತವಾಗಿರುವ ಹೆಂಡಿರನ್ನು ಹೊಂದಿದ್ದರೆ, ಅಥವಾ ಮಾನಭಂಗ, ಪುರುಷ ಮೈಥುನ, ವಿಷಯಲಂಪಟತೆಗಳಿಗಾಗಿ ಶಿಕ್ಷೆ ವಿಧಿಸಲ್ಪಟ್ಟರೆ, ಹೆಂಡತಿಯು ಅವನಿಂದ ವಿಚ್ಛೇದನವನ್ನು ಹೊಂದಬಹುದು. ಮುಸ್ಲಿಂ ಶಾಸನದ ಪ್ರಕಾರ ಗಂಡನಿಗೆ ತನ್ನ ಹೆಂಡತಿಯನ್ನು ವಿಚ್ಛೇದಿಸಲು ಸಂಪೂರ್ಣ ಹಕ್ಕಿದೆ. ಅವು "ತಲಾಖ್ ತಲಾಖ್ ತಲಾಖ್'' ಎಂದು ಮೂರು ಸಾರಿ ಹೇಳಿದರೆ ತೀರಿತು. ಆದರೆ ಮುಸ್ಲಿಂ ಹೆಂಗಸಿಗೆ ಈ ಹಕ್ಕು ಇಲ್ಲ. ಆವಳು ಈ ಮೂರು ವಿಧಾನಗಳಿಂದ ತನ್ನ ಮದುವೆಯ ಬಂಧನವನ್ನು ಕಳಚಿಕೊಳ್ಳಬಹುದು: *ತಲಾಖ್ ತಫ್‌ವೀದ್* ಎನ್ನುವುದು ಒಂದು ವಿಧಾನ. ಇದರಂತೆ ತಾನು ಇನ್ನೊಬ್ಬ ಹೆಂಡತಿಯನ್ನು ತಂದದ್ದೇ ಆದರೆ ವಿಚ್ಛೇದನ ಪಡೆಯಬಹುದೆಂದು ಮೊದಲನೆಯ ಹೆಂಡತಿಗೆ ಪುರುಷನು ಹಕ್ಕನ್ನು ನೀಡಿರುತ್ತಾನೆ; *ಖುದ್* ಒಂದು ಪ್ರತಿಫಲ ಪಡೆದು ಬಿಡುಗಡೆ ಹೊಂದುವುದು; ಮೂರನೆಯದು ಮುಬ್ಬರತ್ ಪರಸ್ಪರ ಸಮ್ಮತಿಯಿಂದ ವಿಚ್ಛೇದನ ಹೊಂದುವದು. ಮುಸ್ಲಿಂ ವಿವಾಹ ರದ್ದತಿ ಶಾಸನ (1939) ಒಬ್ಬ ಮಹಿಳೆಯು ತನ್ನ ವಿವಾಹವನ್ನು ರದ್ದುಪಡಿಸಿಕೊಳ್ಳಬಹುದಾದ ಒಂಬತ್ತು ಕಾರಣಗಳನ್ನು ಪಟ್ಟಿ ಮಾಡಿದೆ. ಇವುಗಳಲ್ಲಿ ಮಿಕ್ಕವುಗಳ ಜೊತೆಗೆ ಎರಡು ವರ್ಷಕಾಲ ಜೀವಿಕೆಯನ್ನು ಒದಗಿಸದಿರುವುದೂ; ಮೂರು ವರ್ಷಕಾಲ ವೈವಾಹಿಕ ಜೀವನದ ನಿಯಮಗಳನ್ನು

ಪೂರೈಸದಿರುವುದೂ; ಬಾಲ್ಯದಲ್ಲೇ ವಿವಾಹವಾಗಿದ್ದರೆ ಹದಿನೆಂಟು ವರ್ಷ ತುಂಬುವುದರೊಳಗೆಯೇ ನಿರಾಕರಿಸುವುದೂ; ಕ್ರೂರವಾದ ಹಿಂಸೆಯೂ ಸೇರಿದೆ. ಕ್ರಿಶ್ಚಿಯನರು 1869ರ ಭಾರತ ವಿವಾಹ ವಿಚ್ಛೇದನ ಶಾಸನದ ಪ್ರಕಾರ ನಡೆದುಕೊಳ್ಳುತ್ತಾರೆ. ಹೆಂಗಸು ವ್ಯಭಿಚಾರ ಮಾಡಿದರೆ ಗಂಡನು ವಿಚ್ಛೇದನ ಪಡೆಯಬಹುದು. ಗಂಡನು ಬೇರೊಂದು ಧರ್ಮಕ್ಕೆ ಮತಾಂತರಗೊಂಡು ಬೇರೆ ಮದುವೆ ಮಾಡಿಕೊಂಡರೆ ಹೆಂಡತಿಯು ವಿವಾಹ ವಿಚ್ಛೇದನ ಪಡೆದುಕೊಳ್ಳಬಹುದು; ಅವನು ವ್ಯಭಿಚಾರ ಮಾಡಿದರೆ (ಸಮೀಪ ಬಂಧುಗಳೊಂದಿಗೆ ಹಾದರ, ಇಬ್ಬರು ಹೆಂಡಿರನ್ನು ಹೊಂದಿರುವುದು, ಹಿಂಸಾಕೃತ್ಯ ನಡೆಸುವುದು, ಅಗಲಿರುವುದು ಈ ಯಾವುದೇ ಕಾರಣವಿರಬಹುದು, ಅಥವಾ ಮಾನಭಂಗ, ಪುರುಷಮೈಥುನ, ವಿಷಯಲಂಪಟತೆ ಈ ದೋಷಯುತನಾಗಿದ್ದರೆ ಅವಳು ವಿಚ್ಛೇದನ ಪಡೆಯಬಹುದು. ಭಾರತದಲ್ಲಿ ಎಲ್ಲ ಸಮುದಾಯಗಳಲ್ಲೂ ವಿವಾಹ ವಿಚ್ಛೇದನವೆನ್ನುವುದು ಒಂದು ಕಳಂಕ, ಅದರಲ್ಲೂ ಹೆಂಗಸಿನ ಮೇಲೆ ಎರಗುವ ಕಳಂಕ. ಕೆಲವು ಹಿಂದೂ ಮೇಲುಜಾತಿಗಳಲ್ಲಿ ಇದು ಬಹಳ ಗಂಭೀರವಾದ ವಿಷಯವಾಗುತ್ತದೆ. ಏನೇ ಇರಲಿ, ಎಷ್ಟೇ ಕಳಂಕವೆನ್ನಲಿ, ವಿವಾಹ ವಿಚ್ಛೇದನವು ಅನೇಕ ಮಹಿಳೆಯರನ್ನು ಭಯಂಕರ ಬಂಧನಗಳಿಂದ ಬಿಡುಗಡೆ ಪಡೆಯಲು ಅವಕಾಶ ಮಾಡಿಕೊಟ್ಟಿದೆ.

ಸ್ತ್ರೀಯರು ತಮ್ಮ ಜೀವಿಕೆಯ ಹಕ್ಕನ್ನು ಎರಡು ಮೂಲಗಳಿಂದ ಪಡೆಯುತ್ತಾರೆ. ಮೊದಲನೆಯ ಸೂಕ್ತವಾದ ವೈಯಕ್ತಿಕ ಕಾನೂನು. ವ್ಯಕ್ತಿಯ ಸಮುದಾಯಕ್ಕೆ ಅನ್ವಯವಾಗುವಂತಹ ನಿಯಮ, ಎರಡನೆಯದು ಕ್ರಿಮಿನಲ್ ಪ್ರೊಸೀಜರ್ ಕೋಡು. ಮೊದಲು ಇದು ಶಾಸನವಾದದ್ದು 1898ರಲ್ಲಿ. ಆಮೇಲೆ ಪುನರುಕ್ತಗೊಂಡು 1974ರ ನೂತನ ಕ್ರಿಮಿನಲ್ ಪ್ರೊಸೀಜರ್ ಕೋಡ್ ಆಯಿತು. ಇದು ಧರ್ಮದ ವಿವಕ್ಷೆಯಿಲ್ಲದೆ ವೈಯಕ್ತಿಕ ಕಾನೂನು ಅನ್ವಯವಾಗುತ್ತಿದ್ದರೂ ಎಲ್ಲ ಭಾರತೀಯರಿಗೂ ಅನ್ವಯವಾಗುವಂಥದು. ಮೊದಲನೆಯ ಸಂಹಿತೆಯ ಪ್ರಕಾರ, ತನ್ನ ಅವಲಂಬಿಗಳ ಜೀವನೋಪಾಯವನ್ನು ಒದಗಿಸಲು ಅಲಕ್ಷಿಸಿದ ಮತ್ತು ನಿರಾಕರಿಸಿದ ಗಂಡ (ಮಕ್ಕಳಿಗೆ ಸಂಬಂಧಿಸಿದ್ದಾದರೆ ತಂದೆ) ನಿಂದ ಸೂಕ್ತ ಪರಿಹಾರ ಪಡೆಯಲು ಹೆಂಡತಿ (ಅಥವಾ ಮಕ್ಕಳು) ನ್ಯಾಯಾಲಯದ ನೆರವು ಕೋರಬಹುದು. ಹೊಸ ಸಂಹಿತೆ ಈ ಸೌಲಭ್ಯವನ್ನು ಬಡವರಾದ ತಂದೆ, ತಾಯಿಗಳಿಗೂ ವಿವಾಹ ವಿಚ್ಛೇದಿತ ಪತ್ನಿಯರಿಗೂ ವಿಸ್ತರಿಸುತ್ತದೆ. ಆದರೆ ರೂಢಿಯ ಪ್ರಕಾರ ಅಥವಾ ವೈಯಕ್ತಿಕ ಕಟ್ಟಳೆಯ ಪ್ರಕಾರ "ಒಂದು ಗೊತ್ತಾದ ಹಣವನ್ನು" ಪರಿಹಾರವಾಗಿ ಪಡೆದಿರುವ ವಿಚ್ಛೇದಿತ ಪತ್ನಿಯರು ಈ ಸಂಹಿತೆಯನ್ವಯ ಪರಿಹಾರ ಕೋರುವಂತಿಲ್ಲ. ಈ ಶಾಸನದ ಅವಕಾಶಗಳ ಪ್ರಕಾರ, ತನ್ನನ್ನು ಅವಲಂಬಿಸಿದವರಿಗೆ ಜೀವಿಕೆ ಒದಗಿಸುವುದು ಪುರುಷನ ಜವಾಬ್ದಾರಿ. ಆದರೆ ಪತ್ನಿಯು ಮಾಡುವ ಹಕ್ಕೊತ್ತಾಯವು ಪತಿಗೆ "ಸಾಕಷ್ಟು ವರಮಾನ" ಇರುವುದನ್ನು ಅವಲಂಬಿಸುತ್ತದೆ. ಸಂಹಿತೆಯಾಗದಿರುವ ಹಿಂದೂ ನಿಯಮಗಳು ಮತ್ತು ಹಿಂದೂ ದತ್ತಕ ಮತ್ತು

ಜೀವಿಕೆ ಶಾಸನ (1956) ಗಳ ಪ್ರಕಾರ ಪತ್ನಿಗೆ ನ್ಯಾಯಯುತವಾದ ಜೀವಿಕೆಗೆ ಸಾಲುವಷ್ಟು ಪರಿಹಾರ ಪಡೆಯುವ ಅರ್ಹತೆಯಿದೆ. ಆದರೆ ಅವಳ ಬೇಡಿಕೆಯು ಅರ್ಹವಾಗಿರಬೇಕು. ಸಂಹಿತೇತರ ಕಟ್ಟಳೆಗಳ ಪ್ರಕಾರ ಒಪ್ಪಿಗೆಯಾಗುವಂಥದಿರಬೇಕು. ಚಾರಿತ್ರ್ಯಶುದ್ಧಿಯನ್ನು ಅವಳು ಉಳಿಸಿಕೊಂಡಿರಬೇಕು. ನ್ಯೂಕ್ರಿಮಿನಲ್ ಪ್ರೊಸೀಜರ್ ಕೋಡ್ ಪ್ರಕಾರ ಅವಳು ನ್ಯಾಯಾಲಯಕ್ಕೆ ಪರಿಹಾರ ಕೋರುವುದಕ್ಕಾಗಿ ಹೋಗುವ ಸಂದರ್ಭದಲ್ಲಿ ವ್ಯಭಿಚಾರದಲ್ಲಿ ತೊಡಗಿರದಿದ್ದರೆ ತೀರಿತು, ಹಿಂದೆ ವ್ಯಭಿಚಾರಿಯಾಗಿದ್ದರೂ ಅವಳ ಹಕ್ಕು ಅಸಿಂಧುವಾಗ್ತುವುದಿಲ್ಲ. ಮುಸ್ಲಿಂ ಶಾಸನದ ಪ್ರಕಾರ, ವಿಚ್ಛೇದಿತ ಪತ್ನಿಗೆ ಕೇವಲ ಮೂರು ತಿಂಗಳ ಕಾಲ ಜೀವಿಕೆಯ ಪರಿಹಾರ ಪಡೆಯುವ ಹಕ್ಕಿದೆ. ಇದನ್ನು ಇದ್ದತ್ ಅವಧಿ ಎನ್ನುತ್ತಾರೆ. ಮೆಹರ್ ಮೊತ್ತವೂ ಅವಳಿಗೆ ಸಲ್ಲುತ್ತದೆ. ಆದರೆ ಮುಸ್ಲಿಂ ಮಹಿಳೆಯು ಕ್ರಿಮಿನಲ್ ಪ್ರೊಸೀಜರ್ ಕೋಡಿನ 125ನೆಯ ಅನುಚ್ಛೇದವನ್ನು ಉಲ್ಲೇಖಿಸಿ ಅದರನ್ವಯ ಪರಿಹಾರ ಕೇಳಬಹುದು. ಶಾಬಾನು ಎಂಬ ಅರವತ್ತೈದು ವರ್ಷ ವಯಸ್ಸಿನ ಗಂಡನನ್ನು ಅಗಲಿ ಆಮೇಲೆ ವಿಚ್ಛೇದನ ಹೊಂದಿದ ಮಹಿಳೆಯು ತನ್ನ ವಕೀಲ ಪತಿಯಿಂದ ಈ ಶಾಸನದ ಪ್ರಕಾರ ಪರಿಹಾರ ಕೋರಿದಳು. ಇತರ ಅನೇಕಾನೇಕ ಮುಸ್ಲಿಂ ಮಹಿಳೆಯರು ಇದೇ ವಿಧಾನದಿಂದ ಪರಿಹಾರ ಪಡೆದಿದ್ದರು. ಕೆಳನ್ಯಾಯಾಲಯದಲ್ಲಿ ಶಾಬಾನು ಗೆಲುವು ಪಡೆದಳು. ಆಮೇಲೆ ಸರ್ವೋಚ್ಚ ನ್ಯಾಯಾಲಯವೂ ಅವಳಿಗೆ ಪರಿಹಾರ ಸಲ್ಲಬೇಕೆಂದು ಆದೇಶಿಸಿ ತೀರ್ಪು ನೀಡಿತು. ಸುಪ್ರೀಂ ಕೋರ್ಟಿನ ತೀರ್ಪಿನಲ್ಲಿ ಸಾರ್ವತ್ರಿಕವಾಗಿ ಅನ್ವಯವಾಗುವ ಸಿವಿಲ್ ಕೋಡಿನ ಗುಣಾಂಶಗಳ ಬಗೆಗೆ ಕೆಲವು ಕಟುವಾದ ಹೇಳಿಕೆಗಳಿದ್ದುವು. ಈ ಹೇಳಿಕೆಗಳು ದೇಶದ ಅಲ್ಪಸಂಖ್ಯಾತ ಮುಸ್ಲಿಮರ ಸೂಕ್ಷ್ಮ ಭಾವನೆಗಳನ್ನು ಕೆಣಕಿತು. ಉಗ್ರವಾದ ಟೀಕೆ ಪ್ರತಿ ಟೀಕೆಗಳು ಕಾಣಿಸಿಕೊಂಡುವು. ಮೊದಲಿಗೆ "ಪ್ರಗತಿ ಪರವಾದ" ಈ ಐತಿಹಾಸಿಕ ತೀರ್ಪನ್ನು ಸ್ವಾಗತಿಸಿದ ಸರಕಾರವು ಆಮೇಲೆ ತನ್ನ ನಿಲುವನ್ನು ಬದಲಾಯಿಸಿಕೊಂಡು ಒಂದು ತಿದ್ದುಪಡಿಯನ್ನು ತಂದಿತು. ಇದರ ಪ್ರಕಾರ ಮುಸ್ಲಿಂ ವೈಯಕ್ತಿಕ ಕಟ್ಟಳೆಗಳಲ್ಲಿ ಮಧ್ಯಪ್ರವೇಶ ಮಾಡಲು ಯಾರಿಗೂ ಅವಕಾಶವಿಲ್ಲದ ಹಾಗಾಯಿತು. ಶಾಬಾನುವಿನ ವೈಭವ ಅಲ್ಪಕಾಲಿಕವಾಯಿತು. ದಿಢೀರನೆ ಅವಳು ಪ್ರಸಿದ್ಧಿ ಪಡೆದಳು. ಅವಳ ಸಂದರ್ಭವನ್ನು ಕುರಿತ ಭಾವೋದ್ವೇಗ ಪೂರಿತವಾದ ವಿವಾದಗಳಿಂದ ವಿಷಯವು ಸ್ಪಷ್ಟವಾಗಿ ಬೆಳಕಿಗೆ ಬಂದಿತು. ಅದೇ ಸಮಯಕ್ಕೆ ಅಲ್ಪ ಸಂಖ್ಯಾತರ ಭಾವನೆಗಳ ಶಕ್ತಿ ಎಷ್ಟಿರುತ್ತದೆಂಬುದೂ ನಿಚ್ಚಳವಾಯಿತು. ಕ್ರಿಶ್ಚಿಯನರಿಗೆ ಅನ್ವಯವಾಗುವ ಇಂಡಿಯನ್ ಡೈವೋರ್ಸ್ ಆಕ್ಟ್ (1869),ಮತ್ತು ಪಾರ್ಸಿ ವಿವಾಹ ಮತ್ತು ವಿಚ್ಛೇದನ ಶಾಸನ (1936) ಗಳಲ್ಲಿ ಕೆಲವು ಸಮಾನ ಅವಕಾಶಗಳಿವೆ. ಎರಡೂ ಪತ್ನಿಗೆ ಜೀವಿಕೆಯನ್ನು ಕೇಳುವ ಹಕ್ಕನ್ನು ಕೊಡುತ್ತವೆ. ವೈವಾಹಿಕ ಖಟ್ಲೆಗಳು ನ್ಯಾಯಾಲಯದಲ್ಲಿ ಇರುವ ಅವಧಿಯಲ್ಲಿ ಜೀವನಾಂಶವು ಪತಿಯ ನಿವ್ವಳ ವರಮಾನದ ಐದನೆಯ ಒಂದರಷ್ಟು. ಖಾಯಂ ಜೀವನಾಂಶವು ಪತಿಗಿರುವ ಪರಿಹಾರ ನೀಡುವ ಸಾಮರ್ಥ್ಯ, ಪತ್ನಿಗೆ ಇರುವ ಸ್ವಂತ ಆಸ್ತಿಪಾಸ್ತಿಗಳು ಮತ್ತು

ಎರಡೂ ಪಕ್ಷಗಳ ನಡವಳಿಕೆ ಇವುಗಳನ್ನು ಅವಲಂಬಿಸುತ್ತದೆ. ಪತ್ನಿಯು ಎಲ್ಲಿಯವರೆಗೆ ನಿಯಮ ಪ್ರಕಾರ ಚರಿತ್ರಶುದ್ಧಳಾಗಿರುತ್ತಾಳೋ, ಮರುವಿವಾಹ ವಾಗುವುದಿಲ್ಲವೋ ಅಲ್ಲಿಯವರೆಗೆ ಜೀವನಾಂಶವು ಚಾಲ್ತಿಯಲ್ಲಿರುತ್ತದೆ.

ಪ್ರಸ್ತುತ ಶಾಸನದನ್ವಯ, ವಿಧವೆಯರ ಮತ್ತು ವಿಚ್ಛೇದಿತ ಮಹಿಳೆಯರ ಪುನರ್ವಿವಾಹಕ್ಕೆ ಎಲ್ಲ ಸಮುದಾಯಗಳಲ್ಲೂ ಅವಕಾಶವಿದೆ. ಸಾಂಪ್ರದಾಯಿಕವಾದ ಹಿಂದೂ ಧರ್ಮಶಾಸ್ತ್ರಗಳು ದ್ವಿಜ ಜಾತಿಗಳಿಗೆ ವಿಧವಾ ಪುನರ್ವಿವಾಹವನ್ನು ಅನುಮತಿಸುವುದಿಲ್ಲ. ಹಿಂದೂ ಪುರುಷನು ಎಷ್ಟು ಸಾರಿ ಬೇಕಾದರೂ ಅದ್ಧೂರಿಯಾಗಿ ಕಟ್ಟಳೆಯ ಪ್ರಕಾರ ಮದುವೆ ಮಾಡಿಕೊಳ್ಳಬಹುದು, ಆದರೆ ಸ್ತ್ರೀಗೆ ಅದಕ್ಕೆ ಅವಕಾಶವಿರುವುದು ಜೀವನದಲ್ಲಿ ಒಂದೇ ಒಂದು ಸಾರಿ.

ಪಿತ್ರಾರ್ಜಿತ ಮತ್ತು ಉತ್ತರಾಧಿಕಾರಗಳನ್ನು ಕುರಿತ ಕಾನೂನುಗಳು ತುಂಬ ಜಟಿಲವಾಗಿವೆ. ಅವುಗಳನ್ನು ಅರ್ಥ ಮಾಡಿಕೊಳ್ಳಬೇಕಾದರೆ ಶಾಸ್ತ್ರಗ್ರಂಥಗಳು, ಧಾರ್ಮಿಕ ಸಂಹಿತೆಗಳು, ಆಧುನಿಕ ಶಾಸನ, ರೂಢಿಯ ಕಟ್ಟಳೆ ಮತ್ತು ಆಚರಣೆ ಇವು ಹಾಕಿರುವ ನಿಯಮ ನಿಬಂಧನೆಗಳ ದಿಗ್ಭ್ರಮೆಗೊಳಿಸುವ ಕಲಸುಮೆಲಸಿನಲ್ಲಿ ದಾರಿ ಮಾಡಿಕೊಂಡು ನುಗ್ಗಬೇಕು. ಎಲ್ಲರಿಗೂ ಸಮಾನವಾಗಿ ಅನ್ವಯವಾಗುವ ಅಪರಾಧ ಶಾಸನವಿದೆ. ಕರಾರುಗಳ ಬಗ್ಗೆ ಹೇಳುವ ಕಾನೂನುಗಳಿವೆ; ಆದರೂ ಕುಟುಂಬದ ವ್ಯವಹಾರವು ವೈಯಕ್ತಿಕ ಶಾಸನದ ವ್ಯಾಪ್ತಿಗೆ ಬರುತ್ತದೆ. ಅದೋ ಧರ್ಮದಿಂದ ಧರ್ಮಕ್ಕೆ ಬೇರೆಯಾಗುತ್ತದೆ. ಹಿಂದೂಗಳಲ್ಲಿ ಪಿತ್ರಾರ್ಜಿತ ಮತ್ತು ಉತ್ತರಾಧಿಕಾರ (ಬೌದ್ಧರು, ಜೈನರು ಮತ್ತು ಸಿಖ್ಖರೂ ಕೂಡಿದಂತೆ) ಮೂರು ಬೇರೆ ಬೇರೆ ನಿಯಮಾವಳಿಗೆ ಒಳಪಟ್ಟಿವೆ. ಒಂದು ಮಿತಾಕ್ಷರ ನ್ಯಾಯ. ಇದು ಬಹುವಾಗಿ ದೇಶದ ಉತ್ತರ, ಮಧ್ಯ, ಪಶ್ಚಿಮ ಮತ್ತು ದಕ್ಷಿಣ ಭಾಗಗಳಲ್ಲಿ ಚಾಲ್ತಿಯಲ್ಲಿದೆ. ಎರಡನೆಯದು ದಯಾಭಾಗ್ ಕಾನೂನು. ದೇಶದ ಪೂರ್ವಭಾಗದಲ್ಲಿ, ವಿಶೇಷವಾಗಿ ಬಂಗಾಳ, ಪೂರ್ವಬಿಹಾರ, ಒರಿಸ್ಸಾದ ಕೆಲವು ಭಾಗಗಳಲ್ಲಿ ಪ್ರಚಲಿತವಾಗಿದೆ. ಮೂರನೆಯದು ದಕ್ಷಿಣದ ಮಾತೃಗೋತ್ರ ಪ್ರಧಾನ ಸಮುದಾಯಗಳಲ್ಲಿ ಪ್ರಚುರವಾಗಿರುವ ಮರುಮಕ್ಕತ್ತಾಯಂ ಶಾಸನ. ಮಿತಾಕ್ಷರದ ಪ್ರಕಾರ ಅವಿಭಕ್ತ ಕುಟುಂಬದಲ್ಲಿ ಗಂಡುಮಗುವು ಹುಟ್ಟಿದೊಡನೆಯೇ ಪಿತ್ರಾರ್ಜಿತ ಆಸ್ತಿಪಾಸ್ತಿಗಳಿಗೆ ವಾರಸುದಾರನಾಗುತ್ತದೆ. ಕಾನೂನಿನ ಪರಿಭಾಷೆಯಲ್ಲಿ ಸಹಭಾಗಿತ್ವ ಪಡೆಯುತ್ತದೆ. ದಯಾಭಾಗ ಶಾಸನದಲ್ಲಿ ಈ ಸಹಭಾಗಿತ್ವ ಕಲ್ಪನೆ – ಪಿತ್ರಾರ್ಜಿತದಲ್ಲಿ ಗಂಡುಮಗುವಿನ ಹುಟ್ಟಿನಿಂದಲೇ ಬರುವ ಅಧಿಕಾರ – ಇರಲಿಲ್ಲ. ಈ ಎರಡೂ ಕಾನೂನುಗಳಲ್ಲಿ ಹೆಣ್ಣಿನ ಸ್ಥಾನ ಪರಾವಲಂಬನೆಯದು. ಆಸ್ತಿ ಪಾಸ್ತಿಗಳ ಮೇಲೆ ಹಕ್ಕು, ಅವಳು ಅನುಭವಿಸುತ್ತಿದ್ದ ಸಂದರ್ಭಗಳಲ್ಲಿ ಜೀವಿಕೆಯ ಹಿತದೃಷ್ಟಿಯದಾಗಿತ್ತೇ ಹೊರತು ಪೂರ್ಣ ಒಡೆತನವಾಗಿರಲಿಲ್ಲ. ಮರುಮಕ್ಕತ್ತಾಯಂ ಶಾಸನವು ಪಿತ್ರಾರ್ಜಿತವನ್ನಾಗಲಿ, ವಾರಸುದಾರಿಕೆಯನ್ನಾಗಲಿ ಪರಿಗಣಿಸುತ್ತಿದ್ದುದು ಸ್ತ್ರೀ ಪೀಳಿಗೆಯಿಂದ. ಆಸ್ತಿಭಾಗವನ್ನು ಹೆಣ್ಣು ಮಕ್ಕಳಿಗೂ ಗಂಡು ಮಕ್ಕಳಿಗೂ ಕೊಟ್ಟಿದ್ದಿತು. ಆದಿವಾಸಿ ಬುಡಕಟ್ಟುಗಳು ತಮ್ಮ ರೂಢಿಗತ ಕಟ್ಟಳೆಯನ್ನೇ ಪಾಲಿಸುವರು.

1956ರಲ್ಲಿ ವಿಪರೀತ ವಿರೋಧದೊಂದಿಗೆ ಜಾರಿಗೆ ಬಂದ ಹಿಂದೂ ವಾರಸಾ ಶಾಸನ ಕೆಲವೊಂದು ಕ್ರಾಂತಿಕಾರಕ ಪರಿವರ್ತನೆಗಳನ್ನು ತಂದಿತು. ಮಿತಾಕ್ಷರ ಮತ್ತು ದಯಾಭಾಗ ಪದ್ಧತಿಗಳನ್ನು ಅದು ರದ್ದುಪಡಿಸಿತು. ಮರುಮಕ್ಕತ್ತಾಯಂ ಪದ್ಧತಿಯನ್ನನುಸರಿಸುತ್ತಿದ್ದ ಸಮುದಾಯಗಳಿಗೂ ವಿಸ್ತರಿಸಿತು. ಮಾತೃಗೋತ್ರ ಪ್ರಧಾನ ಪದ್ಧತಿಗೆ ಸೂಕ್ತವಾದ ಒಂದಿಷ್ಟು ಬದಲಾವಣೆಗಳಿರಬೇಕೆಂಬುದನ್ನು ಒಪ್ಪಲಾಯಿತು. ಈ ಶಾಸನದಲ್ಲಿ ಅಳವಡಿಸಿದ ಅತ್ಯಂತ ಕ್ರಾಂತಿಕಾರಕ ಬದಲಾವಣೆಯೆಂದರೆ, ಸ್ತ್ರೀಯರಿಗೂ ಪುರುಷರಷ್ಟೇ ಸಮಾನವಾದ ಆಸ್ತಿ ಹಕ್ಕಿದೆ ಎಂದು ಘೋಷಿಸಿದುದು. ಒಬ್ಬ ಪುರುಷನ ಆಸ್ತಿಗೆ ಹೀಗೆ ಸಮಾನ ವಾರಸುದಾರಿಕೆಗೆ ಅವನ ವಿಧವೆ ಪತ್ನಿ, ತಾಯಿ, ಮಗ, ಮಗಳು, ಮೊದಲೇ ಸತ್ತುಹೋಗಿರುವ ಮಗನ ಹೆಂಡತಿ, ಅವನ ಹೆಣ್ಣುಮಕ್ಕಳು ಮತ್ತು ಗಂಡುಮಕ್ಕಳು ಸೇರುತ್ತಾರೆ. ಹೆಂಗಸರಿಗೂ ಸಮಾನ ಭಾಗವುಂಟು. ಅವರಿಗೆ ಜೀವನಾಂಶ ಮಾತ್ರ ಅಲ್ಲ, ಆಸ್ತಿಯ ಒಂದು ಸಮಭಾಗಕ್ಕೆ ಅವರು ಪೂರ್ಣ ಒಡತಿಯಾಗುತ್ತಾರೆ. ಆದರೆ ಇನ್ನೂ ಈ ಅಪೇಕ್ಷಿತ ಸರ್ವಸಮಾನತೆ ಕಂಡುಬರುತ್ತಿಲ್ಲ. ಅನೇಕ ಬಗೆಯ ಹೊಂದಾಣಿಕೆಗಳನ್ನು ಮಾಡಿಕೊಂಡು ಈ ಶಾಸನವನ್ನು ರೂಪಿಸಲಾಯಿತು. ಅವುಗಳಲ್ಲಿ ಮುಖ್ಯವಾದುದು ಮಿತಾಕ್ಷರ ಕಟ್ಟಳೆಯನ್ನು ಉಳಿಸಿಕೊಂಡದ್ದು. ಈ ಸಹಯೋಗಕ್ಕೆ ಸ್ತ್ರೀಯರು ಸದಸ್ಯರಾಗುವಂತಿರಲಿಲ್ಲ. ಇಂತಹ ಒಬ್ಬ ದಾಯಾದಿಯು ಸತ್ತು ಹೋದನೆಂದಿಟ್ಟುಕೊಳ್ಳೋಣ. ಅವನು ಬದುಕಿದ್ದಾಗ ಪಾಲು ಮಾಡಿದ್ದರೆ ಹೇಗೋ ಹಾಗೆ ಆಸ್ತಿಯನ್ನು ಪಾಲು ಮಾಡಿ ಆಮೇಲೆ ಅವನ ಭಾಗಕ್ಕೆ ಬರುವುದನ್ನು ಅವನ ವಾರಸುದಾರರಿಗೆ ಹಂಚಲಾಗುತ್ತದೆ. ಗುತ್ತಿಗೆ ಹಕ್ಕುಗಳನ್ನು ಸ್ತ್ರೀ ವಾರಸುದಾರರು ಇನ್ನೊಬ್ಬರಿಗೆ ವರ್ಗಾಯಿಸಿಕೊಡುವಂತಿಲ್ಲ. ಮುಸ್ಲಿಮರಲ್ಲಿ ಷರಿಯಾ ನಿಯಮದ ಪ್ರಕಾರ ಒಬ್ಬ ಉತ್ತರಾಧಿಕಾರಿಣಿಯು ಅದರ ಅರ್ಧಭಾಗವನ್ನು ಮಾತ್ರ ಪಡೆಯುತ್ತಾಳೆ. ಕ್ರಿಶ್ಚಿಯನರಲ್ಲಿ ಈ ಉತ್ತರಾಧಿಕಾರದ ಹಂಚಿಕೆಯ ಬಗೆಗೆ ವ್ಯತ್ಯಾಸಗಳಿವೆ. ದಕ್ಷಿಣ ಭಾರತದ ಕೆಲವು ಕ್ರಿಶ್ಚಿಯನ್ ಸಮುದಾಯಗಳಲ್ಲಿ ಮಹಿಳೆಯ ಪಾಲು ತಂದೆಯ ಆಸ್ತಿಯ ನಾಲ್ಕನೇ ಒಂದು ಭಾಗ ಅಥವಾ 5000 ರೂಪಾಯಿ, ಯಾವುದು ಕಡಮೆಯೋ ಅದು. ಆದರೆ ಕುಟುಂಬದ ಕಟ್ಟಳೆಯು ಅದನ್ನು ಪರಿಪಾಲಿಸುವುದಿಲ್ಲ. ಇಲ್ಲೆಲ್ಲಾ ನ್ಯಾಯಾಂಗ ಪರಿಹಾರ ಸುಲಭವಲ್ಲ. ಅದು ತುಂಬ ದುಬಾರಿಯಾಗುತ್ತದೆ ಮತ್ತು ಇತ್ಯರ್ಥವಾಗಲು ಬಹಳ ಕಾಲ ಹಿಡಿಯುತ್ತದೆ. ಈ ಕಾರಣದಿಂದಾಗಿ ಮಹಿಳೆಯರು ತಾವು ದುರ್ಬಲರೆಂದುಕೊಳ್ಳುತ್ತಾರೆ.

ಆಧುನಿಕ ಭಾರತದಲ್ಲಿ, ವಿವಾಹಕ್ಕೆ ಸಂಬಂಧಿಸಿದ ಹಾಗೆ, ಪ್ರದೇಶದ ಧರ್ಮ ಪಂಥ ಪಂಗಡ ಮತ್ತು ಜಾತಿಗಳ ತಡೆಗೋಡೆಗಳು ಮುರಿದು ಬೀಳುತ್ತಿರುವುದಕ್ಕೆ ಆಧಾರ ಸಾಕಷ್ಟಿದೆ. ಬಾಳ ಜೊತೆಗಾರರನ್ನು ಆರಿಸಿಕೊಳ್ಳಲು ಹೆಚ್ಚಿನ ಸ್ವಾತಂತ್ರ್ಯ ಇವತ್ತು ಇದೆ. ಮದುವೆಯ ವಯಸ್ಸೂ ಮೇಲೆ ಹೋಗುತ್ತಿದೆ. ಆದರೆ ಅದೇ ಸಮಯಕ್ಕೆ ಅನಾವಶ್ಯಕ ಅದ್ದೂರಿ, ಆಡಂಬರ, ವರದಕ್ಷಿಣೆಯ ಒಳದಾರಿಗಳಿಗೆ ವಿವಾಹ ಪದ್ಧತಿ ಹಿಂದಿರುಗುತ್ತಿದೆ.

**ಸಂಬಂಧ**

ರಕ್ತಸಂಬಂಧದಿಂದಲೋ (ಪಾರಿಭಾಷಿಕರಾಗಿ ಸಗೋತ್ರ ಎನ್ನುತ್ತಾರೆ), ವಿವಾಹದ ಮೂಲಕವೋ (ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರಗಳ ಭಾಷೆಯಲ್ಲಿ ವಿವಾಹಸಂಬಂಧ) ಸಂಬಂಧವನ್ನು ಪರಿಗಣಿಸಲಾಗುತ್ತದೆ. ಬಂಧುಗಳದೇ ಒಂದು ವರ್ಗ, ಅವರಿಗೆ ವಿಶಿಷ್ಟ ಸ್ಥಾನಮಾನ. ಮೊದಲೇ ನೋಡಿರುವಂತೆ ಅವರನ್ನು ಹೇಗೆ ನಡೆಸಿಕೊಳ್ಳಬೇಕು, ಅವರನ್ನು ಕುರಿತ ನಡವಳಿಕೆ ಹೇಗಿರಬೇಕು ಎಂಬ ಬಗೆಗೆ ವಿಸ್ತಾರವಾದ ನಿಯಮಾವಳಿಯಿದೆ. ಇವು ರಕ್ಷಣೆ, ವಿಶ್ವಾಸ, ಎಚ್ಚರ ಮತ್ತು ಕಾಳಜಿ, ಆತ್ಮೀಯತೆ, ನಿವಾರಣೆ, (ದೈಹಿಕ ಮಾತು ಮತ್ತು ನೋಟಗಳಿಂದ ಸಂಪರ್ಕಿಸುವುದರ) ಗೌರವ, ಮರ್ಯಾದೆ, ಮಧ್ಯಪ್ರದೇಶ, ವಿಧೇಯತೆ ಮುಂತಾದುವನ್ನು ಒಳಗೊಳ್ಳುತ್ತವೆ. ಬಂಧುತ್ವವು ಮುಖ್ಯವಾದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪಾತ್ರಗಳನ್ನು ಕೂಡ ವಹಿಸುತ್ತದೆ. ಆಧುನಿಕ ಔದ್ಯಮಿಕ ಸಮಾಜದಲ್ಲಿ ಬಂಧುತ್ವದ ಕೇಂದ್ರವು ಸವೆದು ಹೋಗಿದೆ ಎಂದು ಹೇಳುವ ಮಾತು, ಹೆಚ್ಚೆಂದರೆ ಭಾಗಶಃ ಸತ್ಯ. ಬಂಧುತ್ವದ ಶ್ರೇಣಿಯ ಬೆಸುಗೆ ಮೊದಲು ಇರುತ್ತಿದ್ದಷ್ಟು ಪ್ರಮುಖವಾಗಿಲ್ಲ, ಸರಿ. ಆದರೆ ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ಮುಖ್ಯವಾದ ಅವಲಂಬಕ ಮತ್ತು ತಿದ್ದಾಣಿಕೆಯ ಪಾತ್ರವನ್ನು ವಹಿಸುತ್ತವೆಂಬುದನ್ನು ಅಲ್ಲಗಳೆಯುವಂತಿಲ್ಲ.

ವಂಶ, ಮನೆ, ಪಿತ್ರಾರ್ಜಿತಗಳ ವಿಷಯವಾಗಿ ಈಗಾಗಲೆ ಕುಟುಂಬದ ಬಗೆಗೆ ಹೇಳುವ ಸಂದರ್ಭದಲ್ಲಿ ಚರ್ಚಿಸಲಾಗಿದೆ. ಅವುಗಳನ್ನು ಇನ್ನೂ ವಿಸ್ತರಿಸಲು ಹೋಗುವುದೆಂದರೆ ಅದು ಶ್ರಮದಾಯಕ ಮತ್ತು ಕೇವಲ ಶೈಕ್ಷಣಿಕ ಆಸಕ್ತಿಯುಳ್ಳದ್ದಾಗುತ್ತದೆ. ಆದರೂ ಬಾಂಧವ್ಯದ ಸ್ಥೂಲ ರೂಪರೇಖೆಗಳು ಉತ್ತರ ಮತ್ತು ದಕ್ಷಿಣ ಭಾರತಗಳಲ್ಲಿ ಹೇಗಿವೆ ಎಂಬುದನ್ನು ನೋಡುವುದು ಅಗತ್ಯ.

. ಉತ್ತರ ಭಾರತದಲ್ಲಿ ಮೂಲ ಬಾಂಧವ್ಯ ಪಿತೃಗೋತ್ರ ಪ್ರಧಾನವಾದದ್ದು. ಕುಲ ವಂಶ (ಸಾಮಾನ್ಯ ಜನರು ಈ ಎರಡು ಶಬ್ದಗಳ ನಡುವೆ ವ್ಯತ್ಯಾಸ ಕಲ್ಪಿಸುವುದಿಲ್ಲ), ಗೋತ್ರ ಮತ್ತು ಜಾತಿ (ಜಾತಿಭಾಯಿ ಅಥವಾ ಜಾತಿಸೋದರರು ಎಂದು ಹೇಳುವ ಅರ್ಥದಲ್ಲಿ). ಮೊದಲಿನೆರಡು ಭಿನ್ನಗೋತ್ರ ವಿವಾಹ ಪದ್ಧತಿಯವು, ಆದರೆ ಜಾತಿ ಸ್ವಗೋತ್ರ ವಿವಾಹದ್ದು. ವ್ಯಕ್ತಿಯು ತನ್ನ ತಂದೆ, ತಾಯಿ, ತಂದೆಯ ತಾಯಿ ಮತ್ತು ತಾಯಿಯ ತಾಯಿ ಇವರ ಗೋತ್ರದಲ್ಲಿ ವಿವಾಹ ಮಾಡಿಕೊಳ್ಳಕೂಡದು. ವ್ಯಕ್ತಿತ್ವ, ಅಂತಸ್ತು ಮತ್ತು ಆಸ್ತಿಪಾಸ್ತಿ ಇವು ಪುರುಷಸರಣಿಯಲ್ಲೇ ಮುಂದುವರಿಯುತ್ತವೆ. ವಂಶಕ್ಕೆ ಸೇರಿದವರು ಧಾರ್ಮಿಕ ಆಚರಣೆಗಳಲ್ಲಿ ಸಹಕರಿಸುತ್ತಾರೆ. ಆದರಲ್ಲೂ ಕೆಲವು ಪ್ರಮುಖ ಆರ್ಥಿಕ ಚಟುವಟಿಕೆಗಳಲ್ಲಿ, ಆದರೆ ಈ ವರ್ಗಗಳಿಗೆ ಸೇರಿದ ಇನ್ನೂ ಒಂದು ಮುಖ್ಯ ಲಕ್ಷಣ ಘರ್ಷಣೆಗಳು, ಜಗಳಗಳು. ಇವು ಪೀಳಿಗೆಯಿಂದ ಪೀಳಿಗೆಗೆ ಮುಂದುವರಿಯುವುದೂ ಉಂಟು. ಕೆಲವು ನಿರ್ದಿಷ್ಟ ಸಂದರ್ಭಗಳಲ್ಲಿ ಬಂಧು ಬಾಂಧವರೊಂದಿಗೆ ಉಡುಗೊರೆಗಳನ್ನು ವಿನಿಮಯ ಮಾಡುವುದುಂಟು. ಆದರೆ ಈ

ವಿಷಯದಲ್ಲಿ ಸ್ಥಳೀಯ, ಪ್ರಾದೇಶಿಕ ಮತ್ತು ಜಾತಿ ವ್ಯತ್ಯಾಸಗಳಿರುತ್ತವೆಯೆಂದರೆ ಈ ಸಂಕ್ಷೇಪ ನಿರೂಪಣೆಯಲ್ಲಿ ಅವುಗಳನ್ನು ಪಟ್ಟಿಮಾಡುವುದೂ ಸಾಧ್ಯವಿಲ್ಲ. ಇಲ್ಲಿ ಬಹುಮುಖ್ಯವಾದೊಂದು ಅಂಶವೆಂದರೆ, ಅತ್ಯಂತ ನಿಕಟ ಸಂಬಂಧವಿರುವವರ ನಡುವೆ ವೈವಾಹಿಕ ಸಂಬಂಧ ನಿಷಿದ್ಧವೆನ್ನುವುದು. ಕೆಲವು ಕಡೆ ಗ್ರಾಮದ/ಪ್ರಾದೇಶಿಕ ಭಿನ್ನಗೋತ್ರ ವಿವಾಹ ನಿಯಮಗಳು ವಧುವನ್ನು, ವರನನ್ನು ಇನ್ನೂ ದೂರಕ್ಕೆ ಅಗಲಿಸುತ್ತವೆ. ಹೆಣ್ಣು ಮಗಳು ಮತ್ತು ಸೊಸೆ ಇವರ ಪಾತ್ರಗಳನ್ನು ಅತ್ಯಂತ ಕರಾರುವಾಕ್ಕಾಗಿ ಬೇರ್ಪಡಿಸಿ ನಿರೂಪಿಸಲಾಗಿದೆ. ದಕ್ಷಿಣ ಭಾರತದಲ್ಲಿ ಸಾಮಾನ್ಯ ಲಕ್ಷಣಗಳು ಇವೇ ಆಗಿರುತ್ತವೆ, ಕೆಲವು ಅಪವಾದಗಳ ಹೊರತು. ಇಲ್ಲಿ ಪಿತೃಗೋತ್ರ ಪ್ರಾಧಾನ್ಯವು ಕೆಲವು ಸಮುದಾಯಗಳಲ್ಲಿ ಇರುತ್ತವಾದರೂ ಮಾತೃಗೋತ್ರ ಪ್ರಾಧಾನ್ಯವೇ ಹೆಚ್ಚು. ಈ ಎರಡನೆಯದರಲ್ಲಿ ವ್ಯಕ್ತಿಯ ತಂದೆಗಿಂತ ಮಿಗಿಲಾಗಿ ತಾಯಿಯ ಸಹೋದರನು ಅಧಿಕಾರ ಚಲಾಯಿಸುತ್ತಾನೆ. ಹಲವು ಸಮುದಾಯಗಳಲ್ಲಿ ನಾವು ಈಗಾಗಲೆ ನೋಡಿರುವ ಹಾಗೆ, ಕೆಲವು ಆತ್ಮೀಯ ಬಾಂಧವ್ಯರಲ್ಲಿ ವೈವಾಹಿಕ ಸಂಬಂಧ ಬೆಳೆಸುತ್ತಾರೆ. ದಾಯಾದಿಗಳು ಅಥವಾ ಸೋದರಮಾವ, ನಾದಿನಿ ಆಗಬಹುದು. ಗಂಡಿನ ಅಕ್ಕನ ಮಗಳಾಗಬಹುದು. ಈ ಸಂದರ್ಭದಲ್ಲಿ ಮದುವೆಯಾಗಿ ಬರುವ ಹೆಣ್ಣಿನ ಪರಿಚಯ ಗಂಡಿನ ಮನೆಯವರಿಗೆ ಚೆನ್ನಾಗಿಯೇ ಇರುತ್ತದೆ. ಹಾಗಾಗಿ, ಉತ್ತರ ಭಾರತದಲ್ಲಿ ಕನ್ಯಾ ಪಿತೃಗಳಿಗಿಂತ ಕನ್ಯಾ ಪರಿಗ್ರಹಿಗಳು ಮೇಲುಗೈ ಆಗಿದ್ದರೆ, ದಕ್ಷಿಣದಲ್ಲಿ ಎರಡೂ ಪಕ್ಷದ ನಡುವೆ ತಾರತಮ್ಯವಿಲ್ಲ. ಈ ಬಗೆಯ ಸಂಬಂಧಗಳಿಂದ ನಿಜವಾಗಿಯೂ ಕೆಲವು ಪ್ರಯೋಜನಗಳುಂಟು. ಆಸ್ತಿಪಾಸ್ತಿ ಏನಿದ್ದರೂ ಈ ನಿಕಟ ಬಾಂಧವ್ಯದಲ್ಲೇ ಅಲ್ಲಲ್ಲೇ ಸುತ್ತಾಡುತ್ತಿರುತ್ತದೆಯೇ ಹೊರತು ಹೊರಗೆ ಹೋಗುವುದಿಲ್ಲ. ಅದಷ್ಟೇ ಅಲ್ಲ ಪೂರ್ವ ಪರಿಚಿತರಾದ್ದರಿಂದ ಮದುವೆಯಾಗಿ ಬಂದ ಹೆಣ್ಣಿಗೆ ಗಂಡನ ಮನೆಯಲ್ಲಿ ಉತ್ತರ ಭಾರತದ ಅಪರಿಚಿತ ವಧುಗಳಿಗಿಂತ ಉತ್ತಮ ವ್ಯವಹರಣೆ ಲಭ್ಯವಾಗುತ್ತದೆ.

ಈಗ ಕೊನೆಯಲ್ಲಿ ಹೊರಗಿನವರನ್ನು ದಿಗ್ಭ್ರಮೆಗೊಳಿಸುವಂತಹ ಕೆಲವು ವಿಶಿಷ್ಟ ಸಂದರ್ಭಗಳನ್ನು ಪರಿಶೀಲಿಸಬಹುದು.

ವಂಶ, ಪಿತ್ರಾರ್ಜಿತ, ವಾರಸುದಾರಿಕೆ ಇವುಗಳಲ್ಲಿ, ಮೊದಲೇ ತಿಳಿಸಿರುವ ಹಾಗೆ ಮೇಘಾಲಯದ ಖಾಸಿ ಜನರು ಮಾತೃಗೋತ್ರ ಪ್ರಧಾನ ಪದ್ಧತಿಯವರು. ಅವರು ಮಾತೃಸಂಬಂಧವಾದ ವಸತಿಯಲ್ಲೇ ವಾಸಿಸುತ್ತಾರೆ. ವಾರಸುದಾರಿಕೆಯಲ್ಲಿ ಅತ್ಯಂತ ಕಿರಿಯ ಮಗಳು *ಖುದ್ದೂಹ್* ವಿಶೇಷ ವ್ಯಕ್ತಿಯಾಗಿರುತ್ತಾಳೆ. ಅವಳೇ ನಿಜವಾದ ವಾರಸುದಾರಿಣಿ. ಇತರ ಹೆಣ್ಣುಮಕ್ಕಳು ಮದುವೆಯಾಗಿ ಒಂದೋ, ಎರಡೋ ಮಕ್ಕಳಾದೊಡನೆ ಪ್ರತ್ಯೇಕ ಮನೆಯನ್ನು ಸ್ಥಾಪಿಸಿಕೊಳ್ಳಲು ಹೊರಟುಹೋದರೆ, ಕಿರಿಯ ಹೆಣ್ಣುಮಗಳು ಮಾತ್ರ ತಾಯಿಯ ಜೊತೆಯಲ್ಲೇ ತನ್ನ ಗಂಡ ಮತ್ತು ಮಕ್ಕಳೊಂದಿಗೆ ಉಳಿದುಕೊಳ್ಳುತ್ತಾಳೆ. *ಲಿಂಗ್* ಮನೆಯ ಎಲ್ಲ ಧಾರ್ಮಿಕ ಆಚರಣೆಗಳ ಜವಾಬ್ದಾರಿ ಹೊತ್ತಿರುತ್ತಾಳೆ. ಜಮೀನಿಗೆ ಸಂಬಂಧಿಸಿದಂತೆ ಅವಳದೊಂದು ವಿಶೇಷವಾದ ಸ್ಥಾನ. ಅವಳ ಪತಿಯು ತಾನು ಕಟ್ಟುವ ಮನೆಯ

ಒಡೆಯನಾಗಿರುತ್ತಾನೆ.

ಗ್ಯಾರೋ ಜನರಲ್ಲಿ ಕುಟುಂಬವನ್ನು ನೋಕ್ ಎನ್ನುತ್ತಾರೆ. ಮನೆತನದ ಆಸ್ತಿಗೆ ಹಕ್ಕುದಾರಳಾಗಲು ಮತ್ತು ಅದನ್ನು ಮುಂದುವರಿಸಲು ಆಯ್ಕೆಯಾಗುವ ಮಗಳು ನೋಕ್ಮಾ ಎನಿಸುತ್ತಾಳೆ. ಅವಳು ತನ್ನ ತಂದೆಯ ಮನೆಯ ಕಡೆಯಿಂದ ಯಾರನ್ನಾದರೂ ಮದುವೆಯಾಗಬೇಕು. ಗಂಡನನ್ನು ನೋಕ್ರಂ ಎನ್ನುತ್ತಾರೆ. ಮಾವನು ಸತ್ತುಹೋದ ಮೇಲೆ ತನ್ನ ಹೆಂಡತಿಯ ನೋಕ್ ಅನ್ನು ನೋಡಿಕೊಳ್ಳುವ ಹಾಗೂ ಅದಕ್ಕೆ ಮುಖ್ಯಸ್ಥನಾಗಿ ಉಳಿಯುವ ಹಕ್ಕನ್ನು ಪಡೆಯುತ್ತಾನೆ. ಆದರೆ ಅಷ್ಟು ಮಾಡುವುದಕ್ಕಿಂತ ಮೊದಲು ಅವನು ತನ್ನ ಹೆಂಡತಿಯ ತಾಯಿಯನ್ನು ಮದುವೆಯಾಗಬೇಕು. ವಾಸ್ತವವಾಗಿ ಇದು ಮೂಲತಃ ಆರ್ಥಿಕವಾದ ಒಂದು ವ್ಯವಸ್ಥೆ. ಈ ತೆರನಾದ, ಪುರುಷನಿಗೂ ಅವನ ಪತ್ನಿಯ ತಾಯಿಗೂ ನಡೆಯುವ ವಿವಾಹವು ಸಫಲವಾಗುವುದೆ ಎಂಬುದು ಚರ್ಚಾಸ್ಪದವಾದ ವಿಚಾರ. ಆದರೆ ಕೆಲವು ಮಾನವಶಾಸ್ತ್ರಜ್ಞರು ಅವರ ನಡುವೆ ಲೈಂಗಿಕ ಸಂಪರ್ಕವೂ ನಡೆಯುತ್ತದೆ ಎಂದು ಒತ್ತಿ ಹೇಳುತ್ತಾರೆ.

ಕೇರಳದಲ್ಲಿ ಹಿಂದೆ ಇದ್ದಂತೆ, ಲಕ್ಷದ್ವೀಪಗಳಲ್ಲಿ ಈಗಲೂ ಇರುವಂತೆ ಗಂಡನು ಬೇರೆ ಕಡೆಯಿದ್ದು ಹೆಂಡತಿಯ ಮನೆಗೆ ಆಗಾಗ ಭೇಟಿ ನೀಡುವ ಪದ್ಧತಿ ಹೊರಗಿನವರಿಗೆ ವಿಚಿತ್ರವಾಗಿ ಕಾಣಿಸಿದರೂ ಅದು ವಾಸ್ತವವಾಗಿ ನಡೆದಿದೆ, ಇಂದಿಗೂ ನಡೆಯುತ್ತಿದೆ. ನಾಯರ್ ಹೆಂಗಸರ ಮನೆಗೆ ನಂಬೂದಿರಿ ಅಥವಾ ನಾಯರ್ ಗಂಡಂದಿರು ಭೇಟಿ ಕೊಡಬಹುದು. ಬಹಳ ದೂರದಲ್ಲಿರುವುದರಿಂದ ನಾಯರ್ ಗಂಡಂದಿರು ಪ್ರತಿ ರಾತ್ರಿಯೂ ತಮ್ಮ ಹೆಂಡಿರ ಬಳಿಗೆ ಬರುವುದು ಸಾಧ್ಯವಾಗದೇ ಇರಬಹುದು, ಆದರೆ ನಂಬೂದಿರಿಗಳಿಗೆ ವಿಶೇಷ ಸೌಲಭ್ಯವಿದೆ. ಭೂಮಿಗೆ ಅಭಾವ ಇಲ್ಲದಿದ್ದಾಗ ನಾಯರ್ *ತಾರವಾಡದ* ಸಮೀಪದಲ್ಲಿ ಅವರಿಗಾಗಿ ಒಂದು ಮಠಾಮ (ವಸತಿ)ವನ್ನು, ಸಾಧ್ಯವಾದರೆ ಒಂದು ಕೊಳ ಅಥವಾ ಬಾವಿಯ ಪಕ್ಕದಲ್ಲಿ ಕಟ್ಟುತ್ತಿದ್ದರು. ದಿನವಿಡೀ ಧಾರ್ಮಿಕಾಚರಣೆಗಳಿಂದಾಗಿ ಪರಿಶುದ್ಧತೆ ಕಾಪಾಡಿಕೊಂಡಿರಬೇಕಾಗಿದ್ದ ನಂಬೂದಿರಿಯು ಹಗಲಿನಲ್ಲಿ ತನ್ನ ನಾಯರ್ ಪತ್ನಿ ಅಥವಾ ಮಕ್ಕಳೊಂದಿಗೆ ಊಟ ಮಾಡುವಂತಿರಲಿಲ್ಲ, ಯಾವುದೇ ದೈಹಿಕ ಸಂಪರ್ಕ ಮಾಡುವಂತಿರಲಿಲ್ಲ. ರಾತ್ರಿಯ ಹೊತ್ತು ಮಕ್ಕಳನ್ನು ಅವನು ಮುದ್ದಿಸುತ್ತಿದ್ದನು. ಹೆಂಡತಿಯೊಂದಿಗೆ ಆತ್ಮೀಯವಾಗಿರುತ್ತಿದ್ದನು. ಈ ಬಗೆಯ ಇಬ್ಬೀಡಿನ ಪದ್ಧತಿಯು ಇಂದಿಗೂ ಲಕ್ಷದ್ವೀಪದಲ್ಲಿ ಚಾಲ್ತಿಯಲ್ಲಿದೆ. ಈ ದ್ವೀಪಸಮೂಹದಲ್ಲಿ ಒಂದಾದ ಕಲ್ಪೇನಿ ದ್ವೀಪದಲ್ಲಿ ಶೇ. 76ರಷ್ಟು ಸಂಪರ್ಕಗಳು ಇಂತಹ ರೀತಿಯವು. ದ್ವೀಪ ಚಿಕ್ಕದು, ವಸತಿಗಳ ನಡುವೆ ದೂರ ಹೆಚ್ಚಾಗಿಲ್ಲ, ಹಾಗಾಗಿ ಈ ಪದ್ಧತಿ ಚೆನ್ನಾಗೇ ನಡೆದುಬಂದಿದೆ.

# ಗ್ರಾಮ ಮತ್ತು ನಗರ ಸಂದರ್ಭಗಳು

ಸಮಾಜ ರಚನೆಯ ಮುಖ್ಯ ಘಟಕಗಳಾದ ಜಾತಿ, ಕುಲ ಅಥವಾ ಧಾರ್ಮಿಕ ಸಮುದಾಯ ಹಾಗೂ ಕುಟುಂಬ ಮತ್ತು ಬಂಧುವರ್ಗ ಇವು ಪ್ರತ್ಯೇಕವಾಗಿ ಕೆಲಸ ಮಾಡುವುದಿಲ್ಲ. ಹಳ್ಳಿ ಅಥವಾ ಗ್ರಾಮವು ಸಹಕಾರದ ಹಾಗೆಯೇ ಘರ್ಷಣೆಯ ಕ್ಷೇತ್ರವೂ ಆಗಿರುತ್ತದೆ. ವ್ಯಾಜ್ಯ ಪರಿಹಾರಕ್ಕಾಗಿ ತಲೆ ತಲಾಂತರದಿಂದ ಬಂದ ಸಾಂಪ್ರದಾಯಿಕವಾದ ವಿಧಾನ ಅಲ್ಲಿ ರೂಪುಗೊಂಡಿರುತ್ತದೆ. ಇದು ಒಂದು ಕಡೆಯಾದರೆ, ಇನ್ನೊಂದು ಕಡೆ ಅನೇಕ ಹಳ್ಳಿಗಳಲ್ಲಿ ವ್ಯಾಪಕವಾದ ಗುಂಪುಗಾರಿಕೆ ಮತ್ತು ಮುಂದುವರಿಯುತ್ತಲೇ ಹೋಗುವ ವ್ಯಾಜ್ಯಗಳು ಮುಖ್ಯ ಲಕ್ಷಣವಾಗಿರುತ್ತವೆ. ವಿಕಾಸದ ಒಂದು ಘಟಕವಾಗಿ ಈಗ ಹಳ್ಳಿಯಲ್ಲಿ ಹಲವು ಅಧಿಕೃತವಾದ ವ್ಯವಸ್ಥೆಗಳು ಮತ್ತು ಶಾಸನಬದ್ಧ ಸಂಸ್ಥೆಗಳಿವೆ. ಹಲವು ಹಳ್ಳಿಗಳಲ್ಲಿ ರಾಜಕೀಯ ಪಕ್ಷಗಳ ಪ್ರತಿನಿಧಿಗಳು ಇರುತ್ತಾರೆ. ದೊಡ್ಡ ಗ್ರಾಮವಾದರೆ ಅಲ್ಲಿ ಪಕ್ಷದ ಕಛೇರಿಯೂ ಇರುವುದುಂಟು. ಪ್ರತಿಯೊಂದು ಹಳ್ಳಿಗೂ ಒಂದು ನಿರ್ದಿಷ್ಟತೆ, ನಿಶ್ಚಿತವಾದ ಗಡಿಗಳು (ಕಂದಾಯ ಹಾಗೂ ಅರಣ್ಯ), ಹಳ್ಳಿಯ ಸಾರ್ವತ್ರಿಕವಾದ ಬಯಲುಗಳು (ನಿಸ್ತರ್ ಭೂಮಿ), ಎಲ್ಲರೂ ಹಂಚಿಕೊಳ್ಳುವ ಬಾವಿ, ಕೆರೆ, ಮೊದಲಾದ ಮೂಲಗಳಿರುತ್ತವೆ. ಆಯಾ ಧರ್ಮದವರಿಗಾಗಿ ಅಥವಾ ಎಲ್ಲರಿಗಾಗಿ ತೆರೆದ ದೇವಾಲಯಗಳು, ಮಸೀದಿಗಳು, ಚರ್ಚುಗಳು ಮತ್ತು ಗುರುದ್ವಾರಗಳು ಇರುತ್ತವೆ.

ಬಹುವಾಗಿ ಪ್ರಚಲಿತವಾಗಿರುವ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿ ಭಾರತೀಯ ಗ್ರಾಮವು "ಸ್ವಯಂಪೂರ್ಣವಾದ ಪುಟ್ಟ ಗಣರಾಜ್ಯ" ವಲ್ಲ. ಹಿಂದಿನ ಕಾಲದಲ್ಲೂ ಕೂಡ ಕೊನೆಯ ಪಕ್ಷ ಕೆಲವು ಅಂಶಗಳಲ್ಲಿ ಅದು ಹೊರ ಸಂಪನ್ಮೂಲಗಳನ್ನು ಅವಲಂಬಿಸಬೇಕಾಗಿತ್ತು. ಉದಾಹರಣೆಗೆ ಅಡಿಗೆಉಪ್ಪು ದೈನಂದಿನ ಆಹಾರದ ಮೂಲ ಅವಶ್ಯಕತೆ. ಅಲೆಮಾರಿಗಳಾದ ಬಂಜಾರರು, ದಕ್ಷಿಣದಲ್ಲಿ ಅವರನ್ನು ಲಂಬಾಡರೆಂದು ಕರೆಯುತ್ತಾರೆ, ಅದನ್ನು ಒದಗಿಸುತ್ತಿದ್ದರು. ಪತಿಯು ಬದುಕಿರುವ ಮಹಿಳೆಯರ ಅತಿಮುಖ್ಯ ಅಲಂಕಾರವಾದ ಬಳೆ ಹಳ್ಳಿಯಲ್ಲಿ ಸ್ಥಳೀಯವಾಗಿ ಎಲ್ಲ ಕಡೆಯೂ ತಯಾರಾಗುತ್ತಿರಲಿಲ್ಲ. ಅನೇಕ ಇತರ ವಸ್ತುಗಳ ವಿಷಯದಲ್ಲಿ ಅಂತರಗ್ರಾಮ ವ್ಯಾಪಾರ ನಡೆದಿತ್ತು. ಮಾರುಕಟ್ಟೆಗೆ ಸುತ್ತಿನ ಹಲವಾರು ಹಳ್ಳಿಗಳಿಂದ

ಜನರು ಬರುತ್ತಿದ್ದರು. ವಾರಕ್ಕೊಮ್ಮೆ ಮಧ್ಯಭಾಗದ ಹಳ್ಳಿಯಲ್ಲಿ ಸಂತೆ ನಡೆಯುತ್ತಿತ್ತು. ಹಳೆಯ ಧಾರ್ಮಿಕ ಗ್ರಂಥಗಳಲ್ಲಿ ಮತ್ತು ಪ್ರವಾಸಿಗರು ಕೊಟ್ಟಿರುವ ವರದಿಗಳಲ್ಲಿ ದೂರ ದೂರ ಪ್ರದೇಶಗಳಿಂದ ಜನರನ್ನು ಆಕರ್ಷಿಸುತ್ತಿದ್ದ ಸ್ಥಳೀಯ ಹಾಗೂ ಪ್ರಾದೇಶಿಕ ಜಾತ್ರೆಗಳ ಉಲ್ಲೇಖ ಬರುತ್ತದೆ. ಕೆಲವರಾದರೂ ದೂರದ ಹಳ್ಳಿಗಳಿಂದ ವಧುಗಳನ್ನು ತಂದುಕೊಳ್ಳುತ್ತಿದ್ದರು. ನಂಟಸ್ತನದ ಜಾಲವು ವ್ಯಾಪಕವಾಗಿ ಹರಡಿತ್ತು. ಅಂತರ-ಗ್ರಾಮ ಪಂಚಾಯತಿಯ ಸಂಪ್ರದಾಯವೂ ಇತ್ತು.

ಭಾರತ ಹಳ್ಳಿಗಳ ದೇಶವೆಂದು ಪ್ರಸಿದ್ಧವಾಗಿದೆಯಾದರೂ ನಗರಕೇಂದ್ರಗಳ ಪ್ರಾಚೀನ ಪರಂಪರೆಯೂ ಇಲ್ಲಿದೆ. ಸಿಂಧೂ ಕಣಿವೆಯ ನಾಗರಿಕತೆ ಮುಖ್ಯವಾಗಿ ನಗರ ಸಂಬಂಧಿಯಾಗಿತ್ತು. ಹಲವು ವಿದೇಶೀ ಪ್ರವಾಸಿಗರು ದೇಶದ ಬೇರೆ ಬೇರೆ ಭಾಗಗಳಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಹಲವಾರು ನಗರಗಳನ್ನು ಉಲ್ಲೇಖಿಸಿದ್ದಾರೆ. ಅವುಗಳಲ್ಲಿ ಕೆಲವು ಆಡಳಿತ ಕೇಂದ್ರಗಳಾಗಿದ್ದುವು. ಮತ್ತೆ ಕೆಲವಕ್ಕೆ ಧಾರ್ಮಿಕ ಪ್ರಾಶಸ್ತ್ಯವಿದ್ದಿತು. ಇನ್ನು ಹಲವು ವ್ಯಾಪಾರ ವಾಣಿಜ್ಯ ಕೇಂದ್ರಗಳಾಗಿದ್ದುವು. ಈ ನಗರಗಳಿಗೂ, ಅವುಗಳ ಆಸುಪಾಸಿನ ಹಳ್ಳಿಗಳಿಗೂ ನಡುವೆ ಖಚಿತ ಸ್ವರೂಪದ ಅಂತರ್‌ಕ್ರಿಯೆ ಇತ್ತು. ಇಂತಹ ಸಂಪರ್ಕಗಳನ್ನು ಈಗ ಬೇಕಾದ ಹಾಗೆ ಹೆಚ್ಚಿಸಲಾಗಿದೆ. ಆಡಳಿತೀಯ, ನ್ಯಾಯಾಂಗ, ಅಭಿವೃದ್ಧಿ ಮೊದಲಾದ ಕಾರಣಗಳಿಗಾಗಿ ಹಳ್ಳಿಯ ಜನರು ಹಿಂದಿನ ಕಾಲಗಳಿಗಿಂತಲೂ ಹೆಚ್ಚಾಗಿ ಪಟ್ಟಣಗಳಿಗೆ ಪದೇ ಪದೇ ಭೇಟಿಕೊಡಲೇ ಬೇಕಾಗಿದೆ.

ಪ್ರತಿ ಹಳ್ಳಿಯಲ್ಲೂ ಹಲವು ಜಾತಿ ಘಟಕಗಳಿವೆ. ಕೆಲವು ಕ್ಷೇತ್ರಗಳಲ್ಲಿ ಇವು ಪ್ರತ್ಯೇಕವಾದ ಬೆಸುಗೆಗಳನ್ನು ಹೊಂದಿವೆ. ಆದರೆ ಅವುಗಳ ಜೊತೆಗೆ ನೆರೆಹೊರೆಯ ಬಾಂಧವ್ಯ, ವೈಯಕ್ತಿಕ ಹಾಗೂ ಕೌಟುಂಬಿಕ ಸ್ನೇಹ ಬಾಂಧವ್ಯಗಳು ಹಾಗೆಯೇ ವೈರಗಳು ಇರುತ್ತವೆ. ಜಾತಿ ಜಾತಿಯ ನಡುವೆ ಹಾಗೂ ವ್ಯಕ್ತಿ ಜಾತಿಯ ನಡುವೆ ಇರುವ ಸಂಬಂಧಗಳ ಮೂರು ಮುಖಗಳನ್ನು ವಿಶೇಷವಾಗಿ ಪರಿಶೀಲಿಸಬೇಕು. ವಿಶಿಷ್ಟ ವೃತ್ತಿ ಸೇವೆಗಳ ವಿನಿಮಯದ ಮೂಲಕ ಒದಗುವ ಪರಸ್ಪರ ಅವಲಂಬನೆ; ಗ್ರಾಮಪಂಚಾಯತಿಗಳ ಕಾರ್ಯ ನಿರ್ವಹಣೆ (ಸಾಮಾನ್ಯವಾಗಿ ಹಳ್ಳಿಯಲ್ಲಿ ವಾಸಿಸುತ್ತಿರುವ ಎಲ್ಲ ಜಾತಿಗಳ ಪ್ರತಿನಿಧಿಗಳೂ ಪಂಚಾಯತಿಯಲ್ಲಿ ಇರುತ್ತಾರಾದ್ದರಿಂದ), ಜಾತಿಯ ಪಂಚಾಯತಿಗಳ ಜೊತೆಗೆ; ಮತ್ತು ಹಳ್ಳಿಯ ಗುಂಪು ರಾಜಕೀಯ. ಇವುಗಳಲ್ಲಿ ಮೊದಲಿನೆರಡು ಬೇಕಾದಷ್ಟು ವ್ಯತ್ಯಾಸಗಳನ್ನು ಕಂಡಿವೆ.

ಅನೇಕ ಜಾತಿಗಳಿಗೆ ಸಂಬಂಧಿಸಿದ ವಿಶಿಷ್ಟ ವೃತ್ತಿಗಳಿರುತ್ತವೆ ಎಂದು ಈ ಮೊದಲೇ ನೋಡಿದ್ದಾಗಿದೆ. ಜೊತೆಗೆ "ಮುಕ್ತ" ವಾದ ಕೆಲವು ವೃತ್ತಿಗಳಿವೆ. ಅಂದರೆ ವ್ಯಕ್ತಿಯ ಜಾತಿಯ ವಿವಕ್ಷೆಯಿಲ್ಲದೆ ಯಾರು ಬೇಕಾದರೂ ಅನುಸರಿಸಬಹುದಾದ ವೃತ್ತಿಗಳವು. ಹಲವು ಸಾಂಪ್ರದಾಯಿಕ ವೃತ್ತಿಗಳಿಗೆ ಹಳ್ಳಿಯ ಕುಟುಂಬಗಳೊಂದಿಗೆ ಒಂದು ಬಗೆಯ ನಂಟು ಬೆಳೆದುಬಂದಿರುತ್ತದೆ. ಸೇವೆಗೆ ಪ್ರತಿಫಲವನ್ನು ನಗದಾಗಿ ಅಥವಾ ವಸ್ತುರೂಪದಲ್ಲಿ ಕೊಡಬಹುದು ಅಥವಾ ಎರಡನ್ನೂ ಕೊಡಬಹುದು. ದೇಶದ

ಬೇರೆ ಬೇರೆ ಭಾಗಗಳಲ್ಲಿ ಈ ವ್ಯವಸ್ಥೆಯನ್ನು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆ. ಮಾನವ ಶಾಸ್ತ್ರೀಯ ಹಾಗೂ ಸಮಾಜಶಾಸ್ತ್ರೀಯ ಸಾಹಿತ್ಯದಲ್ಲಾದರೆ ಅದನ್ನು ಮೊದಲಬಾರಿಗೆ ಜಾಜಮಾನಿ ಎಂದು ಕರೆಯಲಾಗಿದೆ. ಮೊದಲ ಬಾರಿಗೆ ಉತ್ತರಪ್ರದೇಶದ ಒಂದು ಹಳ್ಳಿಯ ವ್ಯವಸ್ಥೆಯನ್ನು ವಿಸ್ತಾರವಾಗಿ ವರ್ಣಿಸಿದ್ದರಿಂದ ಆ ಹೆಸರು ಬಂದಿತು. "ಪೋಷಕ – ಕಕ್ಷಿದಾರ ಸಂಬಂಧ" ಎಂದೂ ಇದನ್ನು ಕರೆಯಲಾಗಿದೆ. ಆದರೆ ಈ ಹಣೆಪಟ್ಟಿ ತಪ್ಪುದಾರಿಗೆಳೆಯುವಂಥದಾಗಿದೆ. ಶ್ರೀಮಂತ ಭೂಮಾಲೀಕರು (ಪೋಷಕರು) ಮತ್ತು ಅವರಿಗೆ ಸೇವೆಗಳನ್ನು ಸಲ್ಲಿಸುವ ವಿವಿಧ ಜಾತಿವರ್ಗಗಳು (ಅಧೀನರು) ಎಂಬ ಅರ್ಥದಿಂದಾಗಿ ಹಾಗನ್ನಬಹುದೇನೋ. ಆರ್ಥಿಕ ಮತ್ತು ಧಾರ್ಮಿಕ ಸೇವೆಗಳ ವಿನಿಮಯವು ಬೇರೆ ಬೇರೆ ಜಾತಿಗಳ ನಡುವೆ ಸಮಾನ ಆರ್ಥಿಕ ನೆಲೆಯಿರುವ ಕುಟುಂಬಗಳಲ್ಲೂ ನಡೆಯುತ್ತದೆ. ಇಂಥದೊಂದು ಪರಿಸ್ಥಿತಿಯಲ್ಲಿ ಯಾರು ಪೋಷಕರು, ಯಾರು ಅಧೀನರು ಎಂದು ನಿರ್ಣಯಿಸುವುದು ಕಷ್ಟವಾಗುತ್ತದೆ.

ಈ ವ್ಯವಸ್ಥೆ ಹೇಗೆ ಕೆಲಸ ಮಾಡುತ್ತದೆ? ಕೆಲವು ನಿದರ್ಶನಗಳನ್ನು ಕೊಟ್ಟು ಇದನ್ನು ವಿವರಿಸಬಹುದು. ಈ ಮಾದರಿಯಾದರೂ ಭಾರತಾದ್ಯಂತ ಏಕರೂಪದ್ದಾಗಿಲ್ಲ. ಕೆಲವು ಕಡೆಗಳಲ್ಲಿ ಮಿಕ್ಕೆಡೆಗಳಿಗಿಂತ ಹೆಚ್ಚು ವೇಗವಾಗಿ ಬದಲಾಗುತ್ತಲೂ ಇದೆ. ಈ ಸಂಬಂಧವು ಕೆಲವು ಆರ್ಥಿಕ ಹಾಗೂ ಕೆಲವು ಧಾರ್ಮಿಕ ಸೇವೆಗಳನ್ನು ಒಳಗೊಳ್ಳುತ್ತದೆ ಎಂಬುದನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಹೊಲಗದ್ದೆಗಳಲ್ಲಿ ಕೆಲಸ ಮಾಡುವ ನೌಕರರನ್ನು ಅವರು ಸಲ್ಲಿಸಬೇಕಾದ ಸೇವೆ ಹಾಗೂ ಅದಕ್ಕೆ ಅವರಿಗೆ ದೊರಕಬಹುದಾದ ಪ್ರತಿಫಲ ಇವುಗಳ ಆಧಾರದ ಮೇಲೆ ನೇಮಿಸಿಕೊಳ್ಳಲಾಗುತ್ತದೆ. ನಾಯಿಂದನ ಪರಂಪರಾಗತ ವೃತ್ತಿ ಕೂದಲು ಕತ್ತರಿಸುವುದು. ಈ ಸೇವೆಗಾಗಿ ವರ್ಷದ ಮುಖ್ಯ ಫಸಲು ಬಂದೊಡನೆ ಅವನು ಗ್ರಾಮದ ಬೇಸಾಯಗಾರರಿಂದ ನಿರ್ದಿಷ್ಟ ಪ್ರಮಾಣದ ಧಾನ್ಯ ಪಡೆಯುತ್ತಾನೆ. ಬೇಸಾಯಗಾರರಲ್ಲದವರಿಗೂ ಅವನು ಈ ಸೇವೆ ಸಲ್ಲಿಸುತ್ತಾನೆ. ಅದಕ್ಕೆ ಪ್ರತಿಯಾಗಿ ಅವರೂ ತಮ್ಮ ತಮ್ಮ ವಿಶೇಷ ವೃತ್ತಿ ಸೇವೆ ಸಲ್ಲಿಸುತ್ತಾರೆ. ಕುಂಬಾರನು ಕೆಲವು ಮಡಕೆ ಕುಡಿಕೆಗಳನ್ನು ಕೊಡಬಹುದು. ಕಮ್ಮಾರನು ಅವನ ಕತ್ತಿಯನ್ನು ಹರಿತಗೊಳಿಸಿಕೊಡಬಹುದು, ಉಗುರು ಕತ್ತರಿಸಲು, ಕಿವಿಯ ಗುಗ್ಗೆ ತೆಗೆಯಲು ಬೇಕಾದ ಉಪಕರಣಗಳನ್ನು ಮಾಡಿಕೊಡಬಹುದು. ಬಡಗಿಯು ಅವನ ಕತ್ತಿಯ ಹಿಡಿಯನ್ನು ದುರಸ್ತು ಮಾಡಬಹುದು, ಇತರ ಸಣ್ಣಪುಟ್ಟ ಮರಗೆಲಸ ಮಾಡಿಕೊಡಬಹುದು. ಇನ್ನು ಧಾರ್ಮಿಕ ಕ್ರಿಯೆಗಳಲ್ಲಿಯೂ ನಾಯಿಂದನಿಗೆ ಪಾತ್ರವುಂಟು. ಉತ್ತರಭಾರತದಲ್ಲಿ ವಿವಾಹದ ಆಮಂತ್ರಣ ಪತ್ರಿಕೆಗಳನ್ನು ಹಳ್ಳಿಯ ಒಳಗೂ ಹೊರಗೂ ಹಂಚುವವನು ಅವನೇ. ಅವನ ಮನೆಯ ಹೆಂಗಸರು ಮದುವೆ ಹಾಗೂ ಮರಣ ಸಂಬಂಧವಾದ ಔತಣಕೂಟಗಳಲ್ಲಿ ಬಳಸಲು ಎಲೆಯನ್ನೂ ದೊನ್ನೆಗಳನ್ನೂ ತಯಾರಿಸುತ್ತಾರೆ., ತಾವು ಕೆಲಸ ಮಾಡುತ್ತಿರುವ ಮನೆಯ ಹೆಣ್ಣುಮಕ್ಕಳ ಅಂಗಾಲಿಗೆ ಕೆಂಪು ಹಚ್ಚುತ್ತಾರೆ. ರೈತರಿಂದ ಧಾನ್ಯ ಪಡೆಯುವುದರ

ಜೊತೆಗೆ ಸಮಾರಂಭಗಳಲ್ಲಿ ಅಷ್ಟಿಷ್ಟು ನಗದು ಹಾಗೂ ಊಟ ಅವರಿಗೆ ದೊರಕುತ್ತದೆ.

ರೈತರಿಗೆ ಸಂಬಂಧಿಸಿದಂತೆ ಬಡಗಿಯು ಅವರ ನೇಗಿಲುಗಳನ್ನು ರಿಪೇರಿ ಮಾಡುತ್ತಾನೆ ಅಥವಾ ಹೊಸವನ್ನು ಮಾಡಿಕೊಡುತ್ತಾನೆ. ಕಮ್ಮಾರನು ಗುಳಗಳನ್ನು ಒದಗಿಸುತ್ತಾನೆ, ಇತರ ಬೇಸಾಯದ ಉಪಕರಣಗಳನ್ನು ಸಿದ್ಧಪಡಿಸಿಕೊಡುತ್ತಾನೆ. ಕುಂಬಾರನು ನೀರು ತುಂಬುವ ಗಡಿಗೆಗಳನ್ನೂ, ಧಾನ್ಯ ತುಂಬಿಡಲು ದೊಡ್ಡ ಮಡಕೆಗಳನ್ನೂ ಮಾಡುತ್ತಾನೆ. ಚಮ್ಮಾರ ಅಥವಾ ಮೋಚಿಯು ನೇಗಿಲು, ಗಾಡಿಗಳಿಗೆ ಕಟ್ಟುವ ಎತ್ತುಗಳಿಗೆ ಅಗತ್ಯವಾದ ಪಟಗಣ್ಣಿ ಬಾರಕೋಲುಗಳನ್ನೂ ಮಾಡಿಕೊಡುತ್ತಾನೆ. ಧಾರ್ಮಿಕ ಸಂದರ್ಭಗಳಲ್ಲಿ ಅಕ್ಕಸಾಲೆಯು ಚಿನ್ನದ ಅಥವಾ ಬೆಳ್ಳಿಯ ಆಭರಣಗಳನ್ನು ತಯಾರು ಮಾಡುತ್ತಾನೆ, ಬಡಗಿಯು ಮದುವೆಯ ಸ್ತಂಭವನ್ನು, ಅಗತ್ಯ ಬಂದರೆ ಮದುವೆಯ ಮಂಟಪವನ್ನು ಮಾಡುತ್ತಾನೆ. ಕುಂಬಾರನು ಧಾರ್ಮಿಕ ಪಾತ್ರೆಗಳನ್ನು ಮಾಡಿದರೆ, ಕಮ್ಮಾರನು ಕೀಲನ್ನು, ಅಂದರೆ ದೊಡ್ಡ ಮೊಳೆಯನ್ನು ಒದಗಿಸುತ್ತಾನೆ. ಅದನ್ನು ನೆಲಕ್ಕೆ ಹೊಡೆದರೆ ವಿವಾಹವನ್ನು ಸ್ಥಿರೀಕರಿಸಿದಂತಾಯಿತು. ಆಗಾಗ ಬ್ರಾಹ್ಮಣನಿಗೆ ಆಹ್ವಾನ ಹೋಗುತ್ತದೆ. ಕೃಷಿ ಕಾರ್ಯಕ್ರಮಗಳಿಗೆ ಅಥವಾ ಇನ್ನಿತರ ಶುಭಕಾರ್ಯಗಳಿಗೆ ಅತ್ಯುತ್ತಮವಾದ ಮುಹೂರ್ತವನ್ನು ನಿಗದಿಮಾಡುವವನು ಅವನು. ಬೇರೆ ಬೇರೆ ದಿಕ್ಕುಗಳಿಗೆ ಪ್ರಯಾಣ ಮಾಡಲು ಅನುಕೂಲವಾದ ದಿನಗಳನ್ನು, ವಿವಿಧ ತೆರನಾದ ಜ್ಯೋತಿಷ ಅಂಶಗಳನ್ನು ಮುನ್ನುಡಿಯುವವನೂ ಅವನು. ಇದಕ್ಕಾಗಿ ಅವನು ಒಂದು ಊಟಕ್ಕೆ ಅಗತ್ಯವಾದ ಎಲ್ಲ ವಸ್ತು, ಸಾಮಗ್ರಿಗಳನ್ನೂ – *ಸೀಧ* – (ಸ್ವಲ್ಪ ಅಕ್ಕಿ, ಗೋಧಿಹಿಟ್ಟು, ಬೆಲ್ಲ, ಅರಿಶಿನ, ಮೆಣಸಿನಕಾಯಿ ಮತ್ತು ತುಪ್ಪ) ಪ್ರತಿ ತಿಂಗಳೂ ಪಡೆಯುತ್ತಾನೆ. ಧಾರ್ಮಿಕ ಕಾರ್ಯಗಳನ್ನು ಮತ್ತು ಪೂಜೆಯನ್ನು ಮಾಡುವಾಗ ಹೆಚ್ಚಿನ ದಾನ, ದಕ್ಷಿಣೆಗಳು ಅವನಿಗೆ ಸಲ್ಲುತ್ತವೆ. ಕುಶಲಕರ್ಮಿಗಳು ಈ ಸೇವೆಗಳನ್ನು ತಮ್ಮಲ್ಲಿ ವಿನಿಮಯ ಮಾಡಿಕೊಳ್ಳುತ್ತಾರೆ. ವಿಶೇಷ ಸ್ವರೂಪದ ಹೆಚ್ಚಿನ ಕೆಲಸಕ್ಕೆ, ಅಂದರೆ, ಚಿನ್ನ, ಬೆಳ್ಳಿ, ನಗ, ನಾಣ್ಯಗಳ ತಯಾರಿಕೆ ಎತ್ತಿನಬಂಡಿ ಅಥವಾ ಪೀಠೋಪಕರಣ, ಪಾದರಕ್ಷೆಗಳು ಅಥವಾ "ಮೋಜಿನ ಕ್ಷೌರ" ಇವುಗಳಲ್ಲಿ ಸಾಮಾನ್ಯವಾಗಿ ಪಾವತಿಯು ನಗದಾಗಿರುತ್ತದೆ. ಈ ಜಾಜಮಾನಿ ಸಂಬಂಧಗಳು ಈಗ ಸ್ವಲ್ಪ ಮಂದವಾಗಿದ್ದರೂ, ಅಂತೂ ಇನ್ನೂ ಚಾಲ್ತಿಯಲ್ಲಿವೆ. ನಗದಾಗಿ ಮತ್ತು ವಸ್ತುರೂಪದಲ್ಲಿ ಪಾವತಿ ಮಾಡುವುದರ ಬಗೆಗೆ ಭಿನ್ನಮತವಿದೆ. ಹೊಸ ಪೀಳಿಗೆಯ ಜನ ನಗದು ಪಾವತಿಯ ಕಡೆಗೇ ಹೆಚ್ಚು ಒಲಿಯುತ್ತಿದ್ದಾರೆ. "ಮುಕ್ತ" ವೃತ್ತಿಗಳನ್ನು ಇಚ್ಛಿಸುತ್ತಿದ್ದಾರೆ.

ಈಗಾಗಲೇ ನೋಡಿದಂತೆ ಹಳ್ಳಿಯಲ್ಲಿ ಎರಡು ಬಗೆಯ ಪಂಚಾಯತಿಗಳಿದ್ದುವು. ಒಂದು ಜಾತಿ ಪಂಚಾಯತಿ ಇನ್ನೊಂದು ಗ್ರಾಮಪಂಚಾಯತಿ. ಒಂದು ನಿರ್ದಿಷ್ಟ ಜಾತಿಗೆ ಸೇರಿದ ಕುಟುಂಬಗಳು ಒಂದು ಗ್ರಾಮದಲ್ಲಿ ಕಡಮೆ ಸಂಖ್ಯೆಯಲ್ಲಿದ್ದರೆ, ಸಮೀಪದ ಹಳ್ಳಿಗಳೊಂದಿಗೆ ಅದನ್ನು ಕೂಡಿಸಲಾಗುತ್ತಿತ್ತು, ಗ್ರಾಮ

ಪಂಚಾಯತಿಯಲ್ಲಿ ಹೆಚ್ಚು ಕಡಮೆ ಎಲ್ಲ ಜಾತಿಯ ಹಿರಿಯರೂ ಸೇರಿರುತ್ತಿದ್ದರು. ಮುಖಿಯಾ ಅಥವಾ ಸರಪಂಚನು ಆನುವಂಶಿಕವಾಗಿ ಆ ಪದವಿ ಪಡೆಯುತ್ತಿದ್ದನು. ಇಲ್ಲವೆ ಜನಾಭಿಪ್ರಾಯದಂತೆ ಆಯ್ಕೆ ಮಾಡಲಾಗುತ್ತಿದ್ದಿತು. ಜಾತಿಪಂಚಾಯತಿಯ ಎದುರು ಆಸ್ತಿಪಾಸ್ತಿ ಮತ್ತು ಕುಟುಂಬವ್ಯಾಜ್ಯಗಳು ಪರಿಹಾರಕ್ಕೆ ಬರುತ್ತಿದ್ದುವು; ಎರಡು ಅಥವಾ ಹೆಚ್ಚು ಜಾತಿಗಳ ನಡುವೆ ವ್ಯಾಜ್ಯ ಎದ್ದಿದ್ದರೆ ಅದು ಹಳ್ಳಿಯ ಗೌರವಕ್ಕೆ ಕುಂದು ತರುವಂತೆ ಇದ್ದರೆ ಅಂಥ ವ್ಯಾಜ್ಯವು ಗ್ರಾಮಪಂಚಾಯತಿಯ ಎದುರಿಗೆ ಬರುತ್ತದೆ. ಭಾರತವು ಸ್ವಾತಂತ್ರ್ಯಪಡೆದ ನಂತರ ಶಾಸನಬದ್ಧವಾಗಿ ಪಂಚಾಯತಿಗಳನ್ನು ರೂಪಿಸಲಾಯಿತು. ಜನರನ್ನು ಅಭಿವೃದ್ಧಿ ಕಾರ್ಯಕ್ರಮಗಳ ಕಡೆಗೆ ಒಗ್ಗೂಡಿಸಿ ಪ್ರಗತಿಪರ ಯೋಜನೆಗಳ ಕೆಲಸದ ಉಸ್ತುವಾರಿ ಮಾಡುವುದು ಈ ಪಂಚಾಯತಿ ಸಂಸ್ಥೆಗಳ ಕೆಲಸ. ಕೆಲವು ರಾಜ್ಯಗಳಲ್ಲಿ ಶಾಸನಬದ್ಧ ನ್ಯಾಯಪಂಚಾಯತಿಗಳೂ ಇದ್ದುವು. ಇವು ಸಣ್ಣಪುಟ್ಟ ವ್ಯಾಜ್ಯಗಳಲ್ಲಿ ಅತಿ ಕಡಿಮೆ ವೆಚ್ಚದಲ್ಲಿ ತೀರ್ಪು ಕೊಡುತ್ತಿದ್ದುವು. ಶಾಸನಬದ್ಧ ಗ್ರಾಮಪಂಚಾಯತಿಗಳು ದೊಡ್ಡ ಗ್ರಾಮಗಳಲ್ಲಿವೆ. ಅಥವಾ ಒಂದು ಪಂಚಾಯತಿಗೆ ಹಲವು ಸಣ್ಣಪುಟ್ಟ ಹಳ್ಳಿಗಳು ಸೇರಿರುತ್ತವೆ. ಸಾಂಪ್ರದಾಯಿಕ ಪಂಚಾಯತಿಗಳು ಈಗ ಹಿಂದೊಮ್ಮೆ ಇದ್ದಷ್ಟು ಬಲಯುತವಾಗಿಲ್ಲ. ಆಗಾಗ ಹಿಂದಿನಿಂದ ಬಂದ ಪಂಚಾಯತಿಗೂ, ಹೊಸದಾಗಿ ರೂಪುಗೊಂಡ ಶಾಸನಬದ್ಧ ಪಂಚಾಯತಿಗೂ ಘರ್ಷಣೆಯಾಗಿರುವುದೂ ವರದಿಯಾಗಿದೆ.

ಗ್ರಾಮ ಜೀವನದ ಒಂದು ಲಕ್ಷಣವಾಗಿ ಗುಂಪುಗಾರಿಕೆಗೆ ಸಮಾಜ ರಚನೆಯಲ್ಲಿ ಅವಕಾಶವಿಲ್ಲ. ಅದು ವ್ಯಕ್ತಿಗಳ ಮತ್ತು ಕುಟುಂಬಗಳ ನಡುವೆ ಅನೇಕ ವೇಳೆ ವೈರದ, ಕೆಲವೊಮ್ಮೆ ಸಹಕಾರದ ಸಂದರ್ಭಗಳನ್ನು ತೋರಿಸುತ್ತದೆ. ಗುಂಪು ರಾಜಕೀಯಕ್ಕೆ ಅದರದೇ ತರ್ಕವಿದೆ, ನಿಯಮಗಳಿವೆ. ಪ್ರತಿಯೊಂದು ಗುಂಪೂ ಒಬ್ಬ ಅಥವಾ ಹಲವು ಪ್ರಮುಖ ವ್ಯಕ್ತಿಗಳ ಸುತ್ತ ರೂಪುಗೊಂಡಿರುತ್ತದೆ ಮತ್ತು ಸಾಮಾನ್ಯವಾಗಿ ಅದಕ್ಕೆ ಆ ಕುಟುಂಬದ ಮತ್ತು ಬಂಧುವರ್ಗದ ಬೆಂಬಲ ಇರುತ್ತದೆ. ಒಂದೇ ಬಂಧುವರ್ಗದಲ್ಲಿ ಕೆಲವರು ಒಂದು ಗುಂಪಿಗೂ ಇತರರು ಇನ್ನೊಂದು ಗುಂಪಿಗೂ ನಿಷ್ಠರಾಗುವ ಸಂದರ್ಭಗಳೂ ಇವೆ. ಪ್ರತಿ ಗುಂಪಿಗೂ ಆಧಾರವನ್ನು ವಿಭಿನ್ನ ಹಿತಾಸಕ್ತಿಗಳುಳ್ಳ ಬೇರೆ ಬೇರೆ ಜಾತಿಗಳಿಗೆ ಸೇರಿದ ವ್ಯಕ್ತಿಗಳು ಮತ್ತು ಕುಟುಂಬಗಳು ಒದಗಿಸುತ್ತವೆ. ಒಂದು ಹಳ್ಳಿಯಲ್ಲಿ ಎರಡು ಅಥವಾ ಮೂರು ಮುಖ್ಯವಾದ ಗುಂಪುಗಳಿರಬಹುದು; ಅವು ಬಹಳಕಾಲದಿಂದ ಉಳಿದು ಬಂದಿರಬಹುದು, ಹಲವು ತಲೆಮಾರಿನವರೆಗೆ ಮುಂದುವರಿದಿರಬಹುದು. ಒಂದು ನಿರ್ದಿಷ್ಟ ಘರ್ಷಣೆಯಿಂದಲೋ ಹಲವು ಅಂತರ್–ಸಂಬಂಧಿತ ಸಂಘರ್ಷಗಳಿಂದಲೋ ಅಲ್ಪಕಾಲಿಕ ಸ್ನೇಹ ಸಂಬಂಧಗಳು ಮೂಡಿಬರಲೂಬಹುದು. ಘರ್ಷಣೆ ಪರಿಹಾರವಾದಾಗ ಗುಂಪುಗಳು ಹಿನ್ನೆಲೆಗೆ ಸರಿಯುತ್ತವೆ. ಆದರೆ ಪ್ರಮುಖವಾದ ಗುಂಪುಗಳು ತಂತಮ್ಮ ನಿಷ್ಠರಿಗೆ ನಿರಂತರವಾಗಿ ಬೆಂಬಲವನ್ನು ನೀಡುತ್ತಲೇ ಇರುತ್ತವೆ. ತೋಳಬಲವನ್ನು ಬಳಸಿಯೋ, ನ್ಯಾಯಾಲಯದ ಕಟ್ಟೆಗಳಲ್ಲಿ ನಿಜವಾದ

ಅಥವಾ ಸುಳ್ಳಾದ ಸಾಕ್ಷಿಗಳನ್ನು ಒದಗಿಸಿಯೋ, ತಮ್ಮ ಸದಸ್ಯರ ಹಿತಕ್ಕೆ ಅನುಕೂಲವಾಗುವ ರೀತಿಯಲ್ಲಿ ಈ ಬೆಂಬಲವನ್ನು ಅವು ನೀಡುತ್ತವೆ. ಇಂತಹ ಗುಂಪು ಘರ್ಷಣೆಯು ಕುಟುಂಬ ಕಲಹಗಳಿಗೆ, ಅಂತರ್ಜಾತಿ ಘರ್ಷಣೆಗಳಿಗೆ, ಅಂತರ–ಗ್ರಾಮ ವೈಮನಸ್ಸುಗಳಿಗೆ ವಿಸ್ತರಿಸುತ್ತದೆ. ಅವು ಸಾಂಪ್ರದಾಯಿಕ ಮತ್ತು ಶಾಸನಬದ್ಧ ಪಂಚಾಯತಿಗಳು ನೀಡುವ ತೀರ್ಪುಗಳ ಮೇಲೂ ಪ್ರಭಾವ ಬೀರುವುದುಂಟು. ಅಭಿವೃದ್ಧಿ ಸಂಸ್ಥೆಗಳು, ರಾಜ್ಯ ಮತ್ತು ರಾಷ್ಟ್ರ ಚುನಾವಣೆಗಳು ಗುಂಪುಗಾರಿಕೆಗೆ ಹೆಚ್ಚಿನ ಕಾರ್ಯಕ್ಷೇತ್ರಗಳನ್ನು ಒದಗಿಸಿವೆ.

ಈ ಸಂದರ್ಭದಲ್ಲಿ ಗ್ರಾಮ ಅಸಮಾನತೆಗಳನ್ನು ಕುರಿತು ಸಂಕ್ಷೇಪವಾಗಿ ನಿರೂಪಿಸುವುದು ಅಗತ್ಯವೆಂದು ತೋರುತ್ತದೆ. ಅಖಿಲ ಭಾರತ ಕೃಷಿ ಜನಗಣತಿಯ ವರದಿಯ (1970–71) ಪ್ರಕಾರ ಭಾರತೀಯ ರೈತರ ಶೇ. 50.6 ಜನರು ಕೇವಲ ಶೇ. 9 ಭೂಮಿಯ ಹಿಡುವಳಿ ಹೊಂದಿದ್ದರು. ಶೇ. 32.9 ಜನರು 0.5 ಕ್ಕಿಂತ ಕೆಳಗಿನ ಪ್ರಮಾಣವನ್ನು, ಶೇ. 17.7 ರಷ್ಟು ಜನ 0.5ರಿಂದ 1.0ಹೆಕ್ಟೇರನ್ನು ಶೇ. 19.0ಜನರು 1.0 ರಿಂದ 2.0 ಹೆಕ್ಟೇರನ್ನು ಹೊಂದಿದ್ದರು. ಇದಕ್ಕೆದುರಾಗಿ ಶೇ. 3.5 ಜನರು ಭೂಮಿಯ ಶೇ. 30.9 ಪ್ರಮಾಣದ ಭೂ ಹಿಡುವಳಿ ಹೊಂದಿದ್ದರು. ಕೃಷಿ ಗಣತಿ ವರದಿಯ ಪ್ರಕಾರ (1975) ಬೇಸಾಯವಾಗುತ್ತಿರುವ 35.7 ಮಿಲಿಯ ಹಿಡುವಳಿಗಳು ಗಾತ್ರದಲ್ಲಿ ಒಂದು ಹೆಕ್ಟೇರಿಗಿಂತ ಕಡಮೆ ಗಾತ್ರದ್ದು. ಅವು ಒಟ್ಟು ಹಿಡುವಳಿಯ ಶೇ. 51 ಭಾಗವಾಗುತ್ತದೆ. ಒಂದರಿಂದ ಎರಡು ಹೆಕ್ಟೇರ್ ಗಾತ್ರದ ಹಿಡುವಳಿಗಳು 13.4 ಮಿಲಿಯನ್; ಅದು ಒಟ್ಟು ಮೊತ್ತದ ಶೇ. 19ರಷ್ಟು. ಬಹಳ ಬಡವರಾದವರಿಗೆ ಅವರದಾದ ಭೂಮಿಯೇ ಇರಲಿಲ್ಲ, ಇದ್ದರೂ ಅಂಗೈಯಗಲದ ಆರ್ಥಿಕವಾಗಿ ಪ್ರಯೋಜನಕಾರಿಯಲ್ಲದ ಹಿಡುವಳಿಗಳು. ಚಿಕ್ಕ ಮತ್ತು ಸಾಧಾರಣ ರೈತರದು ಸಾಮಾನ್ಯವಾಗಿ ಕಳಪೆ ಗುಣಮಟ್ಟದ ಭೂಮಿ; ಫಲವತ್ತಾದ, ನೀರಾವರಿ ಸೌಲಭ್ಯವುಳ್ಳ ಭೂಮಿಯೆಲ್ಲ ಶ್ರೀಮಂತ ಕೃಷಿಕರದು.

ಬೇರೆ ಬೇರೆ ಪ್ರದೇಶಗಳಲ್ಲಿ ಒಂದು ನಮೂನೆ ಪರಿಸ್ಥಿತಿಯು ಉದ್ಭವಿಸಿತು. ಕೆಲವು ಜಾತಿಗಳವರು ಪ್ರಮುಖ ಭೂಮಾಲೀಕರಾದರು. ಉದಾಹರಣೆಗೆ, ಪಂಜಾಬ್ ಮತ್ತು ಹರಿಯಾಣಾಗಳಲ್ಲಿ ಜಾಟರು, ಪಶ್ಚಿಮ ಉತ್ತರಪ್ರದೇಶದಲ್ಲಿ ರಜಪೂತರು ಬಿಹಾರದಲ್ಲಿ ಭೂಮಿಹಾರರು ಮತ್ತು ರಜಪೂತರು, ಗುಜರಾತಿನಲ್ಲಿ ಪಟಿದಾರರು ಆಂಧ್ರಪ್ರದೇಶದಲ್ಲಿ ರೆಡ್ಡಿಗಳು, ವೇಲಮರು ಮತ್ತು ಕಮ್ಮಾರರು, ಕರ್ನಾಟಕದಲ್ಲಿ ಒಕ್ಕಲಿಗರು ಮತ್ತು ಲಿಂಗಾಯತರು. ಈ ಜಾತಿಗಳ ಬಹು ಸಣ್ಣವರ್ಗವು ಹೆಚ್ಚಿನ ಭೂಮಿಯನ್ನು ಸ್ವಾಧೀನಪಡಿಸಿಕೊಂಡಿತೇ ಹೊರತು ಅವರಲ್ಲೂ ಅನೇಕರಿಗೆ ಭೂಮಿಯೇ ಇರದಂತಾಯಿತು. ಆದರೆ ಸಾಮೂಹಿಕ ಆರ್ಥಿಕ ಶಕ್ತಿಯಿಂದಾಗಿ ಈ ಜಾತಿಗಳ ಶ್ರೀಮಂತ ವರ್ಗಗಳು ರಾಜಕೀಯ ಕುಟಿಲತೆಗಳನ್ನು ಬೆಳೆಸಿಕೊಂಡುವು. ಅವರು ದೀನ ದುರ್ಬಲರ, ಬಡವರ ಶೋಷಕರಾದರು; ಅವರನ್ನು ತುಳಿದರು. ತಮ್ಮದೇ ಜಾತಿಯವರನ್ನೂ ಬಿಡಲಿಲ್ಲ. 1971ರ ಜನಗಣತಿಯ ಪ್ರಕಾರ 438.8 ಮಿಲಿಯನ್ ಇದ್ದ ಗ್ರಾಮೀಣ ಜನತೆಯನ್ನು ಎರಡು ವರ್ಗವಾಗಿ

ವಿಭಾಗಿಸಬಹುದಾಗಿದ್ದಿತು. ಕಾರ್ಮಿಕರು (148.4 ಮಿಲಿಯನ್ ಅಥವಾ ಶೇ. 33.8) ಕಾರ್ಮಿಕೇತರರು (290.4 ಮಿಲಿಯನ್ ಅಥವಾ ಶೇ. 66.2) ಕಾರ್ಮಿಕ ವರ್ಗದಲ್ಲಿ ಶೇ. 51.95 ಬೇಸಾಯಗಾರರು; ಶೇ. 30.71 ಕೃಷಿ ಕೂಲಿಕಾರರು. ಶೇ. 2.53 ಪಶುಸಂಗೋಪನೆ, ಮೀನುಗಾರಿಕೆ, ಅರಣ್ಯ ಇತ್ಯಾದಿಗಳಲ್ಲಿ ದುಡಿಯುವವರು; ಶೇ. 14.97 ಜನ ಗಣಿಗಾರಿಕೆ, ಸಂಸ್ಕರಣ ಮತ್ತು ಉತ್ಪಾದನೆ, ನಿರ್ಮಾಣ, ಗೃಹಕೈಗಾರಿಕೆ, ವ್ಯಾಪಾರ, ಸಾರಿಗೆ ಮತ್ತು ಇತರ ಸೇವೆಗಳಲ್ಲಿ ದುಡಿಯುವವರು. ಕೃಷಿಯಿಂದ ಕೈಗಾರಿಕೆಯ ಕಡೆಗೆ ವರ್ಗಾವಣೆ ವಿಪರೀತ ನಿಧಾನವಾದುದಾಗಿದೆ. 1881ರಲ್ಲಿ ದುಡಿಯುವ ಬಲದ ಶೇ. 77.4ರಷ್ಟು ಕೃಷಿ ಕ್ಷೇತ್ರದಲ್ಲಿತ್ತು; 1971ರಲ್ಲಿ ಅದು ಇನ್ನು ಶೇ. 72.5 ಆಗಿತ್ತು. 1973ರಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಸುಮಾರು 8.3 ಮಿಲಿಯನ್ ಜನರು ನಿರುದ್ಯೋಗಿಗಳಾಗಿದ್ದರು. 17.3 ಮಿಲಿಯನ್ ಜನರು ಅರೆಉದ್ಯೋಗಿಗಳಾಗಿದ್ದರು ಎಂದು ರಾಜ ಕೃಷ್ಣ ಅಂದಾಜು ಮಾಡಿದರು. ಇದನ್ನು ಸಮರ್ಥಿಸುವ ಅಂಶವು ಅದೇ ಕಾಲಕ್ಕೆ ಸಂಬಂಧಿಸಿದ ನ್ಯಾಷನಲ್ ಸ್ಯಾಂಪಲ್ ಸರ್ವೆ ನೀಡಿದ ವರದಿಯಿಂದ ಬಂದಿತು. ಗ್ರಾಮಾಂತರ ಪ್ರದೇಶಗಳಲ್ಲಿ ಒಂದು ವರ್ಷದಲ್ಲಿ 5000 ಮಿಲಿಯನ್ ನಿರುದ್ಯೋಗಿ ಮಾನವ ದಿನಗಳಿದ್ದುವು. ತೀವ್ರ ನಿರುದ್ಯೋಗ ವನ್ನು ಅನುಭವಿಸುತ್ತಿದ್ದ ಸುಮಾರು ನಾಲ್ಕು ಮಿಲಿಯನ್ ಜನಗಳಿದ್ದರು. ಭೂಸುಧಾರಣೆಗಳು ಪರಿಣಾಮಕಾರಿ ಫಲಗಳನ್ನೇನೂ ನೀಡಲಿಲ್ಲ. 15.9 ಲಕ್ಷ ಹೆಕ್ಟೇರ್ ವಿಸ್ತೀರ್ಣದ ಭೂಮಿಯನ್ನು ಹೆಚ್ಚುವರಿ ಎಂದು ಪರಿಗಣಿಸಲಾಗಿತ್ತು; ಅದರಲ್ಲಿ ಕೇವಲ 5.2 ಲಕ್ಷ ಹೆಕ್ಟೇರುಗಳನ್ನು ಮಾತ್ರ 8.7 ಲಕ್ಷ ಫಲಾನುಭವಿಗಳಿಗೆ ಹಂಚಬಹುದಾಗಿದ್ದಿತು. ಹೀಗಾಗಿ ಶಿಕ್ಷಣ, ಆರೋಗ್ಯ, ಮನೆ, ಸಾಮಾನ್ಯ ಜೀವನಮಟ್ಟ ಈ ಕ್ಷೇತ್ರಗಳಲ್ಲಿ ಕಣ್ಣಿಗೆ ಕಾಣುವ ಪಕ್ಷಪಾತಗಳಿಂದಾಗಿ ಆರ್ಥಿಕ ಅಸಮಾನತೆಗಳೂ ದಾರಿದ್ರ್ಯವೂ ಮುಂದುವರಿದೇ ಇದೆ. ಬಹುದೊಡ್ಡ ಬಡತನದ ವರ್ಗವು ಅದೇ ಶೋಷಣೆಗೊಳಪಟ್ಟಿದೆ,' ದಮನಕ್ಕೆ ಸಿಕ್ಕಿದೆ. ಭಾಷಣ ಮಾತ್ರದಲ್ಲಿರುವ ಸುಧಾರಣೆಗಳಾದರೋ ವಿಷಾದಕರವಾದ ಅತಿಮಂದ ವೇಗದಲ್ಲಿ ಸಾಗಿವೆ.

ಹಳ್ಳಿಯನ್ನು ಹಲವು ಹಳ್ಳಿಗಳ ಜಾಲದ ಹಿನ್ನೆಲೆಯಲ್ಲೇ ನೋಡಬೇಕು. ಒಂದು ಹಳ್ಳಿಯಲ್ಲಿ ಎಲ್ಲ ಸೇವೆಗಳನ್ನೂ ಒದಗಿಸುವ ಜಾತಿಗಳು ಇರದೇ ಹೋದ ಪಕ್ಷದಲ್ಲಿ ಅದು ನೆರೆಯ ಹಳ್ಳಿಗಳೊಡನೆ ಜಾಜಮಾನಿ ಸಂಬಂಧವನ್ನು ಇಟ್ಟುಕೊಳ್ಳುತ್ತದೆ. ಬಾಂಧವ್ಯದ ಬೆಸುಗೆಗಳು ಹತ್ತಿರದ, ದೂರದ ಹಲವಾರು ಹಳ್ಳಿಗಳಿಗೂ ಪಟ್ಟಣಗಳಿಗೂ ವ್ಯಾಪಿಸುತ್ತವೆ. ಕೆಲವು ಪ್ರದೇಶಗಳಲ್ಲಿ ಅಂತರ-ಗ್ರಾಮ ಜಾತಿ ಪಂಚಾಯತಿಗಳು ಇರುವುದುಂಟು. ಪಂಜಾಬಿನಲ್ಲಿ ಮಿಸಲ್ ಉತ್ತರ ಪ್ರದೇಶದ ಪಶ್ಚಿಮ ಭಾಗದಲ್ಲಿ *ಖಾಪ್* ಮಧ್ಯಪ್ರದೇಶದ ಉತ್ತರಭಾಗದಲ್ಲಿ ಕುದಾರಿಯಾ ಇಂಥವು. ಈ ಅಂಗಸಂಸ್ಥೆಗಳಲ್ಲಿ ಜಾತಿಯನ್ನು ಕುರಿತ ಅತಿಮುಖ್ಯ ವಿಚಾರಗಳನ್ನೂ, ಅತ್ಯಂತ ಗಂಭೀರವಾದ ವ್ಯಾಜ್ಯಗಳನ್ನೂ ವಿಚಾರಣೆಗೆ ತೆಗೆದುಕೊಳ್ಳಲಾಗುತ್ತದೆ. ಕೆಲವು ಪ್ರದೇಶಗಳಲ್ಲಿ ಮಾತ್ರ ಇವು ಬಲವಾಗಿ ಉಳಿದಿವೆ. ಆದರೆ ಅನೇಕ ಕಡೆ

ಕುಸಿಯತೊಡಗಿವೆ. ಅಂತರ–ಗ್ರಾಮ ಪಂಚಾಯತಿಯ ಪರಂಪರೆಯಿತ್ತು. ಆದರೆ ಅವಕ್ಕೆ ಈಗ ತಾತ್ಕಾಲಿಕತೆಯ ಲಕ್ಷಣ ಬಂದಿದೆ. ಸಾಂದರ್ಭಿಕವಾಗಿ ಮಾತ್ರ ಅವು ಸೇರುತ್ತವೆ.

ಜನರು ಸಾಮಾನ್ಯವಾಗಿ ಗ್ರಾಮ ಮತ್ತು ನಗರ ಲಕ್ಷಣಗಳ ನಡುವೆ ವ್ಯತ್ಯಾಸ ಗುರುತಿಸುತ್ತಾರೆ. ಎರಡೂ ಖಚಿತ ಮಾದರಿಗಳೇ ಆಗಿವೆ. ಕೆಲ ಕೆಲವು ದೃಷ್ಟಿಗಳಿಂದ ತಾವೇ ಮೇಲು ಎಂದು ಎರಡೂ ಪಕ್ಷಗಳು ಹೇಳುತ್ತವೆ. ಹಳ್ಳಿಗರು ಸಾಮಾನ್ಯವಾಗಿ ಸರಳಜೀವಿಗಳು, ಮುಗ್ಧರು, ನಗರವಾಸಿಗಳು ಚುರುಕು ಬುದ್ಧಿಯವರು, ನಂಬಿಕೆಗೆ ಅರ್ಹರಲ್ಲದವರು ಎಂದು ಭಾವಿಸಲಾಗುತ್ತದೆ. ಈ ನಿರ್ದಿಷ್ಟ ವೈಶಿಷ್ಟ್ಯಗಳು ಒತ್ತಟ್ಟಿಗಿರಲಿ, ಹಳ್ಳಿಯ ಜನರ ಹಾಗೂ ಪಟ್ಟಣದ ಜನರ ನಡುವೆ ಸುವ್ಯವಸ್ಥಿತವಾದ ಆರ್ಥಿಕ, ಧಾರ್ಮಿಕ, ರಾಜಕೀಯ ಮತ್ತು ಸಾಮಾಜಿಕ ಕೊಳುಕೊಡೆಗಳಿರುತ್ತವೆ. ಜಾಜಮಾನಿ ಸಂಬಂಧಗಳ ಹಾಗೂ ಜಾತಿಪಂಚಾಯತಿಗಳ ವಿಷಯವಾಗಿ ಹೇಳುವುದಾದರೆ, ಸಣ್ಣಪುಟ್ಟ ಪಟ್ಟಣಗಳಲ್ಲಿನ ಮಾದರಿಯು ಬಹುಮಟ್ಟಿಗೆ ಹಳ್ಳಿಯ ಮಾದರಿಯಂತೆಯೇ ಇರುತ್ತದೆ. ಜಾತಿ ಪಂಚಾಯತಿ ಮಾತ್ರ ಪಟ್ಟಣದಲ್ಲಿ ದುರ್ಬಲ ಎಂದು ಹೇಳಬಹುದು. ದೊಡ್ಡ ನಗರಗಳಿಗೆ ವಲಸೆ ಹೋಗಿ ಸೇರಿಕೊಳ್ಳುವವರು ಬೇರೆಯೇ ಸ್ಥಿತಿಯಲ್ಲಿರುತ್ತಾರೆ. ಅವರು ಪೂರ್ಣ ಪ್ರಮಾಣದಲ್ಲಿ ಜಾಜಮಾನಿ ಸಂಬಂಧವಿರಿಸಿಕೊಳ್ಳಲೂ ಸಾಧ್ಯವಿಲ್ಲ. ಜಾತಿ ಪಂಚಾಯತಿಗಳೂ ಅವರಲ್ಲಿ ಇರುವುದಿಲ್ಲ. ತಮ್ಮ ಪ್ರದೇಶದ ಜನರನ್ನು ಹುಡುಕಿ ಹುಡುಕಿ ಅವರೊಂದಿಗೆ ಸಂಬಂಧ ಇರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಕ್ಲಬ್ ಮಾದರಿಯ ಕೂಟಗಳಲ್ಲಿ ಆಗಾಗ ಅವರು ಒಟ್ಟು ಸೇರುತ್ತಾರೆ. ಪ್ರಾದೇಶಿಕ ಹಬ್ಬಗಳನ್ನು ಅವರು ಎಲ್ಲರೂ ಸೇರಿ ಒಟ್ಟಿಗೆ ಆಚರಿಸುತ್ತಾರೆ. ಹಳ್ಳಿಯಲ್ಲಿರುವ ತಮ್ಮ ಬಂಧುಗಳಿಗೆ ಕ್ರಮತಪ್ಪದೇ ಹಣ ಕಳುಹಿಸುತ್ತಾರೆ. ವರ್ಷಕ್ಕೊಮ್ಮೆ ಹಳ್ಳಿಗೆ ಭೇಟಿ ಕೊಡುತ್ತಾರೆ. ಜೊತೆಗೆ ಮದುವೆ, ಮರಣ ಮೊದಲಾದ ವಿಶೇಷ ಸಂದರ್ಭಗಳಲ್ಲಿ ಬಂದು ಭಾಗವಹಿಸುತ್ತಾರೆ. ಆದರೆ ಕಾಲವು ಕುಟುಂಬದ ಬೆಸುಗೆಯನ್ನು ಸವೆಯಿಸುತ್ತದೆ; ಮನಿಯಾರ್ಡರುಗಳು ಕ್ರಮ ತಪ್ಪುತ್ತವೆ, ಭೇಟಿಯೂ ವಿರಳವಾಗುತ್ತದೆ.

ನಗರದ ಇನ್ನೊಂದು ಲಕ್ಷಣವೂ ಇಲ್ಲಿ ಗಮನಾರ್ಹವಾಗಿದೆ. ಅನೇಕ ಜಾತಿ ಸಂಸ್ಥೆಗಳನ್ನು ರೂಪಿಸಲಾಗುತ್ತದೆ; ಅವುಗಳಲ್ಲಿ ಕೆಲವು ಪಟ್ಟಣದಲ್ಲಿರುವಂಥವು, ಇನ್ನು ಕೆಲವು ಪ್ರಾದೇಶಿಕ ರೂಪದವು, ಮಿಕ್ಕವು ಅಖಿಲಭಾರತ ವ್ಯಾಪ್ತಿಯನ್ನು ಹೊಂದಿರುವಂಥವು. ಅವುಗಳಲ್ಲಿ ಹಲವು ಅಲ್ಪಕಾಲಿಕವಾದವು, ಆದರೆ ಬಹುಮುಖ್ಯವಾದ ಕಾರ್ಯಸೂಚಿಯನ್ನೂ ಮತ್ತು ಕಾರ್ಯ ಯೋಜನೆಗಳನ್ನೂ ಹೊಂದಿರುತ್ತವೆ. ವಿವಾಹ ಮತ್ತು ಮರಣ ಸಂಬಂಧದ ಆಚರಣೆಗಳನ್ನು ಸರಳಗೊಳಿಸುವಿಕೆ, ಜಾತಿ ನಿಯಮಗಳನ್ನು ಉಲ್ಲಂಘಿಸದಿರುವಿಕೆ ಮೊದಲಾದ ಆಂತರಿಕ ಸುಧಾರಣೆಗಳನ್ನು ಅವು ಚರ್ಚಿಸುತ್ತವೆ. ಅನೇಕ ವೇಳೆ ಈ ಸಂಸ್ಥೆಗಳನ್ನು "ಸಂಪ್ರದಾಯವಾದಿ" ಮತ್ತು "ಆಧುನಿಕತಾವಾದಿ" ಎಂದು ವರ್ಗೀಕರಿಸಬಹುದು. ಕೆಲವು ಸಂಸ್ಥೆಗಳು ತಮ್ಮದೇ ಆದ ನಿಯತಕಾಲಿಕ ಪತ್ರಿಕೆಗಳನ್ನು ಪ್ರಕಟಿಸುತ್ತವೆ,

ದೇವಾಲಯಗಳನ್ನು ನಿರ್ಮಿಸುತ್ತವೆ, ವಿದ್ಯಾರ್ಥಿನಿಲಯಗಳನ್ನೂ, ಧರ್ಮಶಾಲೆಗಳನ್ನೂ ಕಟ್ಟುತ್ತವೆ. ಇಂತಹ ಸಂಸ್ಥೆಗಳು ಬಲಯುತವಾಗಿರುವ ಸ್ಥಳಗಳಲ್ಲಿ ರಾಜಕೀಯ ಪ್ರಕ್ರಿಯೆಯನ್ನು ಸೇರಿಕೊಳ್ಳುತ್ತವೆ. ತಮ್ಮ ಜಾತಿಯ ಅಥವಾ ತಮಗೆ ಹಿತನಾದ ಅಭ್ಯರ್ಥಿಯ ಪರವಾಗಿ ವೋಟುಗಳನ್ನು ರೂಢಿಸುವ ಕೆಲಸವನ್ನೂ ಮಾಡುತ್ತವೆ.

ಗ್ರಾಮ–ನಗರ ಸಂಪರ್ಕ ಹೆಚ್ಚುತ್ತಾ ಹೋದ ಹಾಗೆ, ಎರಡು ಜೀವನ ನಿಯಮಗಳು ನಿರ್ದಿಷ್ಟವಾಗಿ ರೂಪುಗೊಳ್ಳುತ್ತವೆ. ಹಳ್ಳಿಯಲ್ಲಿ ಜನರ ಧಾರ್ಮಿಕವಾದ ಮಡಿವೈಲಿಗೆ, ಸಹಪಂಕ್ತಿ ಭೋಜನ ನಿಯಮಗಳು, ಕಟ್ಟುನಿಟ್ಟಾದ ಸ್ವಜಾತಿ ವಿವಾಹ ಇತ್ಯಾದಿ. ನಗರಗಳಲ್ಲಿ ಈ ನಿಯಮಗಳು ಗಣನೀಯವಾಗಿ ಸಡಿಲಗೊಂಡಿವೆ. ಕಿಕ್ಕಿರಿದ ಬಸ್ಸಿನಲ್ಲಿ ನಿಮ್ಮ ಪಕ್ಕದಲ್ಲಿ ಕುಳಿತಿರುವವನದು ಯಾವ ಜಾತಿ ಎಂದು ಗುರುತಿಸಲು ಸಾಧ್ಯವಿಲ್ಲ. ಅಥವಾ ಸಾರ್ವಜನಿಕ ಭೋಜನಾಲಯದಲ್ಲಿ ಅಡಿಗೆ ಮಾಡುವವನೋ ಬಡಿಸುವವನೋ ಯಾವ ಜಾತಿ ಎಂದು ಕೇಳಲೂ ಬರುವುದಿಲ್ಲ. ಇನ್ನು ಮದುವೆಯಲ್ಲಿ ವಧು–ವರರ ಆಯ್ಕೆ ಆ ಜಾತಿಗೇ ಸೀಮಿತವಾಗಿರುವಂತೇನೂ ಇಲ್ಲ. ಹೆಚ್ಚು ಕಡಿಮೆ ಸಮಾನ ಧಾರ್ಮಿಕಾಚರಣೆಗಳಿರುವ ಇತರ ಜಾತಿಗಳೊಂದಿಗೆ ಕೂಡ ಈ ಸಂಬಂಧ ಬೆಳೆಸಬಹುದು. ನಗರಗಳಲ್ಲಿನ ಯುವ ಜನರು ಹೊಸ ಹೊಸ ದಾರಿಗಳನ್ನು ಹಿಡಿಯುತ್ತಾರೆ. ಅವರ ಜೀವನ ವಿಧಾನದಲ್ಲಿ ಸಾಂಪ್ರದಾಯಿಕ ನಿಯಮಗಳ ಪಾಲನೆಗೆ ಅಷ್ಟಾಗಿ ಪ್ರಾಧಾನ್ಯವಿರುವುದಿಲ್ಲ.

ಹಳ್ಳಿಗಳ ನಡುವೆ ಈಗ ಹಿಂದಿಗಿಂತಲೂ ಉತ್ತಮವಾದ ಸಂಪರ್ಕ ಏರ್ಪಟ್ಟಿದೆ. ಹಳ್ಳಿಗಳಿಗೆ ನಗರ ಪ್ರದೇಶದೊಂದಿಗೆ ಕೂಡ, ಬಸ್ಸುಗಳು ಆಡಳಿತೀಯ ಮತ್ತು ವ್ಯಾಪಾರೀ ಕೇಂದ್ರಗಳೊಂದಿಗೆ ಸಂಪರ್ಕ ಕಲ್ಪಿಸುತ್ತವೆ. ಹಸಿರುಕ್ರಾಂತಿಯ ಪ್ರದೇಶಗಳಲ್ಲಿ ಟ್ರಾಕ್ಟರಿಗೆ ಜೋಡಿಸಿದ ಟ್ರೇಲರ್‌ಗಳಲ್ಲಿ ಜನರು ತಂಡತಂಡವಾಗಿ ಕುಳಿತು ಅಲ್ಲಿಂದಿಲ್ಲಿಗೆ ಓಡಾಡುವುದನ್ನು ನೋಡಬಹುದು. ಕೈಗಾರಿಕೆಯು ಗ್ರಾಮಾಂತರ ಮಾರುಕಟ್ಟೆಗೆಂದೇ ವಿಶಿಷ್ಟವಾದ ಕೆಲವು ಸಾಮಗ್ರಿಗಳನ್ನು ಉತ್ಪತ್ತಿ ಮಾಡುತ್ತದೆ. ಆದರೂ ಪದಾರ್ಥಗಳನ್ನು ಕೊಳ್ಳಲು ನಗರದ ಪೇಟೆ ಬೀದಿಗೆ ಹಳ್ಳಿಗರು ಹೋಗುವುದು ಹೆಚ್ಚಾಗುತ್ತಲೇ ಇದೆ. ವಿದ್ಯುತ್ ಸಂಪರ್ಕ ಮತ್ತು ಕೈಪಂಪುಗಳಿರುವ ಹಳ್ಳಿಗಳ ಸಂಖ್ಯೆ ಹೆಚ್ಚಿದೆ. ರೇಡಿಯೋ, ಟ್ರಾನ್ಸಿಸ್ಟರ್ ಈಗ ಹಳ್ಳಿಗಳಲ್ಲಿ ಹೊಚ್ಚ ಹೊಸ ವಸ್ತುವಾಗಿ ಉಳಿದಿಲ್ಲ. ಈಗ ಟೆಲಿವಿಷನ್ ಕೂಡ ಹಳ್ಳಿಗಳನ್ನು ಪ್ರವೇಶಿಸಿದೆ. ತಕ್ಕಮಟ್ಟಿಗೆ ಉಳ್ಳವರು ಸ್ವಂತದ ಟಿ.ವಿ. ಇಟ್ಟುಕೊಳ್ಳುತ್ತಾರೆ. ಸರಕಾರವೂ ಸಮುದಾಯ ಟಿವಿ ಸೆಟ್ಟುಗಳನ್ನು ಹಲವು ಹಳ್ಳಿಗಳಿಗೆ ಹಂಚಿದೆ. ರಸ್ತೆ ಪಕ್ಕದ ಹಳ್ಳಿಗಳಲ್ಲಿ ಅಲ್ಲಲ್ಲಿ "ಟಿವಿ – ವಿಸಿಆರ್ ಪಾರ್ಲರು" ಗಳನ್ನು ನೋಡಬಹುದು. ಒಳನಾಡಿನ ದೊಡ್ಡ ದೊಡ್ಡ ಹಳ್ಳಿಗಳಲ್ಲೂ ಇವು ಇರುತ್ತವೆ. ಸುಸಜ್ಜಿತ ಕೊಠಡಿ ಎಂಬ ಹೆಸರು ಇವಕ್ಕೆ ಹೊಂದುವುದಿಲ್ಲ. ಅರೆಮುರಿದ ಕಟ್ಟಡಗಳಲ್ಲೋ, ಹುಲ್ಲುಚಾವಣಿಯ ಗುಡಿಸಲುಗಳಲ್ಲೋ ಇವು ಇರುತ್ತವೆ. ಆದರೆ ಅಲ್ಲಿ ಬೇಕಾದ

ಹಾಗೆ ವ್ಯಾಪಾರ ನಡೆಯುತ್ತದೆ. ನಡೆಸುವವರು ಅಪಾರವಾಗಿ ಹಣ ಮಾಡುತ್ತಾರೆ. ಏಕೆಂದರೆ ವಿದೇಶದ ಅಥವಾ ಸ್ವದೇಶದ ಅಶ್ಲೀಲ ಚಿತ್ರಗಳನ್ನು ಪ್ರದರ್ಶಿಸಿದರೂ ಅಲ್ಲಿಗೆ ಪೋಲೀಸರ ಮಧ್ಯಪ್ರವೇಶ ಇರುವುದಿಲ್ಲವಾದ್ದರಿಂದ ಜನರು ಹೆಚ್ಚು ಸಂಖ್ಯೆಯಲ್ಲಿ ಹೋಗುತ್ತಾರೆ. ವ್ಯಾಪಾರ ಅಬಾಧಿತವಾಗಿ ನಡೆಯುತ್ತದೆ. ಭಾಷೆ ಅರ್ಥವಾಗದಿದ್ದರೂ ಏನೂ ಚಿಂತೆಯಿಲ್ಲ. ಹಳ್ಳಿಯ ಕೃಷಿಕರು ನಗರದ ಕ್ಯಾಬರೆ ಕುಣಿತಗಳನ್ನು ಪೋಷಿಸುವುದು ಈಗ ಸಾಮಾನ್ಯವಾದ ವಿಚಾರ. ಕೆಲವು ಸಣ್ಣ ಹಳ್ಳಿಗಳೂ ಆಗಿಂದಾಗ ತಾವು ಇಂತಹ ಪ್ರದರ್ಶನಗಳನ್ನೇರ್ಪಡಿಸುತ್ತೇವೆ ಎಂದು ಹೆಮ್ಮೆ ಪಟ್ಟುಕೊಳ್ಳುತ್ತವೆ. ಹಳ್ಳಿಯ ಸಂತೆಗಳಿಗೂ ಈಗ ಇಂತಹ ಪ್ರದರ್ಶನಗಳು ಬರುತ್ತವೆ. ಹಬ್ಬ, ಉತ್ಸವ ಮೊದಲಾದ ಸಂದರ್ಭಗಳಲ್ಲಿ ಜನಪ್ರಿಯ ಸಿನಿಮಾ ಸಂಗೀತವನ್ನು ಧ್ವನಿವರ್ಧಕಗಳ ಮೂಲಕ ಪ್ರಸರಿಸಲಾಗುತ್ತದೆ. ಜನಪದ ಸಂಸ್ಕೃತಿಯ ಮೇಲೆ ಅದರ ಪ್ರಭಾವ ಉಳಿಯುತ್ತಿದೆ. ದೊಡ್ಡ ಹಳ್ಳಿಗಳಲ್ಲೂ ಚಿಕ್ಕ ಪಟ್ಟಣಗಳಲ್ಲೂ ಕಾಣುವ "ಕಾನ್ವೆಂಟುಗಳು" ಮತ್ತು "ಪಬ್ಲಿಕ್ ಸ್ಕೂಲು"ಗಳು ವಿಕಟ ಚಿತ್ರವನ್ನು ಒದಗಿಸುತ್ತವೆ. ಏಕೆಂದರೆ ಅವುಗಳಲ್ಲಿ ಹೆಚ್ಚಿನವು ನಗರ ಪ್ರದೇಶಗಳಲ್ಲಿ ಈ ಹೆಸರುಗಳಿಂದ ನಡೆಯುವ ವಿದ್ಯಾ ಸಂಸ್ಥೆಗಳ ಪೇಲವ ಅನುಕರಣಗಳು. ಈ ಸಂಸ್ಥೆಗಳು ಬೆಳೆಯುತ್ತಿವೆ. ಏಕೆಂದರೆ ಅಲ್ಲಿಗೆ ಮಕ್ಕಳನ್ನು ಕಳಿಸುವುದು ಪ್ರತಿಷ್ಠೆಯ ಸಂಕೇತವಾಗಿದೆ. ವಿಶೇಷತಃ ಪಂಜಾಬು ಮತ್ತು ಕೇರಳಗಳಲ್ಲಿ ಕೊಲ್ಲಿ ಹಣವು ನೂತನ ವಾಸ್ತುಶಿಲ್ಪ ವಿನ್ಯಾಸಗಳಿಗೆ ಅವಕಾಶ ಮಾಡಿಕೊಟ್ಟಿದೆ. ಕಣ್ಣಿಗೆ ರಾಚುವ ಆಡಂಬರದ ಮನೆಗಳು, ಅವುಗಳನ್ನು ಕಟ್ಟಲು ಬಳಸಿದ ಹಣ ಎಲ್ಲಿಂದ ಬಂದದ್ದು ಎಂಬುದನ್ನು ಸೂಚಿಸುತ್ತವೆ. ಕೃಷಿ ಶ್ರೀಮಂತಿಕೆಯಿರುವ ಕೆಲ ಪ್ರದೇಶಗಳಲ್ಲಿ ಕುತೂಹಲಕಾರಿಯಾದ "ಇಂಗ್ಲಿಷ್ ವೈನ್ ಷಾಪ್" ಎಂಬ ಬೋರ್ಡು ಕಾಣಸಿಕ್ಕುವುದುಂಟು. ಅಲ್ಲಿ ಮಾರುವುದು ಖಂಡಿತವಾಗಿಯೂ ಇಂಗ್ಲೆಂಡಿನಲ್ಲಿ ಉತ್ಪಾದನೆಯಾದ ಮದ್ಯವಲ್ಲ; ಹೆಂಡ, ವೈನಲ್ಲ. ಹೀಗೆ ಹಳ್ಳಿಗರು ನಗರ ಪ್ರದೇಶಗಳ ಸಂಪರ್ಕ ಪಡೆದು ಜಾನಪದ ಮತ್ತು ಜನಪ್ರಿಯ ಸಂಸ್ಕೃತಿಗಳ ವಿಚಿತ್ರ ಮಿಶ್ರಣವನ್ನು ಬೆಳೆಸುತ್ತಿದ್ದಾರೆ ಎಂದು ಹೇಳಬಹುದು.

ಗ್ರಾಮಜೀವನ – ನಗರ ಜೀವನಗಳ ಗುಣಾವಗುಣಗಳನ್ನು ಕುರಿತ ಚರ್ಚೆ, ವಿವಾದ ಹಿಂದೆ ನಡೆಯುತ್ತಿತ್ತು, ಇಂದೂ ನಡೆಯುತ್ತಿದೆ. ಬಹುಶಃ ಭವಿಷ್ಯತ್ತಿನಲ್ಲೂ ಮುಂದುವರಿಯಬಹುದು. ನಗರಗಳು ಒಂದು ಬಗೆಯಲ್ಲಿ ಶಕ್ತಿಕೇಂದ್ರಗಳು. ಇದನ್ನು ಸದಾ ಗುರುತಿಸಲಾಗಿದೆ. ಅವು ವಿದ್ಯೆಯ, ಕೈಗಾರಿಕೆಯ ಕೇಂದ್ರಸ್ಥಾನಗಳು. ಅಲ್ಲಿ ರಾಜಕೀಯ ನಾಯಕತ್ವ, ಸಾರ್ವಜನಿಕ ಅಭಿಪ್ರಾಯ ರೂಪುಗೊಳ್ಳುತ್ತದೆ. ಅದರದ್ದೆ ಒಂದು ನಿರ್ದಿಷ್ಟ ಜೀವನ ವಿಧಾನವುಂಟು. ಹಳ್ಳಿಯ ಜನತೆ ಅದರೊಡನೆ ಸ್ಪರ್ಧಿಸುತ್ತದೆ. ಬದಲಾವಣೆಯ ಶಕ್ತಿಯುತ ಪ್ರೇರಣೆಗಳು ಹೆಚ್ಚು ಕಡಮೆ ಯಾವಾಗಲೂ ನಗರಕೇಂದ್ರಗಳಿಂದ ಉದಿಸಿವೆ. ಇಪ್ಪತ್ತನೆಯ ಶತಮಾನದ ಕೊನೆಯ ದಶಕದಲ್ಲಿ ಹಳ್ಳಿಗಳ ಮತ್ತು ನಗರದ ನಡುವೆ ಹೆಚ್ಚುತ್ತಿರುವ ಘರ್ಷಣೆ ಕಂಡುಬರುತ್ತಿದೆ: ಆದರೆ ಅದು ಪರಂಪರೆಯಿಂದ ಬಂದ ಗ್ರಾಮಜೀವನ ವಿಧಾನವನ್ನು

ಸಂರಕ್ಷಿಸಿಕೊಳ್ಳುವ ಉದ್ದೇಶವನ್ನು ಹೊಂದಿಲ್ಲ. ನಗರಗಳು ಸದಾ ಅನುಭವಿಸುತ್ತಾ ಬಂದಿರುವ ಕೆಲವು ಸುಖ, ಸೌಲಭ್ಯಗಳನ್ನು ತಾವೂ ಗಳಿಸಿಕೊಳ್ಳಬೇಕೆಂಬ ಉದ್ದೇಶದಿಂದ ಅಷ್ಟೆ. ದೇಶದ ನಾಯಕತ್ವದಲ್ಲಿ ಗ್ರಾಮೀಣ ಹಾಗೂ ನಗರ ಭಾಗಗಳ ನಡುವೆ ಹೊಸ ಅರಿವು ಮೂಡೀತೆಂಬ ನಿರೀಕ್ಷೆಯಿದೆ. ಇದರ ಪರಿಣಾಮವಾಗಿ ಹಳ್ಳಿಗಳ ಕಡೆಗೆ ಹೆಚ್ಚಿನ ಮತ್ತು ಉತ್ತಮ ಗಮನ ಕೊಡುವುದು ಸಾಧ್ಯವಾಗಬಹುದು.

# ನಗರೀಕರಣದ ಮಾದರಿಗಳು

1981ರ ಜನಗಣತಿಯ ಪ್ರಕಾರ ಭಾರತದ ಜನಸಂಖ್ಯೆಯ ಶೇಕಡಾ 76.67 ಜನರು 5,57,137 ಹಳ್ಳಿಗಳಲ್ಲಿ ವಾಸಮಾಡುತ್ತಿದ್ದಾರೆ. ದೇಶದ ಒಟ್ಟು ಜನತೆಯ ಶೇ. 66.52ರಷ್ಟು ಕೃಷಿ ಅಥವಾ ಬೇಸಾಯದಲ್ಲಿ ನಿರತ; ಗ್ರಾಮ ಜನಸಂಖ್ಯೆಯ ಶೇ. 10ಕ್ಕಿಂತ ಸ್ವಲ್ಪ ಹೆಚ್ಚು ಭಾಗ ಕೃಷಿಯೇತರ ವೃತ್ತಿಗಳಲ್ಲಿ ತೊಡಗಿದ್ದಾರೆ. ಇದರಿಂದಾಗಿ ಇಡೀ ದೇಶಕ್ಕೇ ಒಂದು ಬೇಸಾಯದ ರಂಗು ಬಂದಿದೆ. ಆದರೆ ಈಗಾಗಲೇ ನಾವು ನೋಡಿರುವಂತೆ "ಗ್ರಾಮಗಳು ಪುಟ್ಟ ಗಣರಾಜ್ಯಗಳು, ಅವರಿಗೆ ಅಗತ್ಯವಾದುದೆಲ್ಲವನ್ನೂ ಅವರು ಪಡೆದಿದ್ದಾರೆ.... ಯಾವುದೇ ವಿದೇಶೀ ಸಂಪರ್ಕದಿಂದ ಸ್ವತಂತ್ರರಾಗಿದ್ದಾರೆ" ಇತ್ಯಾದಿಯಾದ ಭ್ರಮೆಗಳಿಗೆ ಒಳಗಾಗಬಾರದು, ಅವುಗಳನ್ನು ನಂಬಬಾರದು. ಇದನ್ನು ಹೇಳಿದ್ದವನು ಚಾರಲ್ಸ್ ಮೆಟ್ಕಾಫ್. ಯುದ್ಧಗಳು, ಆಡಳಿತ ಬದಲಾವಣೆಗಳು ಗ್ರಾಮ ಸಮುದಾಯಗಳ ಮೇಲೆ ದುಷ್ಪರಿಣಾಮ ಬೀರಲಿಲ್ಲ ಎಂದೂ, ಅವು "ಅಪರಿವರ್ತಿತ, ಅವಿಚಲಿತ, ಸ್ವಯಂಪೂರ್ಣ ಆಗಿ ಉಳಿದುವು" ಎಂದೂ ಅವನು ಹೇಳಿದ್ದು ತಪ್ಪು. ಯುದ್ಧಗಳಿಂದ, ಆಡಳಿತ ಬದಲಾವಣೆಗಳಿಂದ, ಈ ಗ್ರಾಮಸಮುದಾಯಗಳ ಮೇಲೂ ಖಂಡಿತವಾಗಿಯೂ ಪರಿಣಾಮವಾಗಿದೆ. ಭೂಹಿಡುವಳಿ, ಗುತ್ತಿಗೆ, ಭೂಮಾಲೀಕತ್ವದ ಮಾದರಿಗಳು, ಗ್ರಾಮದ ವೃತ್ತಿಗಳು, ಕರ-ಕುಶಲ ಕಲೆಗಳು ಇವುಗಳಲ್ಲೆಲ್ಲ ಬದಲಾವಣೆಯಾಗಿ ಅದರಿಂದ ಹೊಸ ಪ್ರಭಾವಶಾಲೀ ಗುಂಪುಗಳ ಉದಯ ಆಗಿರುವುದು ಕಂಡುಬರುತ್ತದೆ. ಆದರೆ ಯುದ್ಧ ವಿಜಯಗಳು ಪರಾಭವಗಳಿಗಿಂತ ಮಿಗಿಲಾಗಿ, ಗ್ರಾಮಜೀವನ ಮಾದರಿಗಳು ಆಡಳಿತ, ವ್ಯಾಪಾರ, ವಾಣಿಜ್ಯ, ಧರ್ಮ ಮೊದಲಾದ ವಿವಿಧ ಕ್ಷೇತ್ರಗಳಲ್ಲಿ ಗ್ರಾಮ, ನಗರ ಅಂತರ್‌ಕ್ರಿಯೆಯಿಂದ ಪ್ರಭಾವಗೊಂಡಿವೆ.

ಸಿಂಧೂಕಣಿವೆಯ ನಾಗರಿಕತೆಯಲ್ಲಿ ನಗರಕೇಂದ್ರಗಳು ಆಹಾರ ಸಾಮಗ್ರಿಗಳಿಗಾಗಿ ಹಿನ್ನಾಡನ್ನು ಅಥವಾ ಒಳನಾಡನ್ನು ಅವಲಂಬಿಸಿದ್ದುವು. ಸುತ್ತುಮುತ್ತಣ ಗ್ರಾಮೀಣ ಪ್ರದೇಶಗಳ ಮೇಲೆ ಗಮನಾರ್ಹವಾದ ಸಾಂಸ್ಕೃತಿಕ ಮತ್ತು ಧಾರ್ಮಿಕ ಪ್ರಭಾವವನ್ನು ಹೊಂದಿದ್ದುವು ಎಂದು ಭಾವಿಸಬಹುದಾಗಿದೆ. ಇದು ಕ್ರಿ.ಪೂ. 2500ರ ಸುಮಾರಿನಲ್ಲಿ,

ಆಧಾರಗಳ ಪ್ರಕಾರ ಪ್ರಾಚೀನ ಭಾರತದಲ್ಲಿ ಹಲವು ಬಗೆಯ ನಗರ ಕೇಂದ್ರಗಳಿದ್ದುವು – ರಾಜಕೀಯ ಕೇಂದ್ರಗಳು (ರಾಜಧಾನಿ); ಸೈನ್ಯಬಲವಿರುವ ಕೋಟೆಯುಳ್ಳ ನಗರ (ದುರ್ಗ); ಹಲವು ಗಾತ್ರದ ಉತ್ಪಾದನೆ ಮತ್ತು ವ್ಯಾಪಾರಗಳಲ್ಲಿ ತೊಡಗಿದ್ದವು. ಕೋಟೆಯುಳ್ಳ ದೊಡ್ಡ ಪಟ್ಟಣಗಳನ್ನು ನಗರ ಎನ್ನುತ್ತಿದ್ದರು. ನದಿ ಅಥವಾ ಸಮುದ್ರದಂಡೆಯ ಮೇಲೆ ವಾಣಿಜ್ಯ ನಡೆಸುವ ಪಟ್ಟಣಗಳಿದ್ದುವು. ಸಣ್ಣ ಪ್ರಮಾಣದ, ಗಾತ್ರದ ವ್ಯಾಪಾರ ಕೇಂದ್ರಗಳನ್ನು *ದ್ರೋಣಾಮುಖ* ಅಥವಾ *ಖೇಟ* ಎನ್ನುತ್ತಿದ್ದರು. ನಳಂದಾ, ತಕ್ಷಶಿಲಾ ಮೊದಲಾದ ಶೈಕ್ಷಣಿಕ, ಬೌದ್ಧಿಕ ಕೇಂದ್ರಗಳಿದ್ದುವು. ಮುಖ್ಯವಾದ ದೇವಾಲಯ ನಗರಗಳು, ತೀರ್ಥಯಾತ್ರಾ ಕೇಂದ್ರಗಳು, ಬದರೀನಾಥ್, ದ್ವಾರಕಾ, ಪುರಿ, ರಾಮೇಶ್ವರಂ, ಹರಿದ್ವಾರ, ಪ್ರಯಾಗ, ವಾರಣಾಸಿ, ಗಯಾ ಮತ್ತು ತಿರುಪತಿ ಇಂಥವು ಇದ್ದುವು. ಮೊದಮೊದಲ ಐತಿಹಾಸಿಕ ನಗರಗಳು ಕ್ರಿ.ಪೂ. 600ರ ಸುಮಾರಿನಲ್ಲಿ ಉದಯಿಸಿದುವು. ಅದೇ ಪ್ರವೃತ್ತಿ ಮುಂದುವರಿಯಿತು. ಬೇರೆಬೇರೆ ರಾಜವಂಶಗಳು ತಮ್ಮ ಸಾಮ್ರಾಜ್ಯದ ರಾಜಧಾನಿಗಳನ್ನು ಕಟ್ಟಿದರು. ಹಳೆಯ ದುರ್ಗಗಳನ್ನು ಬಿಗಿಗೊಳಿಸಿದರು. ಹೊಸವನ್ನು ನಿರ್ಮಿಸಿದರು. ಹಿಂದೂಧರ್ಮ, ಜೈನಧರ್ಮ, ಬೌದ್ಧಧರ್ಮ, ಕ್ರೈಸ್ತಧರ್ಮ ಮತ್ತು ಸಿಖ್‌ಧರ್ಮ ಈ ಪ್ರಮುಖ ಧರ್ಮಗಳು ತಮ್ಮತಮ್ಮ ಪ್ರಧಾನ ಪೂಜಾಸ್ಥಾನಗಳನ್ನೂ, ಸಾಮಾನ್ಯ ಯಾತ್ರಾ ಕೇಂದ್ರಗಳನ್ನೂ ಕಟ್ಟಿದುವು. ಅಮೇಲೆ ಧಾರ್ಮಿಕ ಹಾಗೂ ಲೌಕಿಕ ವಿದ್ಯಾಕೇಂದ್ರಗಳಿದ್ದುವು. ಕೆಲವು ವ್ಯಾಪಾರ–ವಾಣಿಜ್ಯ ಕೇಂದ್ರಗಳು ಅಭಿವೃದ್ಧಿಯಾಗುತ್ತಲೇ ಹೋದುವು. ಕೆಲವು ಕ್ಷೀಣಿಸಿದುವು. ಹೊಸ ಕೇಂದ್ರಗಳು ಹುಟ್ಟಿಕೊಂಡುವು. ಇವುಗಳ ಪ್ರಭಾವಕ್ಕೆ ಒಳಗಾಗಿ ಎಲ್ಲೋ ಕೆಲವು ಅತಿ ಮೂಲೆಯ ಆದಿವಾಸಿ ಬುಡಕಟ್ಟುಗಳನ್ನು ಬಿಟ್ಟರೆ, ಮಿಕ್ಕ ಹಳ್ಳಿಗಳು ಸ್ವತಂತ್ರವಾಗಿ, ಸ್ವಸಂಪೂರ್ಣವಾಗಿ ಉಳಿಯಲು ಸಾಧ್ಯವಾಗಲಿಲ್ಲ.

ಗ್ರಾಮಗಳ ಮತ್ತು ನಗರಗಳ ಸಮಾಜವ್ಯವಸ್ಥೆಯಲ್ಲಿ ಆದ ಬದಲಾವಣೆಗಳನ್ನು ಕುರಿತು ಸಂಕ್ಷೇಪವಾಗಿ ಐದನೆಯ ಅಧ್ಯಾಯದಲ್ಲಿ ಹೇಳಿದ್ದಾಗಿದೆ. ಈಗ ಕಳೆದ ನೂರು ವರ್ಷಗಳ ಅವಧಿಯಲ್ಲಿ ಭಾರತದಲ್ಲಿ ಕಂಡುಬಂದ ನಗರೀಕರಣ ಮಾದರಿಗಳನ್ನು ವಿವರವಾಗಿ ನೋಡಿ, ಅವುಗಳ ಕೆಲವು ಸಾಮಾಜಿಕ ಪರಿಣಾಮಗಳನ್ನು ಮೌಲ್ಯಮಾಪನ ಮಾಡುವದು ಅಗತ್ಯವಿದೆ. ಪಟ್ಟಣಗಳು ಮತ್ತು ನಗರಗಳು ಸಮಾಜರಚನೆಯ ಘಟಕಗಳಾಗುವುದಿಲ್ಲ. ಆದರೆ ಅಂತಹ ಘಟಕಗಳ ಕಾರ್ಯವಿಧಾನದ ಮೇಲೆ ಅವು ಖಂಡಿತವಾಗಿಯೂ ಪ್ರಭಾವ ಹೊಂದಿರುತ್ತವೆ. ನಿರ್ದಿಷ್ಟ ಸಾಂಸ್ಥಿಕ ಲಕ್ಷಣಗಳನ್ನು ಅವು ಹೊಂದಿರುತ್ತವೆ. ಒಟ್ಟಾರೆ ಭಾರತೀಯ ಸಮಾಜದಲ್ಲಿನ ಸಾಂಸ್ಕೃತಿಕ ಮತ್ತು ಸಾಮಾಜಿಕ ಪ್ರವೃತ್ತಿಗಳ ಮೇಲೆ ಬಹಳ ಮುಖ್ಯವಾದ ಗುರುತುಗಳನ್ನು ಉಳಿಸುತ್ತವೆ. ಹಾಗಾಗಿ ಭಾರತದ ಸಮಾಜ ರಚನೆಯನ್ನು ವಾಸ್ತವ ಸ್ಥಿತಿಯಲ್ಲಿ ಅರ್ಥ ಮಾಡಿಕೊಳ್ಳಬೇಕಾದ ಪಕ್ಷದಲ್ಲಿ ಸಮಾಜದ ನಗರ ಆಯಾಮವನ್ನು ತಿಳಿದುಕೊಳ್ಳುವುದು ಅತ್ಯಗತ್ಯವಾಗುತ್ತದೆ.

## ನಗರ ಕೇಂದ್ರಗಳ ವಿವರಣೆ

ಪ್ರಾಚೀನ ಮತ್ತು ಮಧ್ಯಕಾಲೀನ ಯುಗದಲ್ಲಿ ನಗರ ಹಾಗೂ ಗ್ರಾಮ ಪ್ರದೇಶಗಳ ನಡುವೆ ವ್ಯತ್ಯಾಸ ಖಚಿತವಾಗಿ ಕರಾರುವಾಕ್ಕಾಗಿ ಇರಲಿಲ್ಲ. ಅಭ್ಯಾಸದಿಂದ ಬಂದ ವಿಧಾನಗಳನ್ನು ಆಗ ಅನುಸರಿಸುತ್ತಿದ್ದರು. ಜನಸಂಖ್ಯೆಯ ಗಾತ್ರ ಗಣನೆಯ ಒಂದು ಮುಖ್ಯ ಅಂಶವಾಗಿತ್ತು. ಹಳ್ಳಿಗಳು ಚಿಕ್ಕವು, ಪಟ್ಟಣಗಳು ನಗರಗಳು ದೊಡ್ಡವು. ಎಷ್ಟು ದೊಡ್ಡವು ಎಂಬುದನ್ನು ವಿವರಿಸಿರಲಿಲ್ಲ. ನಗರ ಕೇಂದ್ರಗಳಲ್ಲಿ ಕಾರ್ಯ ವೈವಿಧ್ಯವಿತ್ತು, ವೃತ್ತಿ ನಿಪುಣತೆಯಿತ್ತು. ಮೊದಲೇ ಹೇಳಿರುವ ಹಾಗೆ ಅವುಗಳಲ್ಲಿ ಕೆಲವು ಆಡಳಿತ ಸ್ಥಳಗಳಾಗಿದ್ದುವು. ಕೆಲವು ವಾಣಿಜ್ಯ ಕೇಂದ್ರಗಳಾಗಿದ್ದುವು. ಕೆಲವು ಒಂದು ಅಥವಾ ಹೆಚ್ಚಿನ ಪರಿಣತ ಕುಶಲಕಲೆಯನ್ನು ಪ್ರತಿನಿಧಿಸಿದ್ದುವು. ಇನ್ನು ಕೆಲವು ಪ್ರಾಚೀನವೂ ಪವಿತ್ರವೂ ಆದ ಧಾರ್ಮಿಕ ಕೇಂದ್ರಗಳಾಗಿದ್ದುವು. ಯಾವುದೋ ಒಂದು ಪ್ರಧಾನ ಲಕ್ಷಣವನ್ನು ಹೊಂದಿದ್ದರೂ ತಕ್ಕ ಪ್ರಮಾಣದಲ್ಲಿ ಮಿಕ್ಕ ಹಲವು ಹತ್ತು ಕಾರ್ಯ ಚಟುವಟಿಕೆಗಳೂ ಅಲ್ಲಿ ನಡೆಯುತ್ತಿದ್ದುವು. ಒಂದು ರಾಜಧಾನಿಯು ವಾಣಿಜ್ಯ ಕೇಂದ್ರವೂ ಆಗಿರುತ್ತಿತ್ತು. ಬಹುಶಃ ಶೈಕ್ಷಣಿಕ ವೈದ್ಯಕೀಯ ಸೌಲಭ್ಯಗಳೂ ಅಲ್ಲಿರುತ್ತಿದ್ದುವು. ಫ್ರೆಂಚರು ಮತ್ತು ಪೋರ್ಚುಗೀಸರು ಭಾರತದಲ್ಲಿ ಹೆಚ್ಚು ನಗರಗಳನ್ನೇನೂ ನಿರ್ಮಿಸಲಿಲ್ಲ. ಆದರೆ ಅವರು ನಿರ್ಮಿಸಿದ ಕೆಲವು ನಗರಗಳು, ಇಂದಿಗೂ ಉಳಿದು ಬಂದಿರುವ ಕೆಲವು ವಿಶೇಷ ಲಕ್ಷಣಗಳನ್ನು ಒಳಗೊಂಡಿವೆ. ಬ್ರಿಟಿಷರಾದರೋ ಬಹು ದೀರ್ಘಕಾಲ ಇಲ್ಲಿ ಇದ್ದುದರಿಂದಾಗಿ ದೇಶದ ನಗರೀಕರಣದ ಮೇಲೆ ಹೆಚ್ಚಿನ ಪ್ರಭಾವ ಬೀರಿದರು. ಮುಂಬಯಿ, ಕಲ್ಕತ್ತಾ, ಮದರಾಸು ಈ ಮೂರು ಪ್ರೆಸಿಡೆನ್ಸಿ ನಗರಗಳ ಬೆಳವಣಿಗೆಗೆ ಮುಖ್ಯವಾಗಿ ಅವರೇ ಕಾರಣ. ಇನ್ನೂ ಹಲವು ನಗರಗಳು ಕಂಟೋನ್ಮೆಂಟು, ಸಿವಿಲ್ ಲೈನುಗಳು, ಮಾಲ್ ರಸ್ತೆಗಳಲ್ಲಿ ಬ್ರಿಟಿಷ್ ವಿನ್ಯಾಸದ ಮುದ್ರೆ ಉಳಿಸಿಕೊಂಡಿವೆ. ಹಲವು ಗಿರಿಧಾಮಗಳನ್ನೂ ಅವರು ಅಭಿವೃದ್ಧಿಪಡಿಸಿದರು. ಮುಖ್ಯವಾದ ರೈಲ್ವೆ ಜಂಕ್ಷನುಗಳು ಪಟ್ಟಣಗಳಾಗಿ ನಗರಗಳಾಗಿ ಬೆಳೆದುವು. ಆಮೇಲೆ ಹೊಸ ಕೈಗಾರಿಕಾ ನಗರಗಳು ಹುಟ್ಟಿಕೊಂಡುವು. ನಗರೀಕರಣ ವೇಗವಾಗೇನೂ ಆಗಿಲ್ಲ. ಆದರೆ ಇಡೀ ಭಾರತೀಯ ಸಮಾಜದ ಮೇಲೆ ಪ್ರಭಾವ ಬೀರುವಷ್ಟು ಗಮನಾರ್ಹವಾದದ್ದಾಗಿದೆ.

1981ರ ಗಣತಿಯ ಪ್ರಕಾರ ಭಾರತದಲ್ಲಿ 3947 ಪಟ್ಟಣಗಳು ಮತ್ತು ನಗರಗಳು ಇವೆ. ದೇಶದ ಜನತೆಯ ಶೇ. 23.33 ಅಂದರೆ ಸುಮಾರು 160 ಮಿಲಿಯನ್ ಜನರು ನಗರ ಪ್ರದೇಶಗಳಲ್ಲಿ ವಾಸ ಮಾಡುತ್ತಾರೆ. ಈ ಅಂಕಿ ಸಂಖ್ಯೆಗಳನ್ನು ಪಡೆಯಲು 1961ರ ಗಣತಿಯಲ್ಲಿ ಬಳಸಿ, 1971ಮತ್ತು 1981ರಲ್ಲಿ ಮುಂದುವರಿಸಿದ ವಿಧಾನವನ್ನು ಅನುಸರಿಸಿ "ನಗರ ಪ್ರದೇಶ" ಎಂಬುದರ ವಿವರಣೆಯನ್ನಿಟ್ಟುಕೊಂಡು ಪಡೆಯಲಾಗಿದೆ. ಒಂದು ನಗರಪ್ರದೇಶ ಎಂಬ ಅರ್ಹತೆ ಪಡೆಯಬೇಕಾದರೆ, ಮುನಿಸಿಪಲ್ ಕಾರ್ಪೊರೇಷನ್, ಮುನಿಸಿಪಲ್ ಪ್ರದೇಶಗಳು, ನಗರ ಸಂಸ್ಥೆಗಳಿಗೆ ಸೇರಿದ ಪ್ರದೇಶಗಳು, ಸೂಚಿತ ಪ್ರದೇಶಗಳು, ಅಥವಾ ಕಂಟೋನ್ಮೆಂಟ್

ಮಂಡಲಿಗಳು ಇರಬೇಕಲ್ಲದೆ 5000 ಅಥವಾ ಅದಕ್ಕಿಂತ ಹೆಚ್ಚು ಜನರು ವಾಸ ಮಾಡುತ್ತಿರಬೇಕು. ಇವರಲ್ಲಿ ಕೊನೆಯ ಪಕ್ಷ ಶೇ. 76 ಜನರು ಕೃಷಿಯೇತರ ವೃತ್ತಿಗಳಲ್ಲಿ ತೊಡಗಿರಬೇಕು; ಚದರಮೈಲಿಗೆ 1000 ವ್ಯಕ್ತಿಗಳಂತೆ ಅಥವಾ ಅದಕ್ಕೆ ಕಡಮೆಯಿಲ್ಲದೆ ಜನಸಾಂದ್ರತೆಯಿರಬೇಕು. ಕೆಲವೊಂದು ನಿರ್ದಿಷ್ಟ ನಗರ ಸೌಲಭ್ಯಗಳು, ಲಕ್ಷಣಗಳು ಇರಬೇಕು. ಹೊಸದಾಗಿ ಸ್ಥಾಪಿಸಿದ ಕೈಗಾರಿಕೆಗಳು, ಗಣನೀಯ ಗಾತ್ರದ ಬಡಾವಣೆಗಳು, ಮನರಂಜನಾ ಸ್ಥಳಗಳು, ವಿದ್ಯುತ್ತು, ನಲ್ಲಿ ನೀರು, ಸಾರ್ವಜನಿಕ ಸಾರಿಗೆ ಮೊದಲಾದುವು ಇವು. ಇದಕ್ಕೆ ಮುಂಚೆ 1901 ರಿಂದ 1961ರವರೆಗೆ ಅನುಸರಿಸುತ್ತಿದ್ದ ಸೂತ್ರದ ಪ್ರಕಾರ ಪೌರಸಂಸ್ಥೆಗಳಾದ ಮುನಿಸಿಪಾಲಿಟಿ, ಕಂಟೋನ್ಮೆಂಟ್ ಅಥವಾ ಸಿವಿಲ್ ಲೈನ್ಸ್ ಇವು ಇರಬೇಕು ಇಲ್ಲವೆ, 5000ಕ್ಕಿಂತ ಕಡಮೆಯಿಲ್ಲದ ಜನಸಂಖ್ಯೆಯಿರಬೇಕು ಎಂಬುದಾಗಿತ್ತು. ಈ ವರ್ಗೀಕರಣದಲ್ಲಿ ಸ್ವಲ್ಪಮಟ್ಟಿಗೆ ಅಸ್ಪಷ್ಟತೆಯಿತ್ತು. ಏಕೆಂದರೆ ಜನಗಣತಿಯ ಪ್ರಾಂತೀಯ ಸೂಪರಿಂಟೆಂಡೆಂಟನು ಯಾವ ನೆಲೆಗಳನ್ನು ಪಟ್ಟಣಗಳೆಂದು ಕರೆಯಬಹುದು ಎಂದು ನಿರ್ಣಯಿಸಬಹುದಾಗಿದ್ದಿತು. 1961ರ ಸೂತ್ರವನ್ನು ಅನ್ವಯಿಸಿದ್ದರಿಂದ ಆ ಮೊದಲು ಪಟ್ಟಣಗಳೆಂದು ವರ್ಗೀಕೃತವಾಗಿದ್ದ 480 ನೆಲೆಗಳು ನಗರ ಪದವಿಯನ್ನು ಕಳೆದುಕೊಂಡುವು. 1901ರಲ್ಲಿ 1914 ಪಟ್ಟಣಗಳಿದ್ದುವು; 1961ರಲ್ಲಿ ಇವುಗಳಲ್ಲಿ ನಗರ ಸ್ಥಾನಮಾನವನ್ನು ಕೇವಲ 1430 ಪಟ್ಟಣಗಳು ಉಳಿಸಿಕೊಂಡುವು. 1951ರಲ್ಲಿ 3060 ಇದ್ದ ಪಟ್ಟಣಗಳ ಸಂಖ್ಯೆ 1961ರಲ್ಲಿ 2700 ಕ್ಕೆ ಇಳಿಯಿತು. ಭಾರತದಲ್ಲಿ ಈಗ ಒಟ್ಟು 3949 ಪಟ್ಟಣಗಳು ಮತ್ತು ನಗರಗಳಿವೆ (1981ರ ಗಣತಿ). 1901ರಲ್ಲಿ ಒಟ್ಟಾರೆ ನಗರ ಜನಸಂಖ್ಯೆಯ ಶೇಕಡಾವಾರು 10.8 ಇತ್ತು; 1981ರಲ್ಲಿ ಅದು 23.3ಕ್ಕೆ ಏರಿತು. 1901 ಮತ್ತು 1941ರ ನಡುವೆ ನಗರ ಜನಸಂಖ್ಯೆ 25.85 ರಿಂದ 44.15 ಮಿಲಿಯನ್‌ಗಳಿಗೆ ಏರಿತು. 1941 ಮತ್ತು 1981ರ ನಡುವೆ ಅದು 157.68 ಮಿಲಿಯನ್ ಆಯಿತು. 1981ರ ಈ ಸಂಖ್ಯೆಯಲ್ಲಿ ಅಸ್ಸಾಂ ಜನಸಂಖ್ಯೆ ಸೇರಿಲ್ಲ. ವಿಕ್ಷುಬ್ಧ ಸ್ಥಿತಿಯಿಂದಾಗಿ ಮತ್ತು ರಾಜಕೀಯ ಕಾರಣಗಳಿಂದಾಗಿ ಅಲ್ಲಿ ಗಣತಿ ನಡೆಯಲಿಲ್ಲ. ಹಾಗಾಗಿ 1901 ಹಾಗೂ 1981ರ ಅವಧಿಯಲ್ಲಿ ಒಟ್ಟು ರಾಷ್ಟ್ರ ಜನಸಂಖ್ಯೆಯೊಂದಿಗೆ ನಗರ ಜನಸಂಖ್ಯೆಯ ಪರಿಮಾಣ ಏರಿಕೆಯನ್ನು ಗಮನಿಸಿದಾಗ ಅದು ಒಂದು ದಶಕಕ್ಕೆ ಕೇವಲ ಶೇ. 1.5 ರಷ್ಟು ಎಂಬುದು ಗೊತ್ತಾಗುತ್ತದೆ. ಬೆಳವಣಿಗೆಯ ಈ ಮಂದಗತಿಯೂ ಕೂಡ ದೊಡ್ಡ ನಗರಗಳಲ್ಲಿ ಭಾರೀ ಸಮಸ್ಯೆಗಳನ್ನು ತಂದೊಡ್ಡಿದೆ ಎಂಬುದನ್ನು ಗಮನಿಸಬೇಕು. ಈ ಮಸುಕು ಅಂಕಿ ಅಂಶಗಳು ಭಾರತೀಯ ಸಮಾಜದಲ್ಲಿ ನಗರೀಕರಣ ಎಂಬ ಬದಲಾವಣೆಯ ಒಂದು ಆಯಾಮವನ್ನು ತೋರಿಸಿಕೊಡುತ್ತವೆ.

ಮುಂದಿನ ಪಟ್ಟಿಕೆಯು (ಪಟ್ಟಿಕೆ–1) ವಿವಿಧ ವರ್ಗದ ನಗರಗಳು ಮತ್ತು ಪಟ್ಟಣಗಳ ಬೆಳವಣಿಗೆಯನ್ನು ಕುರಿತ ಅಂಕಿ ಅಂಶಗಳನ್ನು ಕೊಡುತ್ತದೆ. ಕನಿಷ್ಠ ಜನಸಂಖ್ಯೆ ಹೀಗಿದೆ: ವರ್ಗ – ಒಂದು: 1,00,000+; ವರ್ಗ – ಎರಡು: 50,000 ದಿಂದ 99,999; ವರ್ಗ – ಮೂರು: 20,000ದಿಂದ 49,999; ವರ್ಗ–ನಾಲ್ಕು:

10,000ದಿಂದ 19,999;ವರ್ಗ – ಐದು: 5000ದಿಂದ 9999;ಮತ್ತು ವರ್ಗ–ಆರು: 5000ಕ್ಕಿಂತ ಕಡಮೆ ಜನಸಂಖ್ಯೆ.

**ಪಟ್ಟಿಕೆ – 1**

**ಭಾರತದಲ್ಲಿ ಪಟ್ಟಣಗಳು ಮತ್ತು ನಗರಗಳ ಬೆಳವಣಿಗೆ 1901–81**

| | ವರ್ಗ ಮತ್ತು ಸಂಖ್ಯೆ | | | | | |
|---|---|---|---|---|---|---|
| ವರ್ಷ | 1 | 2 | 3 | 4 | 5 | 6 |
| 1901 | 25 | 44 | 144 | 425 | 765 | 499 |
| 1911 | 26 | 38 | 158 | 385 | 742 | 543 |
| 1921 | 29 | 49 | 172 | 391 | 767 | 614 |
| 1931 | 31 | 59 | 217 | 474 | 842 | 571 |
| 1941 | 49 | 88 | 271 | 548 | 973 | 468 |
| 1951 | 76 | 111 | 368 | 668 | 1191 | 622 |
| 1961 | 106 | 138 | 508 | 811 | 827 | 257 |
| 1971 | 150 | 214 | 643 | 962 | 797 | 288 |
| 1981 | 226 | 325 | 883 | 1247 | 920 | 348 |
| | ಒಟ್ಟು ಜನಸಂಖ್ಯೆ 1981 ರಲ್ಲಿದ್ದಂತೆ (ಮಿಲಿಯನ್‌ಗಳಲ್ಲಿ) | | | | | |
| | 83.04 | 22.03 | 26.87 | 17.68 | 6.93 | 1.13 |

ಒಂದು ಲಕ್ಷ ಮತ್ತು ಅದಕ್ಕಿಂತ ಹೆಚ್ಚು ಜನವಸತಿಯಿರುವ ಊರುಗಳನ್ನು "ನಗರ" ಎಂದೂ ಮಿಕ್ಕವನ್ನು "ಪಟ್ಟಣ"ಎಂದೂ ಕರೆಯಲಾಗುತ್ತದೆ. ನಗರಗಳಲ್ಲಿ ಒಂದು ವಿಶೇಷ ವರ್ಗವೂ ಇದೆ. ಬೃಹತ್‌ನಗರ ಎಂದು ಅದನ್ನು ಉಲ್ಲೇಖಿಸಬಹುದು. ಹತ್ತುಲಕ್ಷ ಹಾಗೂ ಅದಕ್ಕಿಂತ ಹೆಚ್ಚು ಜನಸಂಖ್ಯೆಯಿರುವ ನಗರ ಇದು. ಇವುಗಳಲ್ಲಿ ಮುಖ್ಯವಾದ ನಾಲ್ಕೆಂದರೆ ಕಲ್ಕತ್ತ, ಮುಂಬಯಿ, ದೆಹಲಿ ಮತ್ತು ಮದರಾಸು. 1901ರಲ್ಲಿ ಹತ್ತು ಲಕ್ಷಕ್ಕಿಂತ ಹೆಚ್ಚು ಜನಸಂಖ್ಯೆಯಿದ್ದ ಒಂದೇ ಒಂದು ನಗರ ಕಲ್ಕತ್ತ, *1911*ರಲ್ಲಿ ಮುಂಬಯಿ ಈ ಸ್ಥಾನವನ್ನು ಪಡೆದುಕೊಂಡಿತು. 1951ರಲ್ಲಿ ಈ ಗುಂಪಿಗೆ ದೆಹಲಿ, ಮದರಾಸು ಮತ್ತು ಹೈದರಾಬಾದುಗಳು ಸೇರಿಕೊಂಡುವು. 1981ರ ಗಣತಿಯ ಪ್ರಕಾರ ಇತರ ಬೃಹತ್‌ನಗರಗಳು ಅಹಮದಾಬಾದ್ ಮತ್ತು ಬೆಂಗಳೂರು (1961),ಕಾನ್‌ಪುರ ಮತ್ತು ಪುಣೆ (1971), ಲಕ್ನೋ, ನಾಗಪುರ ಮತ್ತು ಜೈಪುರ (1981).

ಹೀಗೆ 1981ರ ವೇಳೆಗೆ ಭಾರತದಲ್ಲಿ ದೇಶದ ನಗರ ಜನಸಂಖ್ಯೆಯ ಸುಮಾರು ಶೇ. 25ರಷ್ಟನ್ನು ಅರಗಿಸಿಕೊಂಡಿದ್ದ ಹನ್ನೆರಡು ಬೃಹತ್‌ನಗರಗಳಿದ್ದುವು.

## ನಗರ ಜೀವನದ ಲಕ್ಷಣಗಳು

ನಗರ ಜೀವನವನ್ನು ಅಧ್ಯಯನ ಮಾಡಿದವರು ಹಳ್ಳಿಗಳಿಗಿಂತ ಭಿನ್ನವಾದ ನಗರ ಹಾಗೂ ಪಟ್ಟಣ ಜೀವನದ ಕೆಲವು ಪ್ರಮುಖ ಲಕ್ಷಣಗಳನ್ನು ಗುರುತಿಸಿದ್ದಾರೆ:

1. ನಗರ ಜೀವನದಲ್ಲಿ ಪರಂಪರೆಯಿಂದ ಬಂದ ಸಮಾಜ ರಚನೆಯು ಸಡಿಲವಾಗುವ ಪ್ರಕ್ರಿಯೆ ವ್ಯಕ್ತವಾಗುತ್ತದೆ. ಅದರ ನೀತಿನಿಯಮಗಳು ಸಾಕಷ್ಟುಮಟ್ಟಿಗೆ ಸಡಿಲಗೊಳ್ಳುತ್ತವೆ. ಇದರ ಪರಿಣಾಮವಾಗಿ ಕ್ರಮೇಣ ಕುಟುಂಬ, ಬಂಧುತ್ವ ಮತ್ತು ಜಾತಿ ಸಂಬಂಧವಾದ ಕರ್ತವ್ಯಗಳು ಕ್ಷೀಣಿಸುತ್ತವೆ.
2. ಮಾನವ ಸಂಬಂಧಗಳ ಗುಣಮಟ್ಟವು ಹೆಚ್ಚು ಅ-ವೈಯಕ್ತಿಕವಾಗಿಯೂ, ಔಪಚಾರಿಕವಾಗಿಯೂ ಮಾರ್ಪಡುತ್ತದೆ.
3. ನಗರಗಳಲ್ಲಿ ವ್ಯಕ್ತಿಗಳ ನಡುವೆ ಹಾಗೂ ಗುಂಪುಗಳ ನಡುವೆ ಯಾವುದೇ ವ್ಯವಹಾರದಲ್ಲಿ ಲೌಕಿಕವಾಗಿ ಏನು ಪ್ರಯೋಜನವಾಗುತ್ತದೆ ಎಂಬ ಲೆಕ್ಕಾಚಾರವೇ ಪ್ರಧಾನವಾಗುತ್ತದೆ. ಧಾರ್ಮಿಕ ಆಚರಣೆಗಳು ಮತ್ತು ಕರ್ತವ್ಯಗಳು ಸಡಿಲವಾಗುತ್ತವೆ. ಜಾತಿ ಮತ್ತು ಸಮುದಾಯ ಭಾವನೆಗಳು ಹೋಗಿ ಅದರ ಸ್ಥಾನದಲ್ಲಿ ಆರ್ಥಿಕತೆಯ ತರ್ಕ ಬಂದು ನಿಲ್ಲುತ್ತದೆ. ಇದರಿಂದ ದೃಷ್ಟಿ ಜಾತ್ಯತೀತವಾಗುತ್ತದೆ.
4. ನಗರೀಕರಣದಿಂದ ಕಾರ್ಯಪಟುತ್ವ, ವೃತ್ತಿಗೌರವ ಹೆಚ್ಚುವುದು.
5. ನಗರ ಜೀವನವು ಸಾಮುದಾಯಿಕ ಸಂಸ್ಥೆಗಳ ಹಾಗೂ ಸ್ವಯಂಸೇವಾ ಸಂಘಗಳ ಸುತ್ತ ರೂಪುಗೊಳ್ಳುತ್ತದೆ.
6. ಪಟ್ಟಣಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸಾಂಸ್ಕೃತಿಕ, ಶೈಕ್ಷಣಿಕ, ಮನರಂಜನ ಮತ್ತು ಧಾರ್ಮಿಕ ಮೂಲಗಳಿದ್ದು ಅವು ಸಾಂಸ್ಥಿಕ ಸ್ವರೂಪ ಪಡೆಯುತ್ತವೆ.
7. ಒಟ್ಟಾರೆ ಸಮಾಜವನ್ನು ಆಧುನೀಕರಿಸುವುದರಲ್ಲಿ ನಗರಪ್ರದೇಶಗಳು ಪ್ರೇರಣೆ ಒದಗಿಸುತ್ತವೆ.

ಕೆಲವು ವಿನಾಯಿತಿಗಳೊಂದಿಗೆ ಈ ಲಕ್ಷಣಗಳು ಬೃಹತ್ ನಗರಗಳಿಗೂ, ಇತರ ಮೊದಲನೆ ವರ್ಗದ ನಗರಗಳಿಗೂ ಕೆಲಮಟ್ಟಿಗೆ ಎರಡನೆ ವರ್ಗದ ನಗರಗಳಿಗೂ ಅನ್ವಯಿಸುತ್ತವೆ. ಆದರೆ ಅನೇಕ ನಗರಗಳಲ್ಲಿ ಅಲ್ಲಲ್ಲೇ ಹಳ್ಳಿಗಳು ಸೇರಿಕೊಂಡು ಬಿಟ್ಟಿರುತ್ತವೆ. ಅವು ತಲೆತಲಾಂತರದಿಂದಲೂ ಬಂದ ಗ್ರಾಮೀಣಜೀವನ ಪದ್ಧತಿಯನ್ನೇ ಎಲ್ಲೋ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಮುಂದೆಯೂ ಅನುಸರಿಸುತ್ತಿರುತ್ತವೆ. ಎಲ್ಲ ದೊಡ್ಡ ನಗರಗಳಲ್ಲೂ ಕಾಣಬರುವ ಕೊಳೆಗೇರಿಗಳು ಮತ್ತು ಗುಡಿಸಲು ಕೇರಿಗಳು ಮೂಲತಃ ಗ್ರಾಮ ಜೀವನದ ರಂಗು ಪಡೆದಿರುತ್ತವೆ. ಕೆಲವು ನಗರ ಲಕ್ಷಣಗಳನ್ನು ಪ್ರಜ್ಞಾಪೂರ್ವಕವಾಗಿ ಅಳವಡಿಸಿಕೊಂಡಿರುತ್ತವೆ. ಕೆಲವು ನಗರ ಕೇಂದ್ರಗಳು – ದೇವಾಲಯ ನಗರಗಳು, ಯಾತ್ರಾಸ್ಥಳಗಳು– ಎಂದಿನಂತೆ ಧಾರ್ಮಿಕ ನಂಬಿಕೆಗಳನ್ನೂ, ಆಚಾರ, ವ್ಯವಹಾರಗಳನ್ನೂ ಹಾಗೆಯೇ ಸಾಂಸ್ಕೃತಿಕ ಮೌಲ್ಯಗಳನ್ನೂ ಪ್ರಸರಿಸುತ್ತಲೇ ಇರುತ್ತವೆ. ಹಲವು ನಗರಗಳ ಮೂಲಭಾಗಗಳಲ್ಲಿ ಕೆಲವು ಹೊಂದಾಣಿಕೆ, ಅಳವಡಿಕೆಗಳೊಂದಿಗೆ ಸಾಂಪ್ರದಾಯಿಕ ಜೀವನ ವಿಧಾನವೇ ನಡೆಯುತ್ತಿರುತ್ತದೆ.

ಚಿಕ್ಕ ಪಟ್ಟಣಗಳಾದರೋ – ಅದರಲ್ಲೂ ಹಳೆಯವು, ಹೆಚ್ಚು ಬೆಳೆದ ಹಳ್ಳಿಗಳಂತೆಯೇ. ಸಾಂಪ್ರದಾಯಿಕ ವ್ಯವಸ್ಥೆಗಳು ಇಲ್ಲಿ ಬಲವಾಗಿ ಉಳಿದಿರುತ್ತವೆ.

ಪರಂಪರಾಗತ ಸಾಮಾಜಿಕ ರಚನೆಯು ಕುಸಿದು ಬಿದ್ದ ನಿರ್ಣಾಯಕ ನಿದರ್ಶನ ಇಲ್ಲ. ಕುಟುಂಬ, ಬಂಧುತ್ವ, ಜಾತಿ ಇವು ಕೆಲವು ಪರಿವರ್ತನೆಗಳನ್ನು ಪಡೆಯಬಹುದು. ಆದರೆ ಅವುಗಳ ಕಾರ್ಯಪಟುತ್ವ ಅಳಿಸಿಹೋಗುವುದಿಲ್ಲ. ಶ್ರೀಮಂತರಾದವರು ಪರಂಪರೆಯ ಬಗೆಗೆ ತಮ್ಮ ಒಲವನ್ನು ಬೇರೆ ಬೇರೆ ವಿಧಾನಗಳಿಂದ ತೋರಿಸುತ್ತಾರೆ. ಧರ್ಮಾಚರಣೆಗಳು, ಸಮಾರಂಭಗಳು ಆಡಂಬರದ, ರುಚಿಹೀನ ಪ್ರದರ್ಶನದ ಸಂದರ್ಭಗಳಾಗಿ ಬಿಡುತ್ತವೆ. ಸಮಾರಂಭಗಳಲ್ಲಿ ತಮಗಿರುವ ಶಕ್ತಿಗಿಂತ ಬಹುಪಾಲು ಹೆಚ್ಚಾಗಿ ವೆಚ್ಚಮಾಡುತ್ತಾರೆ. ಏಕೆಂದರೆ ಅವರ ಸಂಸ್ಕೃತಿಯಲ್ಲಿ ಈ ಅಂಶಗಳು ತಮ್ಮ ಬದುಕಿನ ಅತ್ಯಂತ ಸಾರಭೂತವಾದ ಭಾಗವಾಗುತ್ತವೆ. ಅವರ ಗೌರವ, ಸಾಮಾಜಿಕ ಸ್ಥಾನಮಾನಗಳ ವಿಷಯವಾಗುತ್ತವೆ. ಅಂತಹ ಸಂದರ್ಭಗಳಲ್ಲಿ ವಿವೇಚನೆಯೇ ಹೋಗಿಬಿಡುತ್ತದೆ. ಜೀವನವನ್ನು ಕುರಿತ ಅವ್ಯೆಯಕ್ತಿಕ ರಂಗು ಕೂಡ ತಕ್ಕಮಟ್ಟಿಗೆ ಬದಲಾಗುತ್ತದೆ. ದೃಷ್ಟಿಕೋನದಲ್ಲಿ ಒಂದು ಬಗೆಯ ಜಾತ್ಯತೀತತೆ ಮೂಡುತ್ತದೆ. ಆದರೆ ಮತೀಯ, ವರ್ಗೀಯ ಪೂರ್ವಾಗ್ರಹಗಳನ್ನು ಅಳಿಸಿಹಾಕಿಬಿಡುವಷ್ಟಲ್ಲ. ಕೆಲವು ಭಾರತೀಯ ಪಟ್ಟಣಗಳಲ್ಲಿ ಮತ್ತು ನಗರಗಳಲ್ಲಿ ಧರ್ಮಗಳ ನಡುವಣ ಬಿಗುವಿನ ವಾತಾವರಣ ಸದಾಕಾಲ ಇದ್ದೇ ಇರುತ್ತದೆ. ಇಲ್ಲಿ ಪದೇ ಪದೇ ಮತೀಯ ದಂಗೆಗಳು, ಕಾದಾಟಗಳು ನಡೆಯುತ್ತಿರುತ್ತವೆ. ಅಲ್ಲಿ ಕಾರ್ಯಪರಿಣತಿ ಇರುತ್ತದೆ. ಹಾಗೆಯೇ ಕಾರ್ಯಗೌರವವೂ ಇರುತ್ತದೆ. ಆದರೆ ಅದೇ ಸಮಯಕ್ಕೆ ಅಪರಿಣತ ಕೂಲಿಕಾರರು ದಂಡುದಂಡಾಗಿ ನಗರ ಕೇಂದ್ರಗಳಿಗೆ ವಲಸೆ ಬರುವುದನ್ನೂ ಅಲಕ್ಷ್ಯ ಮಾಡುವಂತಿಲ್ಲ. ಬಡವರ ಸಮಸ್ಯೆಗಳನ್ನು ಪರಿಹಾರ ಮಾಡುವಲ್ಲಿ ಸಾರ್ವಜನಿಕ ಸಂಸ್ಥೆಗಳು ವಿಫಲಗೊಂಡು ಅಸಹಾಯಕವಾಗಿ ಕೈಚೆಲ್ಲಿ ಕುಳಿತುಕೊಳ್ಳುತ್ತವೆ. ಬಡವರ ಸಾಮುದಾಯಿಕ ಸಂಸ್ಥೆಗಳಾದರೋ ಹಿತರಕ್ಷಣೆ ಮತ್ತು ಅಭಿವೃದ್ಧಿಗಳಿಗಿಂತ ಮಿಗಿಲಾಗಿ ಸಮಾರಂಭಗಳನ್ನು ಅದ್ದೂರಿಯಾಗಿ ನಡೆಸುವತ್ತ ಗಮನವನ್ನು ಹರಿಸುತ್ತವೆ. ಕೆಲವು ಸ್ವಯಂಸೇವಾ ಸಂಘಗಳು ಈ ನಿಟ್ಟಿನಲ್ಲಿ ಒಳ್ಳೆಯ ಕೆಲಸ ಮಾಡುತ್ತವೆಯಾದರೂ ಧನಾಭಾವ, ಕಾರ್ಯಕರ್ತರಲ್ಲಿ ಆಸಕ್ತಿ ಏಕಪ್ರಕಾರವಾಗಿ ಉಳಿಯದ್ದುದು ಈ ತೊಂದರೆಗಳಿಂದ ಬಳಲುತ್ತವೆ. ನಗರದ ಸಾಂಸ್ಕೃತಿಕ ಹಾಗೂ ಹಿತರಕ್ಷಣಾ ಮೂಲಗಳು ಬಡವರಿಗೆ ಎಟಕುವಂಥವಲ್ಲ. ಅವರು ಕಲ್ಪನೆಯಲ್ಲಿಯೇ ಅವುಗಳ ಪ್ರಯೋಜನ ಪಡೆಯಬೇಕು. ಆಧುನೀಕರಣದ ಪ್ರೇರಣೆ, ಪ್ರಚೋದನೆಗಳು ನಗರಗಳಿಂದ ಹುಟ್ಟಿಬರುತ್ತವೇನೋ ನಿಜ. ಆದರೆ ಅದೇ ಸಮಯದಲ್ಲಿ ಅವುಗಳ ರಚನೆ, ಇತಿಮಿತಿಗಳು ಸ್ಥಗಿತತೆಯನ್ನೂ ಕ್ಷೀಣತೆಯನ್ನೂ ಹೆಚ್ಚಿಸುತ್ತವೆ ಎಂಬುದನ್ನೂ ಮರೆಯಬಾರದು.

ನಗರ ವಲಯದಲ್ಲಿ ವರ್ಗಧ್ರುವೀಕರಣ ಚುರುಕಾಗಿರುತ್ತದೆ, ಹೊಡೆದು ಕಾಣುವಂತಿರುತ್ತದೆ. ಕೆಲವರು ತಾವು ಬಯಸಿದ, ಹಣ ಕೊಡಬಹುದಾದ ಸುಖವನ್ನೆಲ್ಲ ಪಡೆಯುತ್ತಾ ಸುಖಜೀವನ ನಡೆಸುತ್ತಾರೆ. ತಮ್ಮ ಸಂಪತ್ತನ್ನು ಹೇಗೆ ಉಪಯೋಗಿಸಬೇಕೆನ್ನುವುದೇ ಅವರಿಗೆ ತಿಳಿದಿರುವುದಿಲ್ಲ. ಅನೇಕರು ಕಡುಬಡತನ ಅನುಭವಿಸುತ್ತಾರೆ. ಅವರಿಗೆ ಅಸಂಖ್ಯಾತ ಸಮಸ್ಯೆಗಳು, ನಿರುದ್ಯೋಗ, ಅಪಮಾನ,

ಮನೆಯಿಲ್ಲ, ಆರೋಗ್ಯವಿಲ್ಲ, ಶಿಕ್ಷಣವಿಲ್ಲ, ಸಂಸ್ಕೃತಿ, ಆಧ್ಯಾತ್ಮಗಳ ಶೂನ್ಯತೆಯಲ್ಲಿ ಅವರು ಜೀವಿಸುತ್ತಾರೆ. ಅವರಿಗೂ ಕನಸುಗಳಿವೆ, ಆಶೆಗಳಿವೆ. ಆದರೆ ಅವುಗಳನ್ನು ಅನುಭವಿಸುವ ನಿಶ್ಚಿತತೆ ಅವರಿಗಿಲ್ಲ. ಈ ಎರಡು ಧ್ರುವಗಳ ನಡುವೆ ಅವ್ಯವಸ್ಥಿತ ಮಧ್ಯಮವರ್ಗವಿದೆ. ಈ ವರ್ಗದ ಮೇಲುತುದಿಯ ಜನ ಒಂದು ನಟನೆಯ ಪ್ರಪಂಚದಲ್ಲಿ ಬದುಕುತ್ತಾರೆ. .ಅವರು ಶ್ರೀಮಂತರ ಜೀವನವಿಧಾನವನ್ನು ಅನುಕರಿಸಲು ಪ್ರಯತ್ನ ಪಡುತ್ತಾರೆ. ಆದರೆ ಸಾಕಷ್ಟು ಸಂಪನ್ಮೂಲವಿಲ್ಲದೆ ಒದ್ದಾಡುತ್ತಾರೆ.

## ನಗರ ಭಾರತದ ಮುಖ್ಯ ಸಮಸ್ಯೆಗಳು

ನಗರ ಭಾರತದ ಅಸಂಖ್ಯಾತ ಸಮಸ್ಯೆಗಳಲ್ಲಿ ಕೇವಲ ನಾಲ್ಕರ ಕಡೆಗೆ ನಮ್ಮ ಗಮನವನ್ನು ಕೇಂದ್ರೀಕರಿಸೋಣ. ಬಡತನ, ವಸತಿ (ಅಥವಾ ಮನೆ ಇಲ್ಲದ್ದು), ಪೌರಸೌಲಭ್ಯಗಳು ಮತ್ತು ಬಡವರ ಸಾಂಸ್ಕೃತಿಕ ಶೂನ್ಯತೆಗಳು ಅವು.

ಭಾರತದ ಜನಸಂಖ್ಯೆಯ ಸುಮಾರು ಅರ್ಧ (ಅಧಿಕೃತ ಅಂಕಿ ಅಂಶಗಳಿಗೆ ಬೆಲೆ ಕೊಡುವುದಾದರೆ ಶೇ. 41) ಬಡತನದ ರೇಖೆಗಿಂತ ಕೆಳಗಿದ್ದಾರೆ. ಗ್ರಾಮ ಭಾರತವಾದರೂ ಬಡತನವನ್ನು ಮರೆಮಾಡಿಟ್ಟುಕೊಂಡು ಹೇಗೋ ಎದುರಿಸಬಲ್ಲದು. ನಗರ ಭಾರತವು ಹಾಗೆ ಮಾಡಲಾರದು. ಭದ್ರತೆ ಸಿಕ್ಕುತ್ತದೆಂಬ ಭ್ರಮೆಯಿಂದ ಅದನ್ನು ಹುಡುಕಿಕೊಂಡು ತಮ್ಮ ಹಳ್ಳಿಗಳನ್ನು ತೊರೆದು ನಗರಗಳಿಗೆ ಜನರು ನುಗ್ಗುತ್ತಿದ್ದಂತೆ ಅಲ್ಲಿಯ ಬಡತನ ಅಧಿಕಾಧಿಕವಾಗುತ್ತಲೇ ಇದೆ.

ನಗರ ಬಡತನವನ್ನು ರಾಜ್ಯವಾರು ಅಂಕಿ ಅಂಶಗಳೊಂದಿಗೆ ಚಿತ್ರಿಸುವ ಈ ಪಟ್ಟಿಕೆಯನ್ನು ನೋಡಿ:

ಇಲ್ಲಿ ತಿಳಿಸಿರುವ ವಸತಿಹೀನರ ಶೇಕಡಾವಾರು ಸಂಖ್ಯೆ ಸಾಮಾನ್ಯ ಅನ್ನಿಸಬಹುದು. ಆದರೆ ನಗರಗಳ ಒಟ್ಟು ಜನಸಂಖ್ಯೆಯನ್ನು ಗಣನೆಗೆ ತೆಗೆದುಕೊಂಡು ಪರಿಶೀಲಿಸಿದರೆ ಈ ಸಂಖ್ಯೆ ಭಯಹುಟ್ಟಿಸುವಂತಿದೆ. ಕೊಳಚೆ ವಾಸವಂತೂ ಸರ್ವೇಸಾಮಾನ್ಯವಾಗಿದೆ.

ಸಮಾಜವಿಜ್ಞಾನಿಗಳು ಫುಟ್‌ಪಾತಿನಲ್ಲಿ ವಾಸಿಸುವವರ ಮತ್ತು ಕೊಳಚೆ ನಿವಾಸಿಗಳ ಜೀವನ ವಿಧಾನದ ಬಗ್ಗೆ ಒಟ್ಟಾರೆ ಅಭಿಪ್ರಾಯದ ಅಧ್ಯಯನ ನಡೆಸಿಲ್ಲ. ನಮಗೆ ದೊರೆತಿರುವುದು ಸಾಮಾಜಿಕ ಮತ್ತು ಆರ್ಥಿಕ ಸಮೀಕ್ಷೆಗಳಿಂದ ಲಭ್ಯವಿರುವ ಸ್ವಲ್ಪವೇ ಆದರೆ ನಿಖರವಾದ ಮಾಹಿತಿ. ಕಾದಂಬರಿಕಾರರು, ಕಥೆಗಾರರು ಅಲ್ಲದೆ ಕೆಲ ಸಿನೆಮಾ ನಿರ್ದೇಶಕರು ಅವರ ಬದುಕಿನ ಸೂಕ್ಷ್ಮ ವಿವರಗಳನ್ನು ಚಿತ್ರಿಸಿದ್ದಾರೆ. ಕೊಳಚೆಗಳ ಅನೇಕರು ಶ್ರಮಜೀವಿಗಳಿದ್ದರೆ ಕೆಲವರು ಸುಲಿಗೆಕೋರರು, ಕಳ್ಳಸಾಕಾಣಿಕೆದಾರರು, ಕಳ್ಳ ಮದ್ಯ ಸಾಗಿಸುವವರು ಅಲ್ಲದೆ ವೇಶ್ಯಾವೃತ್ತಿಗಿಳಿದವರೂ ಕಾಣ ಸಿಗುತ್ತಾರೆ. ಇದು ನಗರ ಜೀವನದ ಕುರೂಪದಂತಿದೆ.

**ಪಟ್ಟಿಕೆ: 2**

**ಭಾರತ: ನಗರದ ಬಡವರು**

| ರಾಜ್ಯ | ನಗರ ಜನಸಂಖ್ಯೆಯ ಶೇಕಡಾವಾರು ಬಡವರು |
|---|---|
| ಆಂಧ್ರಪ್ರದೇಶ | 35.68 |
| ಅಸ್ಸಾಂ | 37.37 |
| ಬಿಹಾರ | 46.07 |
| ಗುಜರಾತ್ | 27.02 |
| ಹರ್ಯಾಣ | 31.74 |
| ಹಿಮಾಚಲ ಪ್ರದೇಶ | 16.56 |
| ಜಮ್ಮು ಮತ್ತು ಕಾಶ್ಮೀರ | 39.33 |
| ಕರ್ನಾಟಕ | 43.97 |
| ಕೇರಳ | 51.44 |
| ಮಧ್ಯಪ್ರದೇಶ | 48.09 |
| ಮಹಾರಾಷ್ಟ್ರ | 31.66 |
| ಮಣಿಪುರ | 25.98 |
| ಮೇಘಾಲಯ | 18.16 |
| ನಾಗಾಲ್ಯಾಂಡ್ | 4.11 |
| ಒರಿಸ್ಸಾ | 12.19 |
| ಪಂಜಾಬ್ | 24.66 |
| ರಾಜಾಸ್ಥಾನ್ | 33.80 |
| ತಮಿಳುನಾಡು | 44.79 |
| ತ್ರಿಪುರ | 26.34 |
| ಉತ್ತರಪ್ರದೇಶ | 49.20 |
| ಪಶ್ಚಿಮ ಬಂಗಾಳ | 34.71 |

ಈ ಬಡತನವು ನೇರವಾಗಿ ಬದುಕಿನ ಮೇಲೆ, ವಿಶೇಷವಾಗಿ ಪೌಷ್ಟಿಕತೆ, ಆರೋಗ್ಯ ಮತ್ತು ಶಿಕ್ಷಣ ಕ್ಷೇತ್ರಗಳಲ್ಲಿ ವಿಪರೀತ ಪರಿಣಾಮ ಮಾಡುತ್ತದೆ.

ವಸತಿಯನ್ನು ಕುರಿತ ಪರಿಸ್ಥಿತಿ ತುಂಬಾ ಕಳವಳಕಾರಿಯಾಗಿದೆ. ಇಲ್ಲಿ ಕೊರತೆ ಗಣನೀಯವಾದದ್ದು.

**ಪಟ್ಟಿಕೆ – 3**

**ಭಾರತ: ನಗರ ವಸತಿ ಪರಿಸ್ಥಿತಿ (ಮಿಲಿಯನ್‌ಗಳಲ್ಲಿ)**

| ವರ್ಷ | ಅಗತ್ಯ | ಒದಗಿಸಿರುವುದು | ಕೊರತೆ |
|---|---|---|---|
| 1951 | 12.50 | 10.30 | 2.20 |
| 1961 | 15.78 | 14.06 | 1.72 |
| 1971 | 21.64 | 18.41 | 3.23 |
| 1981 | 31.94 | 27.60 | 4.34 |

ನಗರ ಪ್ರದೇಶಗಳಲ್ಲಿರುವ ಅನೇಕರಿಗೆ ಮನೆಯಿಲ್ಲ. 1981ರಲ್ಲಿ ಹನ್ನೆರಡು ಬೃಹತ್ ನಗರಗಳಲ್ಲಿ ಮನೆಯಿಲ್ಲದವರ ಸಂಖ್ಯೆಯ ಚಿತ್ರ ಹೀಗಿತ್ತು:

**ಪಟ್ಟಿಕೆ – 4**

**ಭಾರತದ 12 ಬೃಹತ್ ನಗರಗಳಲ್ಲಿ ವಸತಿಹೀನ ಜನರ ಸಂಖ್ಯೆ 1981**

| ನಗರ | ವಸತಿಹೀನ ಜನರ ಸಂಖ್ಯೆಯು ಶೇಕಡಾವಾರು |
|---|---|
| ಕಲ್ಕತ್ತಾ | 10.40 |
| ಮುಂಬಯಿ | 7.15 |
| ದೆಹಲಿ | 3.64 |
| ಮದರಾಸು | 1.31 |
| ಬೆಂಗಳೂರು | 2.34 |
| ಅಹಮದಾಬಾದ್ | 0.54 |
| ಹೈದರಾಬಾದ್ | 0.87 |
| ಪುಣೆ | 0.52 |
| ಕಾನ್‌ಪುರ | 1.96 |
| ನಾಗಪುರ | 0.40 |
| ಜೈಪುರ | 0.53 |
| ಲಕ್ನೋ | 1.15 |

**ಪಟ್ಟಿಕೆ – 5**

**ಭಾರತ: 1981ರಲ್ಲಿದ್ದಂತೆ ಮಹಾನಗರಗಳ ಕೊಳಚೆ ನಿವಾಸಿಗಳ ಜನಸಂಖ್ಯೆ**

| ನಗರ | ಒಟ್ಟು ಜನಸಂಖ್ಯೆ (ಮಿಲಿಯದಲ್ಲಿ) | ಒಟ್ಟು ಜನಸಂಖ್ಯೆಯ ಶೇಕಡಾವಾರು ಕೊಳಚೆ ನಿವಾಸಿಗಳು |
|---|---|---|
| ಕಲ್ಕತ್ತ | 9.143 | 35.35 |
| ಮುಂಬಯಿ | 8.243 | 38.30 |
| ದೆಹಲಿ | 5.729 | 30.19 |
| ಮದ್ರಾಸು | 4.289 | 31.87 |
| ಬೆಂಗಳೂರು | 2.921 | 10.20 |
| ಅಹ್ಮದಾಬಾದ್ | 2.548 | 26.16 |
| ಹೈದರಾಬಾದ್ | 2.545 | 21.28 |
| ಪುಣೆ | 1.686 | – |
| ಕಾನ್ಪುರ | 1.639 | 40.00 |
| ನಾಗಪುರ | 1.302 | – |
| ಜೈಪುರ | 1.015 | 15.62 |
| ಲಕ್ನೋ | 1.007 | 38.83 |

ಬಡವರಿಗೆ ಪೌರ ಸೌಲಭ್ಯಗಳು ತುಂಬ ಕಡಮೆ. ನಲ್ಲಿಗಳಲ್ಲಿ ಬೆಳಿಗ್ಗೆ ಸುಮಾರು ಒಂದು ಗಂಟೆ ಸಂಜೆ ಒಂದು ಗಂಟೆ ನೀರು ಬರುತ್ತದೆ. ಕೊಳೆಗೇರಿಗಳಲ್ಲಿ ಕೆಲವೇ ಕೆಲವು ಬೀದಿಗಳಲ್ಲಿ ನಲ್ಲಿಗಳಿರುವುದರಿಂದ ಪಾತ್ರೆಗಳನ್ನು ಹಿಡಿದು ನಿಂತವರ ಸರತಿ ಸಾಲುಗಳು ಉದ್ದುದ್ದವಾಗಿರುತ್ತವೆ. ಬಹುತೇಕ ಕೈಪಂಪುಗಳು ಹಾಳಾಗಿರುತ್ತವೆ; ಕೆಲಸ ಮಾಡುವ ಕೆಲವೇ ಕೆಲವಕ್ಕೆ ವಿಪರೀತ ಒತ್ತಡ. ಶೌಚಗೃಹಗಳ ಸೊಲ್ಲೇ ಇರುವುದಿಲ್ಲ. ಬಹುಪಾಲು ಜನರು ಬಯಲನ್ನೇ ಉಪಯೋಗಿಸಬೇಕು. ಹಂದಿಗಳು ಮತ್ತು ಬೀದಿ ನಾಯಿಗಳು ಅಲ್ಪಸ್ವಲ್ಪ ಸ್ವಚ್ಛತೆಯನ್ನು ಒದಗಿಸುತ್ತವೆಯೇನೋ ನಿಜ; ಆದರೆ ಅವು ರೋಗಗಳನ್ನೂ ಹರಡುತ್ತವೆ. ರಸ್ತೆಗಳು ಮತ್ತು ಓಣಿಗಳು ಇಕ್ಕಟ್ಟು. ಅಲ್ಲಲ್ಲಿ ಇರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಸಾಕಷ್ಟು ಸಿಬ್ಬಂದಿಯಿಲ್ಲ, ಔಷಧಿಗಳಿಲ್ಲ. ಅತ್ಯಂತ ಜರೂರಾದ ಜೀವರಕ್ಷಕ ಔಷಧಗಳಿಗೆ ಯಾವಾಗಲೂ ಕೊರತೆ. ಅವನ್ನು ಅಂಗಡಿಗಳಿಂದ ಅವರು ಕೊಳ್ಳಬೇಕು. ಶಾಲೆಗಳು ಅಹಿತಕರ ವಾತಾವರಣದಿಂದ ಕೂಡಿದ್ದು ಕೇವಲ ನಾಮಕಾವಸ್ತೆ ಶಿಕ್ಷಣವನ್ನು ಒದಗಿಸುತ್ತವೆ. ಸಾರ್ವಜನಿಕ ಸಾರಿಗೆ ತುಂಬಾ ದುಬಾರಿ ಹಾಗೂ ಸದಾ ಜನರಿಂದ ತುಂಬಿರುತ್ತವೆ. ಸಿನಿಮಾಗಳು ಮತ್ತು ವೀಡಿಯೋ ಅಂಗಡಿಗಳು ಸ್ವಲ್ಪಮಟ್ಟಿಗೆ ಮನರಂಜನೆ ಒದಗಿಸಬಹುದು. ಅವುಗಳ ಜೊತೆಗೆ ಕುಡಿತ, ಮಾದಕವಸ್ತು, ಜೂಜು ಇದ್ದೇ ಇರುತ್ತವೆ.

ಬಹುತೇಕ ಕಾಲುದಾರಿ ಮತ್ತು ಕೊಳೆಗೇರಿ ವಾಸಿಗಳು ತಮ್ಮ ಪರಂಪರಾಗತ ಜೀವನ ಕ್ರಮವನ್ನು ತಪ್ಪಿಸಿಕೊಂಡಿರುತ್ತಾರೆ. ಸಾಂಸ್ಕೃತಿಕವಾಗಿ ಒಂದು ಶೂನ್ಯದಲ್ಲಿ ಅವರು ಜೀವಿಸುತ್ತಾರೆ. ಅವರಲ್ಲಿ ಅನೇಕರು ತಮ್ಮ ಕುಟುಂಬವನ್ನು ಬಿಟ್ಟು ಬಹುದೂರ ಬಂದಿರುತ್ತಾರೆ. ನಗರ ಜೀವನವನ್ನು ಅಳವಡಿಸಿಕೊಳ್ಳುವುದು ಅವರಿಗೆ ಕಷ್ಟವಾಗಿರುತ್ತದೆ. ಅವರು ಒಂಟಿ ಜೀವನ ನಡೆಸುತ್ತಾರೆ ಇಲ್ಲವೆ ಕೆಟ್ಟ ಸಹವಾಸಕ್ಕೆ ಬೀಳುತ್ತಾರೆ. ಕುಟುಂಬ ಸಮೇತ ಜೀವಿಸುತ್ತಿರುವವರೂ ಕೂಡ ಅನೇಕ ಸಮಸ್ಯೆಗಳನ್ನು ಎದುರಿಸುತ್ತಾರೆ. ಗಂಡಸರು ಕೆಲಸಕ್ಕೆ ಹೋದಾಗ ಕೊಳೆಗೇರಿಗಳಲ್ಲಿ ಬಿಟ್ಟುಹೋದ ಹೆಂಗಸರಿಗೆ ಯಾವ ಭದ್ರತೆಯೂ ಇರುವುದಿಲ್ಲ. ತಂದೆ, ತಾಯಿಯರ ಅಧಿಕಾರ ದುರ್ಬಲಗೊಂಡ ಹಾಗೆ ಹದಿಹರೆಯದ ಮಕ್ಕಳು ಅಂಕೆಮೀರಿ ಬಿಡುತ್ತಾರೆ, ಕೆಲವರು ಮಾದಕದ್ರವ್ಯ ವ್ಯಸನಿಗಳಾಗುತ್ತಾರೆ, ಹಲವರು ಬಾಲಾಪರಾಧಿಗಳಾಗುತ್ತಾರೆ. ಈ ನಗರ ಗಂಡಾಂತರವು ಜನತೆಯನ್ನು ಗಮನಾರ್ಹವಾಗಿ ಆವರಿಸಿದೆ. ಉದಾಹರಣೆಗೆ, ಕಲ್ಕತ್ತದಲ್ಲಿ ಕೊಳೆಗೇರಿ ನಿವಾಸಿಗಳ ಸಂಖ್ಯೆ ನಗರ ಜನಸಂಖ್ಯೆಯ ಶೇ. 32 , ಮುಂಬಯಿಯಲ್ಲಿ ಶೇ. 25, ಮದರಾಸಿನಲ್ಲಿ ಶೇ. 24.

## ಉಪಸಂಹಾರ

ಭಾರತದಲ್ಲಿ ನಗರೀಕರಣದ ವೇಗ ಗಾಬರಿಗೊಳಿಸುವಂಥದಾಗಿಲ್ಲ. ಆದರೆ ಈ ಪ್ರಕ್ರಿಯೆಯಲ್ಲಿರುವ ಅಸ್ತವ್ಯಸ್ತತೆಗಳು, ಅಸಮತೋಲನಗಳು ಗಾಬರಿ ಹುಟ್ಟಿಸುತ್ತವೆ. ಗ್ರಾಮಸಮುದಾಯಗಳು ಪ್ರಗತಿ ಹೊಂದಬೇಕಾದರೆ, ಅಲ್ಲಿರುವ ಹೆಚ್ಚುವರಿ ಕೂಲಿಕಾರರು ನಗರ ಪ್ರದೇಶಗಳಿಗೆ ವಲಸೆ ಹೋಗಿ ಅಲ್ಲಿ ಲಾಭದಾಯಕ

ಉದ್ಯೋಗವನ್ನು ಪಡೆಯಬೇಕು. ಈಗಿನ ಪರಿಸ್ಥಿತಿಯಲ್ಲಿ ಹಳ್ಳಿಗಳು ಹೊರನೂಕುತ್ತವೆ. ನಗರಗಳು ತಮ್ಮತ್ತ ಒಳಸೆಳೆದುಕೊಳ್ಳುತ್ತವೆ. ಇದರ ಜೊತೆಗೆ ನಗರ–ಪಟ್ಟಣಗಳಲ್ಲಿ ಸಹಜವಾಗಿ ಜನಸಂಖ್ಯೆ ಹೆಚ್ಚುತ್ತಲೇ ಇರುತ್ತದೆ. ಇದು ಅನಿವಾರ್ಯ. ಸಾಮಾಜಿಕ ರಂಗದಲ್ಲಿ ಅವನತಿಯನ್ನು ತಡೆಗಟ್ಟಬೇಕಾದ ಪಕ್ಷದಲ್ಲಿ ಹೆಚ್ಚಿನ ಜಾಗರೂಕತೆಯಿಂದ ಯೋಜನೆ ಹಾಕಿ ಈ ವಲಸೆಯನ್ನು ದಕ್ಷತೆಯಿಂದ ನಿಭಾಯಿಸಬೇಕು.

ವಾಸ್ತವವಾಗಿ ಭಾರತಕ್ಕೆ ಅಗತ್ಯವಾಗಿರುವುದು ವಲಸಿಗರಿಗೆ ಉತ್ತಮವಾದ ಯೋಜಿತ ಸಮುದಾಯಗಳ ವ್ಯವಸ್ಥೆ. ವಸತಿ, ಸಾರ್ವಜನಿಕ ಸಾರಿಗೆ, ನೀರು ಪೂರೈಕೆ, ವಿದ್ಯುತ್ತು, ಶೌಚ, ನಿವಾರಕ ಹಾಗೂ ಚಿಕಿತ್ಸಕ ಔಷಧಿ, ಶಿಕ್ಷಣ ಮತ್ತು ಮನರಂಜನೆ – ಈ ಕ್ಷೇತ್ರಗಳಲ್ಲಿ ಅವರಿಗೆ ಸಾಕಷ್ಟು ಸೌಲಭ್ಯ ಒದಗಿಸಬೇಕು. ಅತಿರೇಕದ ನಗರೀಕರಣ – ಸಾಕಷ್ಟು ಪೌರ ಸೌಲಭ್ಯಗಳಿಲ್ಲದೆ ಒಂದೇ ಸಮನೆ ಜನಸಂಖ್ಯೆ ಬೆಳೆಯುವುದು; ಮತ್ತು ಅರೆ–ನಗರೀಕರಣ – ಸುತ್ತಿನ ಪ್ರದೇಶಗಳಲ್ಲಿ ಭೂಮಿಯನ್ನು ಕೃಷಿಯೇತರ ಕಾರಣಗಳಿಗೆ ಬಳಸುವುದು, ಆಮೇಲೆ ನಗರಮಿತಿಯೊಳಕ್ಕೆ ಅವು ಸೇರ್ಪಡೆಯಾಗುವುದು; ಈ ಎರಡೂ ಕೆಲವು ಗಂಡಾಂತರಗಳನ್ನು ಒಡ್ಡುತ್ತವೆ. ಬಡವರ ಅಗತ್ಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಅವರಿಗೆ ಒಂದು ಸ್ವೀಕಾರಾರ್ಹವಾದ ಗುಣಮಟ್ಟದ ಜೀವನವನ್ನು ಭರವಸೆ ಕೊಡುವುದು ಅಗತ್ಯ. ಇದು ನೆರವೇರುವವರೆಗೆ ಕೊಳೆಗೇರಿಗಳು ಹುಣ್ಣಾಗಿಯೇ ಉಳಿಯುತ್ತವೆ. ನಗರ ಜೀವನದ ಶಾಂತಿಯನ್ನು ಕದಡುತ್ತಲೇ ಇರುತ್ತವೆ. ವಾಸ್ತವವಾಗಿ ಈ ಪರಿಸ್ಥಿತಿ ಬೆಳೆದು ಒಂದು ದಿನ ಸ್ಫೋಟಕಮಟ್ಟ ತಲುಪಬಹುದು.

## ಲಿಂಗ ಸಂಬಂಧಗಳು

ಭಾರತೀಯ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ, ಸ್ವರೂಪಗಳ ಬಗೆಗೆ ಸಾಕಷ್ಟು ಅಸ್ಪಷ್ಟತೆಯಿದೆ. ಕೆಲವು ಶಾಸ್ತ್ರಗ್ರಂಥಗಳು "ಎಲ್ಲಿ ನಾರಿಯರನ್ನು ಪೂಜಿಸಲಾಗುತ್ತದೆಯೋ ಅಲ್ಲಿ ದೇವತೆಗಳು ವಾಸಿಸುತ್ತಾರೆ" ಎಂದು ಅವರ ಸ್ಥಾನವನ್ನು ಹಾಡಿ ಹೊಗಳುತ್ತವೆ. ಮಾತೃದೇವತೆಯ ಹಲವು ರೂಪಗಳಾಗಿ ದುರ್ಗಾ, ಕಾಳಿ, ಚಂಡಿ ಅಥವಾ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಅವತಾರವಾಗಿ ಪ್ರಕಟಗೊಂಡ ಅವಳು ಶಕ್ತಿಸ್ವರೂಪಳು. ಅವಳೆಂದರೆ ಭಯ, ಭಕ್ತಿಗಳೆರಡು ಜಾಗ್ರತವಾಗುತ್ತವೆ. ಅವಳು ರಕ್ಷಿಸುವಳು ಮತ್ತು ಸಂದರ್ಭ ಬೇರೆಯಾದಾಗ ವಿನಾಶಮಾಡಬಲ್ಲಳು. ಸಂತುಷ್ಟಳಾದರೆ ಪ್ರತಿಯೊಂದು ಬಯಕೆಯನ್ನೂ ಈಡೇರಿಸುವಳು; ಕ್ರುದ್ಧಳಾದರೆ ಹಿಂದೆಂದೂ ಕಾಣದ ಉಗ್ರ ಭೀಕರತೆಯನ್ನೂ ಹರಿಹಾಯಿಸುವಳು. ಪುರುಷ ದೇವತೆಗಳು ಅವಳೆದುರಿಗೆ ಅಸಹಾಯಕರಾಗುವರು. ಅವಳು ಸಕ್ರಿಯಳಾಗಲು ನಿರ್ಧರಿಸಿದಾಗ ಅವರು ಮಧ್ಯೆ ಪ್ರವೇಶಿಸರು. ಆಕೆಯ ಕೆಲವು ಗುಣಗಳು ಪ್ರತಿಯೊರ್ವ ಹೆಣ್ಣಿನಲ್ಲೂ ಇವೆಯೆಂದು ನಂಬಲಾಗುತ್ತದೆ. ಆದರೆ ಹೆಣ್ಣಿನ ಇನ್ನೊಂದು ಚಿತ್ರವೂ ಇದೆ. ಅದಕ್ಕೂ ಧರ್ಮಶಾಸ್ತ್ರಗಳ ಹಾಗೂ ಜಾನಪದದ ಸಮ್ಮತಿ ಇದೆ. ಹೆಣ್ಣು ಚಂಚಲೆ ಮತ್ತು ಅಬಲೆ. ಸುಳ್ಳು, ವಂಚನೆ, ದುರಾಸೆ, ಮೋಸ, ಅಶುದ್ಧಿ, ಆಕರ್ಷಣೆ ಇರುವವಳು. ಪೂರ್ವಾಪರ ವಿವೇಚನೆಯಿಲ್ಲದೆ ಕೆಲಸ ಮಾಡುವಳು. ಹಾಗಾಗಿ ಎಲ್ಲ ಕೆಡುಕುಗಳ ಮೂಲ ಅವಳೇ ಎಂದು ಭಾವಿಸಬಹುದು. ಸ್ಥಿರವಾದ ಮನಸ್ಸಿಲ್ಲದವಳು ಎಂದು ನಂಬಲಾಗಿರುವುದರಿಂದ ಅವಳ ಮೇಲೆ ಕಟ್ಟುನಿಟ್ಟಾದ ಹತೋಟಿಯಿಟ್ಟುಕೊಳ್ಳತಕ್ಕದ್ದು. ದುರ್ಬಲಳಾದದ್ದರಿಂದ ಜೀವನದ ಎಲ್ಲ ಹಂತಗಳಲ್ಲೂ ಅವಳಿಗೆ ರಕ್ಷಣೆಯ ಅಗತ್ಯವಿದೆ. ಬಾಲ್ಯದಲ್ಲಿ ತಂದೆ, ತಾರುಣ್ಯದಲ್ಲಿ ಪತಿ, ಮುಪ್ಪಿನಲ್ಲಿ ಪತಿಯು ಮೃತನಾದ ಮೇಲೆ ಮಕ್ಕಳು ಅವಳನ್ನು ಸಂರಕ್ಷಿಸಬೇಕು. ಈ ಎರಡೂ ಚಿತ್ರಗಳು ಪರಸ್ಪರ ವಿರುದ್ಧವಾಗಿವೆ. ಅಂಗೀಕೃತ ಮಾದರಿಗಳಲ್ಲಿ ಒಲವು ನಿಷೇಧಾತ್ಮಕ ಹಾಗೂ ಕೀಳುಗಳೆಯುವ ಚಿತ್ರದ ಕಡೆಗೇ ಇದೆ. ಸುಪ್ರಸಿದ್ಧ ಕವಿ ತುಳಸೀದಾಸರು ಜನಪ್ರಿಯವಾದ ಒಂದು ಪದ್ಯದಲ್ಲಿ ಸ್ತ್ರೀಯರನ್ನು ತಮಟೆ, ನಿರಕ್ಷರ

ವ್ಯಕ್ತಿ, ಶೂದ್ರ ಮತ್ತು ಪಶು ಇವುಗಳ ಜೊತೆಗೆ ಸೇರಿಸುತ್ತಾರೆ. ಇವು ಸರಿಯಾದ ದಾರಿಯಲ್ಲೇ ಇರುವಂತೆ ನೋಡಿಕೊಳ್ಳಬೇಕಾದರೆ ಶಿಕ್ಷಿಸಬೇಕು ಎನ್ನುತ್ತಾರೆ. ದುರ್ಬಲ ಲಿಂಗವೆಂದು ಪರಿಗಣಿಸಿದ ಮಹಿಳೆ ಪುರುಷರಿಗಷ್ಟೇ ಮೀಸಲುಗೊಂಡ ಕೆಲವು ಸೌಲಭ್ಯ ಸವಲತ್ತುಗಳಿಂದ, ಹಕ್ಕುಗಳಿಂದ ವಂಚಿತಳಾಗಬೇಕಾಯಿತು.

ಅಧೀನತೆಯ ಈ ತತ್ವ ಮುಖ್ಯವಾಗಿ ಹಿಂದೂಧರ್ಮಕ್ಕೆ ಅಂಟಿಕೊಂಡು ಸರ್ವವ್ಯಾಪಕವಾಗಿದೆ. ಜಗತ್ತಿನ ದೃಷ್ಟಿಯನ್ನು ಸೆಳೆದಿದೆ. ಇಡೀ ಭಾರತೀಯ ಸಮಾಜಕ್ಕೆ ಒಂದು ರಂಗು ಕೊಟ್ಟಿದೆ. ಇದಕ್ಕೆ ಅಪವಾದಗಳಿಲ್ಲವೆಂದಲ್ಲ. ಕೆಲವು ಕಡೆ ಮಹಿಳೆಯರಿಗೆ ಹೆಚ್ಚು ಪ್ರಮಾಣದಲ್ಲಿ ಸಮಾನತೆಯನ್ನೂ ಸ್ವಾತಂತ್ರ್ಯವನ್ನೂ ನೀಡಲಾಗಿದೆ.

ಮಹಿಳೆಯರ ಮೇಲೆ ನಿಯಂತ್ರಣ ಹಾಕಿರುವ ಕ್ಷೇತ್ರಗಳು ಯಾವುವು? ಮೊದಲನೆಯದಾಗಿ, ಅವರ ಲೈಂಗಿಕ ಸ್ವಾತಂತ್ರ್ಯವನ್ನು ಪುರುಷರದಕ್ಕಿಂತ ಹೆಚ್ಚು ಕಟ್ಟುನಿಟ್ಟಾಗಿ ಹತೋಟಿಗೊಳಪಡಿಸಲಾಗಿದೆ. ಸ್ತ್ರೀಯರು ಬಹು ಸುಲಭವಾಗಿ ಮಲಿನಗೊಳ್ಳುವರು. ತಾವು ಹುಟ್ಟಿದ ಹಾಗೂ ಸೇರಿದ ಕುಟುಂಬಗಳೆರಡಕ್ಕೂ ಅಪಮಾನವುಂಟು ಮಾಡುವರು. ರಜಸ್ವಲೆಯಾಗುವುದಕ್ಕೆ ಮೊದಲೇ ಕನ್ಯೆಯ ವಿವಾಹ ಮಾಡಬೇಕು ಎಂಬ ನಿರ್ಬಂಧದ ಹಿಂದೆ ಇರುವುದು ಅವಳ ಪಾವಿತ್ರ್ಯವನ್ನು ರಕ್ಷಿಸುವುದೆಂಬ ಮುಖ್ಯ ಕಾರಣ. ಲೈಂಗಿಕತೆಯ ಹತೋಟಿಯಲ್ಲಿ ವ್ಯಕ್ತವಾಗುವುದು ಸಂತಾನೋತ್ಪಾದನೆಯ ಮೇಲೆ ಹತೋಟಿ. ಎರಡನೆಯದಾಗಿ, ಸ್ತ್ರೀಯರ ಚಲನವಲನಗಳ ಮೇಲೆ, ಅವರು ಇಟ್ಟುಕೊಳ್ಳುವ ಸಂಪರ್ಕಗಳ ಮೇಲೆ ನಿಯಂತ್ರಣ. ಇದರ ಹಿಂದಿರುವ ಅರ್ಥ, ಅವರು ಯಾವುದೇ ಒಂದು ಆಮಿಷಕ್ಕೆ ಒಳಗಾಗಿ ಲೈಂಗಿಕ ನಿರ್ಬಂಧಗಳನ್ನು ಉಲ್ಲಂಘಿಸದಿರಲಿ ಎಂಬುದು. ಹಾಗೆಯೇ ಅವರ ಆಸ್ತಿಪಾಸ್ತಿ, ನಗದು, ಪರಿಶ್ರಮ, ಕೌಶಲ ಮೊದಲಾದುವನ್ನು ಇತರರು ದುರುಪಯೋಗಪಡಿಸಿಕೊಂಡು ಅವರನ್ನು ಶೋಷಿಸದಿರಲಿ ಎಂದು. ಕೆಳವರ್ಗಗಳಲ್ಲಿನ ಹೆಂಗಸರು ತಮ್ಮ ಕೌಟುಂಬಿಕ ವೆಚ್ಚಗಳನ್ನು ಪೂರೈಸಿಕೊಳ್ಳಲು ಯಾವುದಾದರೂ ಕೆಲಸ ಮಾಡಬೇಕಾಗುತ್ತದೆ. ಇದರಿಂದಾಗಿ ಕುಟುಂಬ ವಲಯದ ಹೊರಗೆ ಅವರ ಚಲನವಲನ ಅಗತ್ಯವಾಗುತ್ತದೆ. ಹೀಗಾಗಿ ಈ ನಿಬಂಧನೆಗಳು ಮುಖ್ಯವಾಗಿ ಮೇಲು ಹಾಗೂ ಮಧ್ಯಮ ವರ್ಗದ ಕುಟುಂಬಗಳಿಗೆ ಮಾತ್ರ ಅನ್ವಯಿಸುತ್ತವೆ. ಮೂರನೆಯದಾಗಿ, ಮಹಿಳೆಯ ಸಂಪನ್ಮೂಲವನ್ನು ನಿಯಂತ್ರಣದಲ್ಲಿರಿಸಬೇಕು ಎಂದು ನಂಬಲಾಗಿತ್ತು. ಬಹುತೇಕ ಮಹಿಳೆಯರಿಗೆ ಸಂಪನ್ಮೂಲವೆಂದರೆ ಅವರ ದುಡಿಮೆ ಮತ್ತು ಕೌಶಲಗಳು. ಹೊರಗಿನ ಕೆಲಸ ನಿರ್ವಹಿಸುತ್ತಿರುವ ಕೂಲಿ ಹೆಂಗಸರಾಗಿರಬಹುದು, ಕುಟುಂಬದ ಕೆಲಸಕಾರ್ಯಗಳಲ್ಲಿ ಮಗ್ನರಾದವರಿರಬಹುದು. ಮನ್ನಣೆ ಗಳಿಸಿ, ಲಾಭದಾಯಕವಾಗಿ ಬಳಸಲು ಬರುವ ವಿಶೇಷ ಕೌಶಲ ಹೊಂದಿರಬಹುದು. ಇಲ್ಲಿ ಬರುವ ಪ್ರಶ್ನೆಗಳೆಂದರೆ, ಅವರು ತಾವು ಸಂಪಾದಿಸುವ ಹಣದಲ್ಲಿ ಎಷ್ಟನ್ನು ತಮಗಿಷ್ಟ ಬಂದಂತೆ ಉಪಯೋಗಿಸಲು ಅವಕಾಶವಿದೆ? ಎಷ್ಟನ್ನು ಅವರು

ಉಳಿಸಿಡಬಹುದು? ಕುಟುಂಬದ ಒಟ್ಟು ವರಮಾನಕ್ಕೆ ಅವರು ತಮ್ಮ ಕೊಡುಗೆಯಾಗಿ ಎಷ್ಟು ಹಣವನ್ನು ನೀಡಬಹುದು? ಮೇಲು ವರ್ಗ ಮತ್ತು ಮಧ್ಯಮ ವರ್ಗದ ಸ್ತ್ರೀಯರು ಮದುವೆಯಾಗಿ ಬರುವಾಗ ತಮ್ಮೊಂದಿಗೆ "ಸ್ತ್ರೀಧನ" ಅಥವಾ ಸ್ತ್ರೀಯ ಆಸ್ತಿ ಎಂದು ಕಾನೂನು ಪ್ರಕಾರ ಪರಿಗಣಿಸುವ ಒಂದಷ್ಟು ಆಸ್ತಿಪಾಸ್ತಿ ತರಬಹುದು. ಆದರೆ ಈ ಆಸ್ತಿಯನ್ನು ಅವರು ತಮಗಿಷ್ಟ ಬಂದ ಹಾಗೆ ತಾವೇ ನಿರ್ವಹಿಸಲು ಶಕ್ಯವಿದೆಯೆ? ಅಥವಾ ಕುಟುಂಬದ ಯೋಜನೆಗಳನ್ನು ಪೂರೈಸಲೋ, ತುರ್ತು ಸಂದರ್ಭಗಳಲ್ಲಿ ಅದನ್ನು ಉಪಯೋಗಿಸಿ ಕಷ್ಟ ಪರಿಹಾರ ಮಾಡಿಕೊಳ್ಳಲೋ ಅವಳ ಮೇಲೆ ಒತ್ತಡ ಬರುವುದಿಲ್ಲವೆ?

ಈ ಪಠೋಟಿಗಳನ್ನು ಬಹುಮಟ್ಟಿಗೆ ಸಾಮಾಜಿಕ ರಚನೆ, ಪಾತ್ರದ ಹಂಚಿಕೆ, ಮೌಲ್ಯಗಳು, ಸಾಮಾಜಿಕ ನಿಯಂತ್ರಣದ ಕಟ್ಟುನಿಟ್ಟು ಅಥವಾ ಸಡಿಲತೆ ಮೊದಲಾದವುಗಳನ್ನು ಅವಲಂಬಿಸಿ ಚಲಾಯಿಸಲಾಗುತ್ತದೆ. ಐತಿಹಾಸಿಕ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಶಕ್ತಿಗಳ ಅಂತರ–ಒಡನಾಟವು ಲಿಂಗ ಸಮೀಕರಣವನ್ನು ರೂಪಿಸುವಲ್ಲಿ, ಪುನರ್ ರೂಪಿಸುವಲ್ಲಿ ಬಹುಮಟ್ಟಿಗೆ ಕಾರಣವಾಗುತ್ತವೆ.

ಭಾರತೀಯ ಸಾಮಾಜಿಕ ವ್ಯವಸ್ಥೆಯ ಲಕ್ಷಣ, ಕೆಲವು ಅಪವಾದಗಳ ಹೊರತು, ಪಿತೃಪ್ರಧಾನ ಕುಟುಂಬ. ಅದು ಪುರುಷ ಪ್ರಾಧಾನ್ಯವನ್ನೂ ಸ್ತ್ರೀಯ ಅಧೀನತೆಯನ್ನೂ ಮಾನ್ಯ ಮಾಡುತ್ತದೆ. ಮದುವೆಯಾಗುತ್ತಿದ್ದಂತೆ ಹೆಣ್ಣು ತನ್ನ ತವರುಮನೆಯ ಸಂಬಂಧವನ್ನು ಕಡಿದುಕೊಂಡು ವಿವಾಹವಾಗಿ ಬರುತ್ತಿರುವ ಕುಟುಂಬದ ಸದಸ್ಯತ್ವ ಪಡೆಯುತ್ತಾಳೆ. ಅವಳಿಗೆ ಹುಟ್ಟುವ ಮಕ್ಕಳು ಅವಳ ಪತಿಯ ವಂಶವನ್ನು ಬೆಳೆಸುತ್ತವೆ. ಕುಟುಂಬದ ಒಳಗೆ ಅಧಿಕಾರವು ಪುರುಷರಿಗಿರುತ್ತದೆ. ಅನೇಕ ವೇಳೆ ಅತ್ಯಂತ ಹಿರಿಯನಾದ ಪುರುಷನಿಗೆ ಇರುತ್ತದೆ. ಅವನೇ ಮುಖ್ಯವಾಗಿ ನಿರ್ಣಯ ತೆಗೆದುಕೊಳ್ಳುವವನು, ಇತರ ಪುರುಷ ಸದಸ್ಯರ ಸಲಹೆ ಕೇಳಬಹುದಾದರೂ ಅಂತಿಮ ನಿರ್ಣಯ ಅವನದೇ. ಈ ಪ್ರಕ್ರಿಯೆಯಲ್ಲಿ ಮಹಿಳೆಯ ಪಾತ್ರ ಅಲ್ಪಸ್ವಲ್ಪ ಅನುಭವಕ್ಕೆ ಬಂದರೂ ಸ್ಪಷ್ಟವಾಗಿ ವ್ಯಕ್ತವಾಗುವುದಿಲ್ಲ. ಗಟ್ಟಿಮನಸ್ಸಿನ ಪಕ್ವವಾದ ಬುದ್ಧಿಯ ಮಹಿಳೆಯರು ತಮ್ಮ ಸ್ಥಾನವನ್ನು ಸ್ಥಿರೀಕರಿಸುತ್ತಾರೆ. ಆದರೆ ಬಹುಮಟ್ಟಿಗೆ ಅವರು ಹಿನ್ನೆಲೆಯಲ್ಲಿರುತ್ತಾರೆ. ಕಿರಿವಯಸ್ಸಿನ ಮಹಿಳೆಯರೂ ಹಿಂದೆ ಇದ್ದುಕೊಂಡೇ ಸೂತ್ರಗಳನ್ನು ಎಳೆಯುತ್ತಾರೆ. ಹೀಗಾಗಿ ಕುಟುಂಬ ರಾಜಕೀಯದಲ್ಲಿ ಮಹಿಳೆಯರ ಪಾತ್ರವನ್ನು ತಳ್ಳಿಹಾಕುವಂತಿಲ್ಲ. ಆದರೆ ಅಂತಿಮ ವಿಶ್ಲೇಷಣೆಯಲ್ಲಿ ಪುರುಷ ಪ್ರಾಧಾನ್ಯವನ್ನು ಅವರೂ ಗಂಭೀರವಾಗಿ ಪ್ರಶ್ನಿಸುವುದಿಲ್ಲ. ಅವರೇನಾದರೂ ಹಾಗೆ ಮಾಡಿದರೆ ಕುಟುಂಬ ಒಡೆಯುವುದು ಅನಿವಾರ್ಯವಾಗುತ್ತದೆ. ಕೆಲವು ಮಹಿಳಾ ಪ್ರಧಾನವಾದ ಕುಟುಂಬ ಉದಾಹರಣೆಗಳಿವೆಯೆಂಬುದೇನೋ ನಿಜ. ಮಕ್ಕಳು ಚಿಕ್ಕವರಾಗಿದ್ದಾಗ, ಕುಟುಂಬದಲ್ಲಿ ವ್ಯವಹಾರಗಳನ್ನು ನಿರ್ವಹಿಸಲು ಒಬ್ಬ ಮಹಿಳೆ ಮಾತ್ರವೇ ಇರುವಂತಹ ಸಂದರ್ಭದಲ್ಲಿ ಹೀಗಾಗಿರುತ್ತದೆ. ಮಕ್ಕಳು ಬೆಳೆದ ನಂತರ ಅವರಲ್ಲಿ ಹಿರಿಯನಾದವನು ಯಜಮಾನಿಕೆಯನ್ನು ವಹಿಸಿಕೊಳ್ಳುತ್ತಾನೆ.

ಹೆಚ್ಚಿನ ಆದಿವಾಸಿ ಬುಡಕಟ್ಟುಗಳು ಪಿತೃಪ್ರಧಾನ ವಂಶದವೇ. ಆದರೆ ಪಿತೃಪ್ರಾಧಾನ್ಯವು ಅವರಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುವುದಿಲ್ಲ. ಇದಕ್ಕೆ ಅಪವಾದಗಳು ಆಳುವವರು ಮತ್ತು ಸೇನಾಪತಿಗಳ ಕುಟುಂಬಗಳು. ಅಲ್ಲಿ ಪುರುಷನೇ ಪ್ರಧಾನ. ಆದಿವಾಸಿ ಹೆಂಗಸರು ಕಾಡುಗಳಲ್ಲಿ, ಹೊಲ ಗದ್ದೆಗಳಲ್ಲಿ ಕೆಲಸ ಮಾಡಬೇಕು. ಅವರಿಗೆ ಸಾಕಷ್ಟು ಪ್ರಮಾಣದಲ್ಲಿ ಚಲನ ಸ್ವಾತಂತ್ರ್ಯವಿದೆ. ಆರ್ಥಿಕ ಹೊಣೆಗಾರಿಕೆಯೂ ಇದೆ. ತಾತ್ವಿಕವಾಗಿ ಅವರು ಪುರುಷ ಪ್ರಾಧಾನ್ಯವನ್ನು ಒಪ್ಪಿಕೊಳ್ಳುತ್ತಾರೆ. ಅವರ ಅಂಕೆಗೆ ಒಳಪಡುತ್ತಾರೆ. ಆದರೆ ಬಹುಮಟ್ಟಿಗೆ ಅವರು ಸ್ವತಂತ್ರರಂತೆಯೇ ವರ್ತಿಸುತ್ತಾರೆ.

ಭಾರತದಲ್ಲಿ ಅಲ್ಲಲ್ಲೇ ಮಾತೃಗೋತ್ರ ಪ್ರಧಾನ ವರ್ಗಗಳಿವೆ. ಆದರೆ ಮಾತೃಪ್ರಧಾನತೆಯು ಮುಂದುವರಿದು ಬಂದುದಕ್ಕೆ ಆಧಾರ ಸಾಕಷ್ಟಿಲ್ಲ ಎಂಬುದನ್ನು ಈ ಮೊದಲೇ ನೋಡಿದ್ದೇವೆ. ಇಂತಹ ಕುಟುಂಬಗಳಲ್ಲಿ ವಂಶವನ್ನು ಗುರುತಿಸುವುದು ಸ್ತ್ರೀಯರ ಮೂಲಕ. ಆದರೆ ಆಲ್ಲೂ ರಾಜಕೀಯ ಅಧಿಕಾರ ನಿಲ್ಲುವುದು ಪುರುಷರ ಕೈಯಲ್ಲೇ. ಭೂಮಿ–ಕಾಣಿ ಆನುವಂಶಿಕವಾಗಿ ಬರುವುದು ಮಹಿಳೆಯರ ಮೂಲಕ. ಆದರೆ ಅದರ ನಿರ್ವಹಣೆ ಪುರುಷರದು. ಮಾತೃಗೋತ್ರ ಪ್ರಧಾನ ವ್ಯವಸ್ಥೆಯು ಮಹಿಳೆಯರ ಸ್ಥಾನಕ್ಕೊಂದು ಮಹತ್ವ ನೀಡಿ ಅವರಿಗೆ ವಿಶೇಷ ಗೌರವ ಕೊಡುತ್ತದೆ. ಖಾಸೀ ಜನರಲ್ಲಿ ಒಂದು ಗಾದೆಯಿದೆ. ಅದರರ್ಥ "ಯುದ್ಧ ಮತ್ತು ರಾಜಕೀಯ ಗಂಡಸರಿಗೆ; ಆಸ್ತಿ ಮತ್ತು ಮಕ್ಕಳು ಹೆಂಗಸರಿಗೆ" ಎಂದು. ಅವರಲ್ಲಿ ಅರಸರು, ನಾಯಕರು, ಅಧಿಕಾರವಿರುವ "ಹಿರಿಯರು" ಎಲ್ಲರೂ ಪುರುಷರೇ; ಆದರೆ ಮಹಿಳೆಯರಿಗೆ ಮುಖ್ಯವಾದ ಆರ್ಥಿಕವಾದ ಪಾತ್ರಗಳಿರುತ್ತವೆ. ಉದಾಹರಣೆಗೆ, ಖಾಸಿ ಮಹಿಳೆಯರು ಸಣ್ಣಪುಟ್ಟ ಅಂಗಡಿಗಳನ್ನು ನಡೆಸುತ್ತಾರೆ, ಸ್ಥಳೀಯ ವ್ಯಾಪಾರದಲ್ಲಿ ತೊಡಗುತ್ತಾರೆ. ಕೇರಳದ ಹಿಂದೂ ಸಮಾಜದ ಭಾಗವಾದ ನಾಯರ್‌ರು ಭೂಮಾಲೀಕರು ಅಥವಾ ಬೇಸಾಯ ಮಾಡದ ಗುತ್ತಿಗೆದಾರರು. ಅವರಲ್ಲಿ ಹೆಂಗಸರು ಮನೆಯಲ್ಲಿಯೇ ಇರುವವರು. ಗಂಡಸರು ಮಿಲಿಟರಿಗೆ ಸೇರಿದವರು. ಅವರ ತಾರಾವಾಡದಲ್ಲಿ ಆಸ್ತಿಯ ಯಜಮಾನಿಕೆ ಹೆಂಗಸರದು. ಅದನ್ನು ಆನುವಂಶೀಯವಾಗಿ ಅವರು ಪಡೆಯುತ್ತಿದ್ದರು. ಆದರೆ ಆಸ್ತಿಯನ್ನು ನೋಡಿಕೊಳ್ಳುವವರು ಕರ್ಣವರ್ ಎಂಬುವರು. ಅದು ಒಬ್ಬ ಪುರುಷನೇ ಆಗಿರಬೇಕು. ನಾಯರರಲ್ಲೂ ಖಾಸೀಗಳಲ್ಲೂ ಸಾಮಾನ್ಯವಾಗಿ ನಿರ್ವಾಹಕನ ಈ ಪಾತ್ರವನ್ನು ಚಿಕ್ಕಪ್ಪ ಅಥವಾ ಹಿರಿಯಣ್ಣ ನಿರ್ವಹಿಸುತ್ತಿದ್ದರು. ಲಕ್ಷದ್ವೀಪದ ಮುಸ್ಲಿಮರ ಮಾತೃಗೋತ್ರ ಪ್ರಧಾನವರ್ಗಗಳಲ್ಲೂ ಇದೇ ಮಾದರಿ ಕಂಡುಬರುತ್ತದೆ. ಕೇರಳ ಮತ್ತು ಕರ್ಣಾಟಕದ ಕೆಲವು ಮಾತೃಗೋತ್ರ ಪ್ರಧಾನ ಕುಟುಂಬಗಳಲ್ಲಿ ಮಾತ್ರ ಮನೆತನದ ಯಜಮಾನಿಕೆಯನ್ನು ಮಹಿಳೆ ಹೊತ್ತಿರುತ್ತಾಳೆ.

ಮಾತೃ ಯಜಮಾನ್ಯವು ಒತ್ತಡಕ್ಕೆ ಸಿಕ್ಕಿದೆ. ಇಂದಿನ ಸಾಮಾಜಿಕ ಪರಿಸರವು ಅದರ ಕಾರ್ಯರೂಪದಲ್ಲಿ ಕೆಲವು ಬದಲಾವಣೆಗಳನ್ನು ಒತ್ತಾಯಿಸುತ್ತಿದೆ. ಮಾರುಕಟ್ಟೆ, ಆಧುನಿಕ ವಿದ್ಯಾಭ್ಯಾಸ, ಭೌಗೋಳಿಕವಾಗಿ ಪರಿಚಲನೆ ಹೆಚ್ಚುತ್ತಿರುವುದು, ನೂತನ ಉದ್ಯೋಗಾವಕಾಶಗಳು ಇವು ಪರಿವರ್ತನೆಗೆ ಕಾರಣವಾಗಿರುವ ಕೆಲವು

ಮುಖ್ಯಾಂಶಗಳು. ಪತಿ, ಪತ್ನಿ, ಮಕ್ಕಳು ಮೊದಲಾದ ಘಟಕಗಳಲ್ಲಿ ವಿಶೇಷವಾಗಿ ವಿದೇಶೀ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮಾತೃಪ್ರಾಧಾನ್ಯ ಪದ್ಧತಿಯು ಹಿಂದೆ ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಇದ್ದಷ್ಟು ಸರಾಗವಾಗಿ ವರ್ತಿಸುವುದಿಲ್ಲ. ಕಾನೂನು ವಿವಾಹದ ಮೂಲತತ್ವ ಏನಿತ್ತೋ ಅದನ್ನು ಬದಲಾಯಿಸಿ ವ್ಯಕ್ತಿಗಳಿಗೆ ತಮ್ಮ ಆನುವಂಶಿಕ ಆಸ್ತಿಯನ್ನು ಸಮನಾಗಿ ಹಂಚಿಕೊಳ್ಳುವ ಹಕ್ಕನ್ನು ನೀಡಿರುವುದರಿಂದಾಗಿ, ನಾಯರ್ *ತಾರವಾಡ*ಗಳು ಕ್ಷಯಿಸುತ್ತಿವೆ. ಸ್ವಂತಾರ್ಜಿತ ಆಸ್ತಿಯನ್ನು ಗಣನೆಗೆ ತೆಗೆದುಕೊಂಡು ಈಗ ಖಾಸಿ ಜನರೂ ಕೂಡ ತಮ್ಮ ಶಾಸನಕ್ಕೆ ತಿದ್ದುಪಡಿ ತರಲು ಪ್ರಯತ್ನಿಸುತ್ತಿದ್ದಾರೆ. ಆದರೆ ಮಾತೃಪ್ರಧಾನ ವ್ಯವಸ್ಥೆಯ ಭಾವನೆಯನ್ನು ಪೂರ್ತಿಯಾಗಿ ಅಳಿಸಿಹಾಕಲು ಸಾಧ್ಯವಿಲ್ಲ. ಏಕೆಂದರೆ ಮಹಿಳೆಯರು ತಮ್ಮ ಪರಂಪರೆಯನ್ನು ಮುಂದುವರಿಸುತ್ತಲೇ ಇದ್ದಾರೆ. ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯುತ್ತಾರೆ. ಸಾಂಪ್ರದಾಯಿಕತೆಯು ನೀಡಿದ್ದ ಗೌರವವನ್ನೂ ಸ್ಥಾನಮಾನವನ್ನೂ ಒತ್ತಾಯಿಸಿ ಕೇಳುತ್ತಿದ್ದಾರೆ.

ಪಾತ್ರದ ಹಂಚಿಕೆಯಲ್ಲಿ "ಗಂಡಸರ ಕೆಲಸ", "ಹೆಂಗಸರ ಕೆಲಸ" ಎಂದು ವ್ಯತ್ಯಾಸ ಕಲ್ಪಿಸಲಾಗುತ್ತದೆ. ಮನೆಯ ಕಾರುಭಾರುಗಳ ನಿರ್ವಹಣೆ ಮಹಿಳೆಯರ ಕ್ಷೇತ್ರವೇ. ಮನೆಯ ಕೆಲಸಕಾರ್ಯಗಳಿಗೆ ಹಣಕೊಟ್ಟು ಇತರರನ್ನು ನೇಮಿಸಿಕೊಳ್ಳದೆ ಹೋದಾಗ – ಕೆಲವರು ಮಾತ್ರ ಹಾಗೆ ನೇಮಿಸಿಕೊಳ್ಳಲು ಶಕ್ತರಾಗಿರುತ್ತಾರೆ – ಮಹಿಳೆಯರು ನೀರು ಸೇದುವುದು, ಅಡಿಗೆ ಮಾಡುವುದು, ಮನೆಯನ್ನು ಸ್ವಚ್ಛಗೊಳಿಸುವುದು, ಮನೆಯ ಗಂಡಸರ, ಮಕ್ಕಳ ಹಾಗೂ ತಮ್ಮ ಬಟ್ಟೆಗಳನ್ನು ಒಗೆಯುವುದು, ಮಕ್ಕಳನ್ನು ನೋಡಿಕೊಳ್ಳುವುದು ಇವೆಲ್ಲವನ್ನೂ ಮಾಡಬೇಕಾಗುತ್ತದೆ. ಈ ಯಾವುದೇ ಕೆಲಸವನ್ನು ಗಂಡಸರು ಮಾಡುತ್ತಿದ್ದರೆ ಸಾಮಾನ್ಯವಾಗಿ ಅವರು ಇತರರ ಅಪಹಾಸ್ಯಕ್ಕೆ ತುತ್ತಾಗುತ್ತಾರೆ. ಹೆಂಡತಿ ಬೇರೆ ಊರಿಗೆ ಹೋಗಿದ್ದರೆ ಅಥವಾ ಕಾಯಿಲೆ ಬಿದ್ದಿದ್ದರೆ ಅಥವಾ ಈ ಕೆಲಸಗಳನ್ನು ನಿರ್ವಹಿಸಲು ಬೇರಾವ ಹೆಂಗಸೂ ಇರದಿದ್ದರೆ ಮಾತ್ರ ಗಂಡಸು ನಿರ್ವಹಿಸುತ್ತಾನೆ. ಈ ಭಾವನೆ ಎಷ್ಟು ಆಳವಾಗಿ ಬೇರೂರಿಬಿಟ್ಟಿದೆಯೆಂದರೆ, ಪೂರ್ಣಾವಧಿಯ ವೃತ್ತಿಗಳಲ್ಲಿ ನಿರತರಾಗಿರುವ ಹೆಂಗಸರೂ ಕೂಡ ಕೆಲಸದ ಜೊತೆಗೆ ಮನೆಗೆಲಸಗಳನ್ನೂ ಮಾಡಬೇಕೆಂದು ನಿರೀಕ್ಷಿಸಲಾಗುತ್ತದೆ. ಅನೇಕ ಹೆಂಗಸರಿಗೆ ತಾವು ಮನೆಗೆಲಸಗಳನ್ನು ಮಾಡದೆ ಹೋದರೆ ಏನೋ ಕೊರತೆಯಾದಂತೆ, ತಾವೇನೋ ತಪ್ಪು ಮಾಡಿದಂತೆ ಭಾವಿಸುತ್ತಾರೆ. ಇದಕ್ಕೆದುರಾಗಿ ಪುರುಷರು ಮನೆಯ ಹೊರಗಿನ ವ್ಯವಹಾರಗಳನ್ನು ನೋಡಿಕೊಳ್ಳುತ್ತಾರೆ. ಕುಟುಂಬಕ್ಕೆ ಆಹಾರ ಒದಗಿಸುವುದು, ಕುಟುಂಬದೊಳಗಿನ ಘರ್ಷಣೆಗಳನ್ನು, ಅತೃಪ್ತಿಗಳನ್ನು ಪರಿಹಾರ ಮಾಡುವುದು ಅವರ ಕೆಲಸವಾಗಿರುತ್ತದೆ.

ಪುರುಷರ ಪ್ರಾಧಾನ್ಯವೇನೋ ಇದೆ. ಆದರೆ ತಮ್ಮ ಆಸೆ, ಆಕಾಂಕ್ಷೆಗಳ ಪ್ರಕಾರವೇ ಕೆಲಸಗಳನ್ನು ಮಾಡಿಸಿಕೊಳ್ಳುವ ದಾರಿ ಮಹಿಳೆಯರಿಗೆ ಗೊತ್ತು. ಕೆಳಜಾತಿಗಳಲ್ಲಿ ಮತ್ತು ವರ್ಗಗಳಲ್ಲಿ ಕುಟುಂಬದ ಆರ್ಥಿಕ ವ್ಯವಹಾರಗಳಲ್ಲಿ ಸ್ತ್ರೀಯರಿಗೆ ಗಣನೀಯವಾದ ಪಾಲು ಉಂಟು. ಅವರು ನೇಗಿಲು ಹಿಡಿಯದೆ ಇರಬಹುದು.

ಆದರೆ ಕೃಷಿಗೆ ಹತ್ತಾರು ವಿಧಗಳಲ್ಲಿ ಅವರು ನೆರವಾಗುತ್ತಾರೆ. ಕುಶಲಕರ್ಮಿಗಳ ಕುಟುಂಬಗಳಲ್ಲಾದರೆ ಸ್ತ್ರೀಯರಿಗೆ ಪರಂಪರಾಗತ ಕುಶಲಕಲೆಯ ನಿರ್ವಹಣೆಯಲ್ಲಿ ಹೆಚ್ಚು ಖಚಿತವಾದ ಪಾತ್ರವಿರುತ್ತದೆ. ಹಾಗಾಗಿ ಮನೆಯ ಹಣಕಾಸಿನ ವ್ಯವಹಾರಗಳಲ್ಲಿ ಅವರ ಕೊಡುಗೆಯನ್ನು ಎಷ್ಟು ಮಾತ್ರಕ್ಕೂ ಅಲಕ್ಷಿಸುವ ಹಾಗಿಲ್ಲ. ಮೇಲುವರ್ಗದ ಸಾಮಾಜಿಕ ಸಮುದಾಯಗಳಲ್ಲಿ ಅನ್ನ, ಬಟ್ಟೆ ಒದಗಿಸುವವರು ಗಂಡಸರೇ ಆಗಿದ್ದರು. ಆದರೆ ಈ ಪರಿಸ್ಥಿತಿಯೂ ಈಗ ವೇಗವಾಗಿ ಬದಲಾಗುತ್ತಿದೆ. ಹೆಂಗಸರೂ ಈಗ ಸಾರ್ವಜನಿಕ ಸೇವಾ ಕ್ಷೇತ್ರಗಳಲ್ಲಿ, ವಿವಿಧ ವೃತ್ತಿಗಳಲ್ಲಿ ದುಡಿಯುತ್ತಿದ್ದಾರೆ. ಮಾಸಿಕ ವೇತನವನ್ನು ಸಂಪಾದಿಸುತ್ತಿದ್ದಾರೆ. ಏರಿದ ಜೀವನಮಟ್ಟದ ಬೇಡಿಕೆಗಳನ್ನು ಪೂರೈಸಿಕೊಳ್ಳುವ ಹಾಗೂ ಬೆಲೆಯೇರಿಕೆಯನ್ನು ನಿರ್ವಹಿಸುವ ಸಲುವಾಗಿ ಈ ಒಲವನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ. ಆದರೆ ಹೆಂಡತಿಯು ಸಂಪಾದಿಸಿ ತಂದು ತನ್ನನ್ನು ಸಾಕುವುದನ್ನು ಗಂಡನು ಇಷ್ಟಪಡುವುದಿಲ್ಲ. ಹೆಂಡಂದಿರು ತಮಗಿಂತ ಹೆಚ್ಚು ಸಂಪಾದಿಸಿದರೆ ಗಂಡಸರ ಅಹಂಕಾರಕ್ಕೆ ಚುಚ್ಚಿದಂತಾಗುತ್ತದೆ. ಈಗ ಮೂಡುತ್ತಿರುವ ಪರಿಸ್ಥಿತಿ ಪಿತೃಪ್ರಧಾನ ಕುಟುಂಬದ ಪರವಾಗಿ ನಿಲ್ಲುವುದಿಲ್ಲ. ಆದರೆ ಹಿಂದಿನಿಂದ ಬಂದಿರುವ ಚಿತ್ರ ತನ್ನ ಸ್ಥಾನ ಬಿಟ್ಟುಕೊಡಲು ಇಷ್ಟಪಡುತ್ತಿಲ್ಲ. ಸಮಾಜವು ಬದಲಾಗುತ್ತಿರುವ ಚಿತ್ರಕ್ಕೆ ನಿಧಾನವಾಗಿಯಾದರೂ ಹೊಂದಿಕೊಳ್ಳುತ್ತಿದೆ.

ಹಿಂದೂ ಸಮಾಜದ ಪಿತೃಪ್ರಧಾನ ಭಾಗವು ಹೆಣ್ಣಿಗೆ ಹಲವಾರು ಸದ್ಗುಣಗಳು ಇರಬೇಕೆಂದು ನಿರೀಕ್ಷಿಸುತ್ತದೆ. ಅವುಗಳಲ್ಲಿ ಮೊದಲನೆಯದು ಶೀಲ. ಮದುವೆಯಾಗುವುದಕ್ಕಿಂತ ಮೊದಲು ಹೆಣ್ಣು ಲೈಂಗಿಕ ಅರ್ಥದಲ್ಲಿ ಯಾವನೇ ಪುರುಷನನ್ನು ಕುರಿತು ಆಲೋಚನೆ ಕೂಡ ಮಾಡಕೂಡದು; ಮದುವೆಯಾದ ನಂತರ ತನ್ನ ಪತಿಯು ಹೊರತು ಇನ್ನೊಬ್ಬ ಗಂಡಸಿನ ಬಗ್ಗೆ ಆಲೋಚಿಸಬಾರದು. ಎರಡನೆಯ ಸದ್ಗುಣ ಪತಿಭಕ್ತಿ. ಪತಿಪರಮೇಶ್ವರ ಎಂಬ ಕಲ್ಪನೆ (ಗಂಡನೇ ದೇವರು ಎಂಬ ಭಾವನೆ) ವ್ಯಾಪಕವಾಗಿದೆ. ಅದೇ ಗಂಡನೇ ಮುಂದಿನ ಜನ್ಮಗಳಲ್ಲೂ ತನಗೆ ದೊರಕಲಿ ಎಂದು ಹೆಂಡತಿಯು ಅನೇಕ ವ್ರತೋಪವಾಸಗಳನ್ನು ಮಾಡುತ್ತಾಳೆ. ಆ ಉಪವಾಸ ವ್ರತಗಳಲ್ಲಿ ಪತಿಯ ದೀರ್ಘಾಯುಷ್ಯಕ್ಕಾಗಿ ಪ್ರಾರ್ಥನೆ ಸಲ್ಲಿಸುವುದೂ ಸೇರಿರುತ್ತದೆ. ಏಕೆಂದರೆ ತನಗೆ ವೈಧವ್ಯದ ಯಾತನೆ ಬರಬಾರದೆಂದು ಹೆಂಡತಿ ಆಶಿಸುತ್ತಾಳೆ. ಬಹುವಾಗಿ ವಿವಾದಕ್ಕೊಳಗಾದ ಸತೀಪದ್ಧತಿಯಲ್ಲಿ ತನ್ನ ಪತಿಯ ಚಿತೆಯ ಮೇಲೆ ಕುಳಿತು ಪತ್ನಿಯು ಆತ್ಮಾಹುತಿ ಮಾಡಿಕೊಳ್ಳುತ್ತಾಳೆ. ಈ ಕರಾಳಪದ್ಧತಿಯನ್ನು ಶಾಸನವು ನಿಷೇಧಿಸಿದೆ. ಇಂದಿನ ಭಾರತದಲ್ಲಿ ಸತೀ ಆಚರಣೆ ತುಂಬ ವಿರಳ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೆಂದರೆ, ಈ ವಿಚಾರವು ಹಿಂದೂ ಮನಸ್ಸಿನ ಮೇಲೆ ಹೊಂದಿರುವ ಬಿಗಿಯಾದ ಹಿಡಿತ. ಸತಿಯಾದ ಸ್ಥಳಗಳನ್ನು ಆಮೇಲೆ ದೇವಾಲಯವಾಗಿ ಪರಿವರ್ತಿಸಲಾಗುತ್ತದೆ. ಭಾರೀ ಸಂಖ್ಯೆಯಲ್ಲಿ ಜನರು ಸೇರುವ ಜಾತ್ರೆಗಳನ್ನು ನಡೆಸಲಾಗುತ್ತದೆ. ಮೂರನೆಯದಾಗಿ, ಪತ್ನಿಯು ತಾನು ವಿವಾಹವಾಗಿ ಬಂದ ಕುಟುಂಬದ ರಚನೆಗೆ ತನ್ನನ್ನು

ಹೊಂದಿಸಿಕೊಳ್ಳಬೇಕಾಗುತ್ತದೆ. ಪತಿಯ ವ್ಯಕ್ತಿತ್ವದೊಳಗೆ ತನ್ನ ವೈಯಕ್ತಿಕತೆಯನ್ನು ವಿಲೀನಗೊಳಿಸಿಕೊಳ್ಳಬೇಕಾಗುತ್ತದೆ. ಅವಳು ಪತಿಯ "ನೆರಳಿನಂತೆ" ಇರಬೇಕು. ಜೀವನಯಾತ್ರೆಯುದ್ದಕ್ಕೂ ಅವನನ್ನು ಅನುಸರಿಸಬೇಕು. ಅಗತ್ಯದ ಗಳಿಗೆಗಳಲ್ಲಿ ಅವನಿಗೆ ಒತ್ತಾಸೆಯಾಗಿ ನಿಂತು ಅವನ ಶಕ್ತಿಗೆ ತನ್ನ ಶಕ್ತಿಯನ್ನು ಕೂಡಿಸಿ ಕೊಡಬೇಕು.

ಇವು ಆದರ್ಶ ಮೌಲ್ಯಗಳು. ಅನೇಕರು ಚಾಚೂ ತಪ್ಪದೆ ಅವುಗಳನ್ನು ಪಾಲಿಸಲಾರರು ಎಂಬುದೂ ಸ್ಪಷ್ಟವಾಗಿತ್ತು. ಹಾಗಾಗಿ ಹಲವಾರು ಜಾತಿಗಳು, ಸಮುದಾಯಗಳು, ವಾಸ್ತವವಾಗಿ ಜನತೆಯ ಬಹುಭಾಗ, ವಿವಾಹ ವಿಚ್ಛೇದನವನ್ನೂ ವಿಧವಾ ಪುನರ್ವಿವಾಹವನ್ನೂ ಅನುಮತಿಸುತ್ತವೆ. ಬಡತನವಿರುವ ಸಂಸ್ಕೃತಿಯಲ್ಲಿ ಅಂತಹ ನಿಯಮಗಳನ್ನು ಪಾಲಿಸುವುದು ಸಾಧ್ಯವಾಗುವುದಿಲ್ಲ. ಆದಿವಾಸಿಗಳಲ್ಲಿ ಹಾಗೂ ಮಾತೃಪ್ರಧಾನ ಪದ್ಧತಿಯಿರುವ ಸಮುದಾಯಗಳಲ್ಲಿನ ಪರಿಸ್ಥಿತಿ ಬೇರೆ. ಮಿತವ್ಯಯ, ಕಷ್ಟಪಟ್ಟು ಕೆಲಸ ಮಾಡುವುದು, ಕುಟುಂಬದ ಇತರ ಸದಸ್ಯರ ಕ್ಷೇಮವನ್ನು ಪರಿಗಣಿಸುವುದು, ಈ ಕೆಲವು ಸದ್ಗುಣಗಳನ್ನು ಎಲ್ಲ ಸಮುದಾಯಗಳಲ್ಲೂ, ಸಮಾಜದ ಎಲ್ಲ ವರ್ಗಗಳಲ್ಲೂ ನಿರೀಕ್ಷಿಸಲಾಗುತ್ತದೆ. ಬಂಜೆತನ ಹೆಂಗಸಿಗೆ ಒಂದು ಶಾಪ ಎಂದು ಪರಿಗಣಿಸಲಾಗುತ್ತಿತ್ತು. ಪಿತೃಗೋತ್ರ ಪ್ರಧಾನ ಸಮುದಾಯಗಳಲ್ಲಿ ಆಕೆಯು ವಂಶವನ್ನು ಮುಂದಕ್ಕೆ ಬೆಳೆಸಲು ಮಗನಿಗೆ ಜನ್ಮ ಕೊಡಬೇಕು. ಮಾತೃಗೋತ್ರ ಪ್ರಧಾನ ಸಮುದಾಯಗಳಲ್ಲಿ ಇದು ಅಪೇಕ್ಷಣೀಯವೆನಿಸಿದರೂ ಅಗತ್ಯವೆಂದೇನೂ ಇಲ್ಲ. ಅವರಲ್ಲೂ ಸಂತಾನ ಒಂದು ಸಾಮಾಜಿಕ ಅಗತ್ಯ ಮತ್ತು ಬೆಲೆಯುಳ್ಳ ವಸ್ತು.

ನಿಯಮಗಳನ್ನೂ ಮೌಲ್ಯಗಳನ್ನೂ ಜಾರಿಗೆ ತರುವುದು ಬಹುಮಟ್ಟಿಗೆ ನಿಯಂತ್ರಣ ವ್ಯವಸ್ಥೆಯ ಬಲ ಅಥವಾ ದೌರ್ಬಲ್ಯವನ್ನು ಅವಲಂಬಿಸಿರುತ್ತದೆ. ಸಾಮಾಜಿಕ, ಧಾರ್ಮಿಕ ಕೃತಿಗಳಲ್ಲಿ ಮೌಲ್ಯಗಳನ್ನು ವಿವರಿಸಿರುವುದು ಮತ್ತು ನಿಯಮಗಳನ್ನು ವಿಧಿಸಿರುವುದು, ಇಷ್ಟರಿಂದಲೇ ಅವುಗಳನ್ನು ಪಾಲಿಸಿದಂತಾಗಲಿಲ್ಲ. ಪರಂಪರೆಯು ಸದೃಢವಾಗಿದ್ದರೂ, ವ್ಯಾಜ್ಯಗಳನ್ನು ಪರಿಹರಿಸಲು, ಅಪರಾಧಿ ಸದಸ್ಯರು ಪಶ್ಚಾತ್ತಾಪಪಟ್ಟು ಮಾಮೂಲಿನಂತೆ ವರ್ತಿಸುವ ಹಾಗೆ ಮಾಡಲು ಹಿರಿಯರ, ಜಾತಿ, ಪಂಚಾಯತಿ ಅಥವಾ ಗ್ರಾಮಪಂಚಾಯತಿ ಮೊದಲಾದ ಸಾಮಾಜಿಕ ಸಂಸ್ಥೆಗಳ ಮಧ್ಯಪ್ರವೇಶ, ಪರಿಶ್ರಮ ಅಗತ್ಯವಾಗುತ್ತದೆ. ಮೇಲುಜಾತಿ ಮತ್ತು ವರ್ಗಗಳಲ್ಲಿ ಗೌರವ ಮತ್ತು ನಾಚಿಕೆಯ ಭಾವನೆಗಳು ಬಲವಾಗಿರುತ್ತವೆ. ಮನೆಯ ವ್ಯವಹಾರಗಳು ಬಯಲಿಗೆ ಬರದಂತೆ ಮಾಡಲು ವಿಶೇಷವಾಗಿ ಪ್ರಯತ್ನ ಮಾಡುತ್ತಾರೆ. ಏನಾದರೂ ಗೊಂದಲವುಂಟಾದರೆ ಮನೆಯ ಹಿರಿಯರು, ಹೆಂಡತಿಯ ತಂದೆ, ತಾಯಿ, ಆಕೆಯ ಆಪ್ತ ಬಂಧುವರ್ಗ ಇವರು ನಿಂತು ಇತ್ಯರ್ಥ ಮಾಡುತ್ತಾರೆ. ಕೆಳಜಾತಿಗಳು ಮತ್ತು ವರ್ಗಗಳಲ್ಲಿ ಸಾಮಾನ್ಯವಾಗಿ ರಹಸ್ಯವನ್ನು ಇಟ್ಟುಕೊಳ್ಳಲಾಗುವುದಿಲ್ಲ. ಆದ್ದರಿಂದ ಇತರರ ಮಧ್ಯಪ್ರವೇಶ ಅಗತ್ಯವಾಗುತ್ತದೆ. ಅವರೂ ನಾಚಿಕೆಯ ಬಗ್ಗೆ ಸೂಕ್ಷ್ಮ ಪ್ರಕೃತಿಯವರಾಗಿರುತ್ತಾರೆ. ಆದರೆ ಆ ಬಗ್ಗೆ ಅವರು ಏನೂ ಮಾಡಲಾರದಾಗಿರುತ್ತಾರೆ. ಹೆಂಡತಿಯನ್ನು ಹೊಡೆದು ಬಡಿದು ಮನೆಯ

ಗೌರವ ರಕ್ಷಿಸಲು ಪ್ರಯತ್ನಿಸುತ್ತಾರೆ. ಕುಟುಂಬದೊಳಗೆ ನಡೆಯುವ ಈ ಹಿಂಸಾಕೃತ್ಯ ಎಷ್ಟು ಎಂದು ಅಳತೆ ಮಾಡುವುದು ಸಾಧ್ಯವಿಲ್ಲ. ಕೆಳವರ್ಗಗಳಲ್ಲಿ ಅದು ಸ್ಪಷ್ಟವಾಗಿ ಗೋಚರಿಸುತ್ತದೆ. ಮೇಲುಸ್ತರದಲ್ಲೂ ಅದಿದೆ. ಸ್ವಾತಂತ್ರ್ಯ ಬಂದು ನಾಲ್ಕು ದಶಕಗಳೂ ಸರಿದಿದ್ದರೂ, ಪದೇ ಪದೇ ನಾವು ಪತ್ರಿಕೆಗಳಲ್ಲಿ ವಧುದಹನ, ವರದಕ್ಷಿಣೆ ಸಾವುಗಳ ಬಗೆಗೆ ಓದುತ್ತೇವೆ. ಅದಕ್ಕಿಂತ ಕಡಮೆ ಪ್ರಮಾಣದ ಹಿಂಸೆಯೆಂದರೆ, ಹೆಂಡತಿಯ ಮೇಲೆ ಮತ್ತು ಅವಳ ತಂದೆತಾಯಿಯರ ಮೇಲೆ ಅಪವಾದ, ನಿಂದೆ ಹೊರಿಸುವುದು, ಹೆಂಡತಿಯು ವಿಶ್ರಾಂತಿಯೇ ಇಲ್ಲದೆ ವಿಪರೀತ ಕೆಲಸ ಮಾಡುವಂತೆ ಬಲಾತ್ಕರಿಸುವುದು, ಅವಳಿಗೆ ಸಾಕಷ್ಟು ಪುಷ್ಟಿಕರ ಆಹಾರ ಕೊಡದಿರುವುದು, ಅನೇಕ ಕಾರಣಗಳಿಂದ ಅವಳ ಮೇಲೆ ಹರಿಹಾಯ್ದು ಮಾನಸಿಕವಾಗಿ ಹಿಂಸಿಸುವುದು ಇತ್ಯಾದಿ. ವಿದ್ಯಾವತಿಯರಾದ, ಮೇಲುವರ್ಗಕ್ಕೆ ಸೇರಿದ ಮಹಿಳೆಯರೂ ಇಂತಹ ಹಿಂಸೆಗಳಿಗೆ ಬಲಿಯಾಗುತ್ತಾರೆ. ಆದರೆ ಈಗ ಪರಿಸ್ಥಿತಿ ಬದಲಾಗುತ್ತಿದೆ.

ಅಸಮಾನ ಲಿಂಗಸಂಬಂಧಗಳು, ಸ್ತ್ರೀಯರಿಗೆ ಎಸಗುವ ಅನ್ಯಾಯಗಳು ಸಮಾಜ ಸುಧಾರಕರ ಗಮನ ಸೆಳೆದಿದೆ. ಅನೇಕರು ಸ್ತ್ರೀಯರ ಪರವಾಗಿ ಬೆಂಬಲ ವ್ಯಕ್ತಪಡಿಸಿದ್ದಾರೆ. ಕೆಲವು ಮಧ್ಯಕಾಲೀನ ಸಂತ ಕವಿಗಳು ಸ್ತ್ರೀಯರನ್ನು ಹೆಚ್ಚಿನ ನ್ಯಾಯದಿಂದ, ಮಾನವೀಯತೆಯಿಂದ ನಡೆಸಿಕೊಳ್ಳಬೇಕೆಂದು ಸಾರಿ ಹೇಳಿದ್ದಾರೆ. ಬ್ರಹ್ಮಸಮಾಜ, ಪ್ರಾರ್ಥನಾ ಸಮಾಜ, ಆರ್ಯಸಮಾಜ ಮತ್ತು ಕೆಲವು ಮುಸ್ಲಿಂ ಸುಧಾರಣಾ ಚಳುವಳಿಗಳು ಮಹಿಳೆಯರ ಹಕ್ಕುಗಳನ್ನೂ ಸ್ಥಾನಮಾನಗಳನ್ನೂ ಸುಧಾರಿಸುವುದನ್ನು ತಮ್ಮ ಕಾರ್ಯಸೂಚಿಯಲ್ಲಿ ಅಳವಡಿಸಿಕೊಂಡಿವೆ. ಅವೆಲ್ಲ ಸಾಮಾನ್ಯವಾಗಿ ಸಾಮಾಜಿಕ ಮತ್ತು ಕಾನೂನು ಅಸಮಾನತೆಗಳ ಎದುರಾಗಿ ಹೋರಾಡಿದುವು. ಬಾಲ್ಯವಿವಾಹ, ವಿಧವೆಯರನ್ನು ನಡೆಸಿಕೊಳ್ಳುವ ರೀತಿ, ಸ್ತ್ರೀಯರಿಗೆ ಆಸ್ತಿ ಹಕ್ಕು ವಂಚಿಸುವುದು, ಮಹಿಳಾ ವಿದ್ಯಾಭ್ಯಾಸ ಈ ಸಮಸ್ಯೆಗಳಿಗೆ ವಿಶೇಷ ಗಮನಕೊಟ್ಟವು.

ಬ್ರಿಟಿಷರು ತಮ್ಮ ಆಡಳಿತಾವಧಿಯಲ್ಲಿ ಧರ್ಮದ ಸಂಬಂಧವಿದ್ದ ಸಾಮಾಜಿಕ ಸುಧಾರಣೆಗಳನ್ನು ಚುರುಕುಗೊಳಿಸಲು ಪ್ರಯತ್ನಿಸಿದರು. ಸಾಂಪ್ರದಾಯಿಕತೆಯು ಬಲವಾಗಿದ್ದು ವಿವಿಧ ಸಮುದಾಯಗಳ ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಮಧ್ಯಪ್ರವೇಶ ಮಾಡುವುದನ್ನು ತೀವ್ರವಾಗಿ ಪ್ರತಿಭಟಿಸಿತು. ಸತೀ ಪದ್ಧತಿಯನ್ನು ನಿಷೇಧಿಸಲಾಯಿತು (1829). ವಿಧವಾ ಪುನರ್ವಿವಾಹಕ್ಕೆ ಕಾನೂನಿನ ಬೆಂಬಲ ದೊರಕಿತು (1856),ಸ್ತ್ರೀ–ಶಿಶುಹತ್ಯೆಯನ್ನು ನಿಷೇಧಿಸಿದರು (1870),ವಿಶೇಷ ವಿವಾಹ ಶಾಸನದ ಪ್ರಕಾರ ಅಂತರ್‌ಜಾತೀಯ ವಿವಾಹಕ್ಕೆ ಅನುಮತಿ ದೊರಕಿತು (1872), ವಿವಾಹದ ವಯಸ್ಸನ್ನು ಹನ್ನೆರಡು ವರ್ಷಕ್ಕೆ ಏರಿಸಲಾಯಿತು (1891), ಬಾಲ್ಯ ವಿವಾಹದ ವಿರುದ್ಧವಾಗಿ ಶಾಸನ ಜಾರಿಗೆ ಬಂದಿತು (1929),ಮದರಾಸು ಪ್ರಾಂತದಲ್ಲಿ ಮಹಿಳೆಯರಿಗೆ ಮತದಾನದ ಹಕ್ಕು ದೊರಕಿತು (1921) ಮತ್ತು ಮಹಿಳೆಯರಿಗೆ ಆಸ್ತಿಯ ಮೇಲೆ ಸೀಮಿತ ಹಕ್ಕು ಬಂದಿತು (1937).

ಸತೀ ಪದ್ಧತಿಯನ್ನು ತೊಡೆದು ಹಾಕಿದ್ದರಿಂದ ಮಹಿಳೆಯರಿಗೆ ಆಗುತ್ತಿದ್ದ

ಹಿಂಸೆಯನ್ನು ತಕ್ಕಮಟ್ಟಿಗೆ ನಿವಾರಿಸಲಾಯಿತು. ಆದರೆ ಸ್ತ್ರೀಯು ತನ್ನ ಪತಿಯ ಚಿತೆಯ ಮೇಲೆ ಆತ್ಮಾರ್ಪಣೆ ಮಾಡಿಕೊಳ್ಳುವುದನ್ನು ಹಾಡಿ ಹೊಗಳುವ ಪದ್ಧತಿ ಇನ್ನೂ ಅಪರೂಪಕ್ಕಾದರೂ ಮುಂದುವರಿದಿದೆ. ರಾಜಾಸ್ಥಾನದಲ್ಲಿ ನಡೆದ ರೂಪ್‌ಕನ್ವರಳ ಘಟನೆ (1988) ಸತಿಯ ಬೆಂಬಲಿಗರಲ್ಲೂ ವಿರೋಧಿಗಳಲ್ಲೂ ಭಾವೋದ್ವೇಗದ ಅಲೆಗಳನ್ನು ದೇಶಾದ್ಯಂತ ಕೆರಳಿಸಿತು. ದ್ವಿಜ–ಜಾತಿಗಳಲ್ಲಿ ವಿಧವೆಯರನ್ನು ಇಂದಿಗೂ ತುಚ್ಛವಾಗಿ ಕಾಣಲಾಗುತ್ತದೆ. ಎಲ್ಲೋ ಅಪರೂಪಕ್ಕೊಮ್ಮೆ ಕೆಲವರು ಸಾಂಪ್ರದಾಯಿಕತೆಯ ಸಂಕೋಲೆಯನ್ನು ಕಡಿದು ಹೊರಬಂದು ಮರು–ವಿವಾಹವಾಗುತ್ತಾರೆ. ಸ್ತ್ರೀಶಿಶುಹತ್ಯೆ ಇನ್ನೂ ಮುಂದುವರಿದಿದೆ. ಪ್ರತಿವರ್ಷವೂ ಗಂಡುಮಕ್ಕಳಿಗಿಂತ ಹೆಚ್ಚಾಗಿ 3,00,000 ಹೆಣ್ಣುಮಕ್ಕಳು ಶೈಶವದಲ್ಲಿ ಸಾಯುತ್ತಾರೆ. ಇವುಗಳಲ್ಲಿ ಹಲವು ಸಾವುಗಳಿಗೆ ಉದ್ದೇಶಪೂರ್ವಕ ಅಲಕ್ಷ್ಯ ಕಾರಣ. ಏಕೆಂದರೆ ಹೆಣ್ಣುಮಕ್ಕಳು "ಒಂದು ಹೊರೆ" ಎಂಬಂತೆ ಪರಿಗಣಿಸಲಾಗುತ್ತದೆ. ವೈದ್ಯಕೀಯ ತಂತ್ರಜ್ಞಾನದಲ್ಲಿ ಅತ್ಯಾಧುನಿಕ ಪ್ರಗತಿಯಿಂದಾಗಿ ಅಮ್ನಿಯೋಸೆಂಟಿಸಿಸ್ ಮೂಲಕ ಹುಟ್ಟುವ ಮೊದಲೇ ಗರ್ಭದಲ್ಲಿರುವ ಶಿಶು ಹೆಣ್ಣೋ, ಗಂಡೋ ಎಂದು ತಿಳಿದುಕೊಳ್ಳಲು ಸಾಧ್ಯವಿದೆ. ಇದರಿಂದಾಗಿ ಸ್ತ್ರೀಭ್ರೂಣಹತ್ಯೆಯ ಪ್ರಮಾಣ ಏರಿದೆ. ಪತ್ರಿಕಾ ವರದಿಗಳ ಪ್ರಕಾರ, ಮುಂಬಯಿ ನಗರವೊಂದರಲ್ಲೇ ಒಂದು ವರ್ಷದಲ್ಲಿ (1984) ಸುಮಾರು 40,000 ಸ್ತ್ರೀಭ್ರೂಣಹತ್ಯಾ ಪ್ರಕರಣಗಳು ಸಂಭವಿಸಿದುವು. ಈ ಸೌಲಭ್ಯ ಈಗ ಎಲ್ಲ ನಗರಗಳಲ್ಲೂ ಅನೇಕ ಪಟ್ಟಣಗಳಲ್ಲೂ ಲಭ್ಯವಿದೆ. ಅಂತರಜಾತೀಯ ವಿವಾಹಗಳ ಶೇಕಡಾವಾರು ಹೆಚ್ಚುತ್ತಿದೆ. ಆದರೆ ನಿಷೇಧಿಸಿರುವ ಶಾಸನವಿದ್ದರೂ ಕೆಲವು ಕಡೆ ಬಾಲ್ಯವಿವಾಹಗಳು ನಡೆಯುತ್ತಲೇ ಇವೆ. ಮೂಲ ಶಾಸನದಲ್ಲಿ ವಿವಾಹದ ಕನಿಷ್ಠ ವಯಸ್ಸು ಹೆಣ್ಣಿಗೆ ಹದಿನೈದು, ಗಂಡಿಗೆ ಹದಿನೆಂಟು ಎಂದಿತ್ತು. ಆಮೇಲೆ ಅದನ್ನು ಹದಿನಾರು, ಇಪ್ಪತ್ತೊಂದು ಎಂದು ಪರಿಷ್ಕರಿಸಲಾಯಿತು. ಆದರೆ ಭಾರತದ ಕೆಲವು ಭಾಗಗಳಲ್ಲಿ ಸಾಮೂಹಿಕ ವಿವಾಹಗಳು ನಡೆಯುತ್ತವೆ. ಅವುಗಳ ನಡುನಡುವೆ ಮಕ್ಕಳ (ಕೇವಲ ಶಿಶುಗಳ) ವಿವಾಹ ಕೂಡ ನಡೆದುಹೋಗುತ್ತದೆ. ಸ್ವಾತಂತ್ರ್ಯ ಬಂದ ನಂತರ ಮಹಿಳೆಯರಿಗೆ ಮತದಾನ ಮಾಡುವ ಹಕ್ಕು ಬಂದಿತು. ಆಸ್ತಿ ಹಕ್ಕಿನ ವಿಷಯದಲ್ಲೂ ಹೆಚ್ಚಿನ ಸುಧಾರಣೆಯಾಯಿತು. ಆದರೆ ಇನ್ನೂ ಹಲವಾರು ಸಮಸ್ಯೆಗಳು ಹಾಗೇ ಉಳಿದಿವೆ. ಹೆಣ್ಣು ಮಗುವಿನಿಂದ ದುಡಿಸಿಕೊಂಡು ಶೋಷಿಸುವುದು, ದೇವಾಲಯಗಳಿಗೆ ಅವರನ್ನು ಜೋಗತಿಯರಾಗಿ ಅಥವಾ ದೇವದಾಸಿಯರಾಗಿ ಬಿಟ್ಟುಬಿಡುವುದು, ಆ ಮೂಲಕ ಲೈಂಗಿಕವಾಗಿ ಶೋಷಿಸುವುದು, ಸೂಳೆಗಾರಿಕೆ, ಕುಟುಂಬದಲ್ಲಿ ಹೆಣ್ಣುಮಕ್ಕಳನ್ನು ಹೀನಾಯವಾಗಿ ನಡೆಸಿಕೊಳ್ಳುವುದು ಇತ್ಯಾದಿ. ಸಾಮಾಜಿಕ ಪ್ರಜ್ಞೆಯಿಲ್ಲದೆ, ಸಮಾಜ ಕಾರ್ಯದ ಉದ್ದೇಶವಿಲ್ಲದೆ ಕೇವಲ ಶಾಸನ ಮಾಡುವುದು ಕೇವಲ ಟೊಳ್ಳಾಗುತ್ತದೆ, ಈಡೇರದ ಭರವಸೆಯಾಗಿ ಉಳಿಯುತ್ತದೆ.

ಹಿಂದೂ ಕೆಳಜಾತಿಯ ಶ್ರೇಣಿಗಳಲ್ಲಿ ಹುಟ್ಟಿಕೊಂಡ ಕೆಲವು ಚಳವಳಿಗಳು

ಉದಾಹರಣೆಗೆ, ಜ್ಯೋತಿ ಬಾ ಫುಲೇ ಅವರ ಸತ್ಯಶೋಧಕ ಸಮಾಜದಂಥವು ಮಹಿಳೆಯರ ಸಮಸ್ಯೆಗಳನ್ನು ಕೈಗೆತ್ತಿಕೊಂಡುವು. ಗಾಂಧೀಜಿಯವರು ಅವರನ್ನು ಸ್ವಾತಂತ್ರ್ಯ ಆಂದೋಲನಕ್ಕೆ ಸೇರಿಸಿಕೊಂಡು ಅವರ ಅನೇಕ ಬಂಧನಗಳನ್ನು ಕಿತ್ತೆಸೆಯುವ ಹಾಗೆ ಮಾಡಿದರು; ಮಹಿಳೆಯರ ಸಮಸ್ಯೆಗಳನ್ನು ಪರಿಹರಿಸುವ ದಿಕ್ಕಿನಲ್ಲಿ ಬೇಕಾದಷ್ಟು ಕೆಲಸ ಮಾಡಿದರು. ಸ್ವಾತಂತ್ರ್ಯಾನಂತರ ಮಹಿಳೆಯರು ಅನೇಕ ಕ್ಷೇತ್ರಗಳಲ್ಲಿ ಮುಂದುವರಿದಿದ್ದಾರೆ. ಹಲವು ಮಹಿಳೇತರ ರಂಗಗಳಲ್ಲೂ ಇಂದು ಅವರು ಹೆಚ್ಚು ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದ್ದಾರೆ, ತಮ್ಮ ಸ್ಥಾನವನ್ನು ಸಮರ್ಥಿಸಿಕೊಳ್ಳುತ್ತಿದ್ದಾರೆ. ಆದರೂ ಲಿಂಗ ಸಂಬಂಧಗಳಲ್ಲಿ ಅಸಮಾನತೆ ಹಾಗೇ ಉಳಿದಿದೆ.

ನ್ಯಾಯಾಂಗ, ಶಿಕ್ಷಣ, ಈಗ ಆರ್ಥಿಕ ಮತ್ತು ರಾಜಕೀಯ ಅವಕಾಶಗಳು ಪರಿಸ್ಥಿತಿಯನ್ನು ವೇಗವಾಗಿ ಬದಲಾಯಿಸಬಹುದಾಗಿತ್ತು. ಆದರೆ ಸರಕಾರವು ಬಹು ಜಾಗರೂಕತೆಯಿಂದ ಹೆಜ್ಜೆಯಿಟ್ಟಿದೆ. ಸಾಂಪ್ರದಾಯಿಕತೆಯ ಕಟ್ಟಿಗೆ ಒಳಪಟ್ಟ ಸಮಾಜದಲ್ಲಿ ಸಾಂಸ್ಕೃತಿಕ ಸೂಕ್ಷ್ಮ ಸಂವೇದನೆಗಳನ್ನು ತುಳಿಯಲು ಅದು ಇಷ್ಟಪಟ್ಟಿಲ್ಲ. ಸತಿಪದ್ಧತಿಯು ನಿಷೇಧವಾದ ಮೇಲೆ ಸರಕಾರವು ಮಹಿಳೆಯರ ಸ್ಥಾನಮಾನಕ್ಕೆ ಸಂಬಂಧಿಸಿದ ಇನ್ನೂ ಹಲವಾರು ಕ್ಷೇತ್ರಗಳಲ್ಲಿ ಹಿಡಿತ ಬಿಗಿಪಡಿಸಿದೆ. ಬಹುಪತ್ನೀತ್ವವನ್ನು ದುರುಪಯೋಗಪಡಿಸಿಕೊಳ್ಳದ ಹಾಗೆ ಕ್ರಮ ಕೈಗೊಂಡಿದೆ. ವಿವಾಹದ ವಯಸ್ಸನ್ನು ಏರಿಸಿದೆ. ವರದಕ್ಷಿಣೆಯ ವಿರುದ್ಧವಾಗಿ ಶಾಸನ ಬಂದಿದೆ. ವಿಚ್ಛೇದನ ನಿಯಮಗಳನ್ನು ಸುಲಭಗೊಳಿಸಲಾಗಿದೆ. ಪಾಲಕ ನಿಯಮಗಳಲ್ಲಿ ಕೆಲವು ಬದಲಾವಣೆಗಳಾಗಿವೆ. ಜೀವನಾಂಶವನ್ನು ಕುರಿತು ಹೊಸ ಕಾನೂನುಗಳಾಗಿವೆ. ವಾರಸುದಾರಿಕೆ ಹಕ್ಕುಗಳ ಬಗ್ಗೆ ಮಹಿಳೆಯರ ಪರವಾಗಿ ಹೆಚ್ಚು ಉದಾರವಾದ ಶಾಸನಗಳಾಗಿವೆ. ಆದರೆ ಈ ಶಾಸನಗಳನ್ನು ಜಾರಿಗೆ ತರುವುದರಲ್ಲಿ ಕಷ್ಟಗಳಿವೆ. ಅವುಗಳಲ್ಲಿರುವ ಕೆಲವು ದೋಷಗಳು ಅವುಗಳ ಉದ್ದೇಶವನ್ನೇ ಭಗ್ನಗೊಳಿಸಿವೆ. ಹಿಂದೂ ಶಾಸನ ಸಂಹಿತೆಯು ಪರಂಪರಿಕ ಆಚರಣೆಗಳ ಬಗ್ಗೆ ಸ್ವಲ್ಪ ವಿನಾಯಿತಿ ತೋರಿಸಬೇಕಾಯಿತು. ಕುಟುಂಬದ ಆಸ್ತಿಯಲ್ಲಿ ತಮಗೆ ನ್ಯಾಯವಾಗಿ ಸಲ್ಲಬೇಕಾದ ಪಾಲು ಪಡೆಯುವುದರಲ್ಲಿ ಮಹಿಳೆಯರಿಗೆ ಕಷ್ಟವಾಗುತ್ತಿದೆ. ಸ್ತ್ರೀಧನದ ಮೇಲೂ ಅವಳಿಗೆ ಪೂರ್ತಿ ಹಕ್ಕು ಇಲ್ಲದ ಹಾಗಾಗಿದೆ.

ಮಹಿಳೆಯರಿಗೆ ಶಿಕ್ಷಣಾವಕಾಶ ಹೆಚ್ಚಿದೆ. ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಅವರು ವಿದ್ಯಾ ಸಂಸ್ಥೆಗಳ ಮೆಟ್ಟಲು ಹತ್ತುತ್ತಿದ್ದಾರೆ. ಆದರೆ ಶಾಲಾ ಕಾಲೇಜುಗಳಿಗೆ ಸೇರಿಕೊಳ್ಳುವ ಸಂಖ್ಯೆ ಗಂಡುಮಕ್ಕಳಿಗಿಂತ ತುಂಬಾ ಕಡಿಮೆ. ಹಾಗೂ ನಡುವೆ ವಿದ್ಯಾಭ್ಯಾಸ ಬಿಟ್ಟುಬಿಡುವವರ ಸಂಖ್ಯೆ ಗಾಬರಿಗೊಳಿಸುವಷ್ಟು ಹೆಚ್ಚು. ಹೊಸ ಆರ್ಥಿಕ ಅವಕಾಶಗಳು ತೆರೆದುಕೊಂಡಿವೆ. ಮಹಿಳೆಯರು ಅವುಗಳ ಪ್ರಯೋಜನ ಪಡೆಯುತ್ತಿದ್ದಾರೆ. ಆದರೆ ಅವರ ವಿರುದ್ಧವಾಗಿ ಮುಸುಕಿನ ಪಕ್ಷಪಾತ ಮುಂದುವರಿದಿದೆ. ಜನಸಂಖ್ಯೆಯಲ್ಲಿ ಅವರ ಶೇಕಡಾವಾರು ಪರಿಮಾಣಕ್ಕೆ ತಕ್ಕಂತೆ ಉದ್ಯೋಗ ವಲಯಗಳಲ್ಲಿ ಅವರಿಗೆ ಅವಕಾಶ ದೊರಕುತ್ತಿಲ್ಲ. ಇದು

ರಾಜಕೀಯದಲ್ಲೂ ನಿಜ. 1989ರಲ್ಲಿ ಆಳುವ ಪಕ್ಷವು (ಕಾಂಗ್ರೆಸ್.ಐ) ಮತಸ್ಥಾನಗಳ ಶೇ. 30 ಮಹಿಳೆಯರಿಗೆ ಎಂದು ಭರವಸೆ ನೀಡಿತು. ಆದರೆ ಅದು ಈಡೇರಲಿಲ್ಲ. ವಿರೋಧಪಕ್ಷದ ದಾಖಲೆಯೂ ಇದಕ್ಕಿಂತ ಬೇರೆಯಲ್ಲ. 1989ರ ಸಂಸತ್ತಿನಲ್ಲಿದ್ದ ಮಹಿಳೆಯರ ಸಂಖ್ಯೆ ಹಿಂದಿನ ಸಂಸತ್ತುಗಳಿಗಿಂತ ಕಡಮೆ.

ಈ ಬಗೆಯ ಲಿಂಗ ಪಕ್ಷಪಾತದ ಹಲವು ರೂಪಗಳು ಹುಟ್ಟುವುದು ಭಾರತೀಯ ಸಂವಿಧಾನದಲ್ಲಿರುವ ಒಂದು ವೈರುಧ್ಯದಿಂದ. ಅದು ಶಾಸನದೆದುರಿಗೆ ಸರ್ವರಿಗೂ ಸಮಾನತೆಯ ಭರವಸೆ ಕೊಡುತ್ತದೆ. ಧರ್ಮ, ಜಾತಿ, ಜನಾಂಗ, ಲಿಂಗ, ಜನ್ಮಸ್ಥಳ ಇಂತಹ ಯಾವುದೇ ಆಧಾರದ ಮೇಲೆ ಪಕ್ಷಪಾತ ಮಾಡುವುದನ್ನು ನಿಷೇಧಿಸುತ್ತದೆ. ಅದೇ ಸಮಯದಲ್ಲೇ ಸಂವಿಧಾನವು ಪ್ರತಿಯೊಬ್ಬರಿಗೂ ಧಾರ್ಮಿಕ ಸ್ವಾತಂತ್ರ್ಯವನ್ನು ಭರವಸೆ ಕೊಡುತ್ತದೆ. ಧಾರ್ಮಿಕ ಸ್ವಾತಂತ್ರ್ಯದ ಈ ಅವಕಾಶವು ಮಹಿಳೆಯರಿಗೆ ಸಂವಿಧಾನವು ನೀಡಿರುವ ಸ್ವಾತಂತ್ರ್ಯ, ಸಮಾನತೆಗಳನ್ನು ಧರ್ಮದ ಹೆಸರಿನಲ್ಲಿ ಬಹುಮಟ್ಟಿಗೆ ಕಿತ್ತುಕೊಳ್ಳುತ್ತದೆ. ಕುಟುಂಬ ಮತ್ತು ವ್ಯಕ್ತಿ ನಿಯಮಗಳು ಧರ್ಮ ಸಂಹಿತೆಗಳಲ್ಲಿ ಬೇರು ಬಿಟ್ಟಿರುವುದರಿಂದ ಮಹಿಳೆಯರು ಕುಟುಂಬದೊಳಗಾಗಲಿ, ಆಸ್ತಿಪಾಸ್ತಿಗಾಗಲಿ ಸಮಾನ ಹಕ್ಕುಗಳನ್ನು ಹೊಂದಿಲ್ಲ. ಅವರಲ್ಲಿ ಅನೇಕರಿಗೆ ವಿವಾಹಾನಂತರ ತಾನು ಎಲ್ಲಿ ವಾಸ ಮಾಡುವೆನೆಂಬುದೇ ನಿರ್ಧಾರವಾಗಿರುವುದಿಲ್ಲ. ಹಾಗಾಗಿ ಕೆಲವರಿಗೆ ಜೀವನಾಂಶ ದೊರಕುವುದಿಲ್ಲ, ಮತ್ತೆ ಕೆಲವರಿಗೆ ವಿವಾಹ ವಿಚ್ಛೇದನ ಪಡೆಯುವುದರಲ್ಲಿ ತುಂಬ ಕಷ್ಟವಾಗುತ್ತದೆ. ಕೆಲವರು ಶಾಸನಬದ್ಧ ರೀತಿಯಲ್ಲಿ ತಮಗಿಷ್ಟ ಬಂದ ಒಂದು ಮಗುವನ್ನು ದತ್ತಕ ತೆಗೆದುಕೊಳ್ಳುವುದೂ ಸಾಧ್ಯವಿರುವುದಿಲ್ಲ. ಎಲ್ಲರಿಗೂ ಸಮಾನವಾದ ಸಿವಿಲ್‌ಕೋಡ್ ಇರಬೇಕೆಂಬ ಕೂಗು ಈಗ ಗಟ್ಟಿಯಾಗಿ ಕೇಳಿಬರುತ್ತಿದೆ. ಆದರೆ ಸಾಂಪ್ರದಾಯಿಕ ವಲಯದಿಂದ ತೀವ್ರ ವಿರೋಧ, ಪಟ್ಟಭದ್ರ ಹಿತಾಸಕ್ತಿಗಳ ಪ್ರಭಾವ ಇವು ದೇಶದ ರಾಜಕೀಯ ನಾಯಕತ್ವವನ್ನು ದಿಕ್ಕುಗೆಡಿಸುತ್ತಿವೆ. ಮುಂದೆ ಎಂದಾದರೂ ಇದಕ್ಕಿಂತ ಅನುಕೂಲಕರವಾದ ಸಮಯದಲ್ಲಿ ಮಾಡೋಣವೆಂದು ಮುಂದೂಡುತ್ತಿದ್ದಾರೆ. ರಾಜಕೀಯವಾಗಿ ಸ್ಥಾನ ಕಳೆದುಕೊಂಡು ಬಿಡಬಹುದೆಂಬ ಭೀತಿ, ಧಾರ್ಮಿಕ ವಲಯಗಳ ವಿರೋಧ ಕಟ್ಟಿಕೊಳ್ಳುವ ಶಂಕೆ, ಆದರ ಪರಿಣಾಮವಾಗಿ ವೋಟು ಬ್ಯಾಂಕ್‌ಗಳ ನಷ್ಟ, ಈ ಅಂಶಗಳು ಸರಕಾರದ ಪ್ರಗತಿಪರ ಶಾಸನಕ್ಕೆ ತಡೆಯೊಡ್ಡುತ್ತವೆ. ಈ ಪ್ರಕ್ರಿಯೆಯಲ್ಲಿ ಮಹಿಳೆಯರಿಗೆ ಸಮಾನತೆ ಎನ್ನುವುದು ಮರೀಚಿಕೆಯಾಗಿದೆ.

ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆ ಲಿಂಗ ಅಸಮಾನತೆಯನ್ನು ಮುಂದುವರಿಸುವಂತೆ ತೋರುತ್ತದೆ. ಸಮಾನತೆಯ ಸಾಧನೆಯ ಯಾತ್ರೆ ಅತಿ ದೀರ್ಘವೂ ಕಷ್ಟಕರವೂ ಆಗಿದೆ.

# ಪರಿವರ್ತನೆಯ ಒಲವುಗಳು

ಇಂದಿನ ಭಾರತೀಯ ಸಮಾಜ ವೈರುಧ್ಯಗಳ ಕಂತೆಯಾಗಿದೆ. ಕೆಲವು ಆಶ್ಚರ್ಯಕರವಾದ ಒಗಟಿನಂತಹ ಅಂಶಗಳೂ ಅದರಲ್ಲಿವೆ. ಕಡುಬಡತನದ ಮಹಾಸಾಗರದ ನಡುವೆ ಅಲ್ಲಲ್ಲೇ ಕಣ್ಣುಕುಕ್ಕುವಂತಹ ಐಶ್ವರ್ಯದ ದ್ವೀಪಗಳೂ ಇವೆ. ಆಧ್ಯಾತ್ಮಿಕತೆಯ ವಿಷಯವಾಗಿ ಹೆಮ್ಮೆಯಿಂದ ಹೇಳಿಕೊಳ್ಳುತ್ತದೆ. ಆದರೆ ಇಲ್ಲಿಯ ಗಣ್ಯವರ್ಗ – ಶ್ರೀಮಂತರು ಮತ್ತು ಬಲಶಾಲಿಗಳು – ಗರ್ವದಿಂದ ನಾಸ್ತಿಕರಂತೆ ನಡೆದುಕೊಳ್ಳುತ್ತಾರೆ. ನೂತನ ಆಧ್ಯಾತ್ಮ ಜಗತ್ತಿನ ಸಂತರು ಬಾಲಯೋಗೀಶ್ವರ, ಮಹೇಶಯೋಗಿ, ರಜನೀಶ್ ಮೊದಲಾದವರು ಪಶ್ಚಿಮದಿಂದ ಮತ್ತೆ ಆಮದಾದವರು. ವಿದೇಶಗಳಲ್ಲಿ ಪ್ರಭಾವ ಗಳಿಸಿ ಸ್ವದೇಶದಲ್ಲಿ ನೂತನ ಗೌರವ, ಮರ್ಯಾದೆ ಗಳಿಸಿಕೊಂಡವರು. ಆಪ್ತ ಸಂಭಾಷಣೆಗಳಲ್ಲಿ ಹರೇಕೃಷ್ಣ ಪಂಥವು (ISKCON) ಪಶ್ಚಿಮ ದೇಶಗಳ ಮೇಲೆ ಭಾರತದ ವಿಜಯ ಎಂದು ಪರಿಗಣಿಸಲಾಗುತ್ತದೆ. ಶ್ರೀ ಸತ್ಯ ಸಾಯಿಬಾಬಾ ಅವರ ಪವಾಡಗಳನ್ನು ಪೂರ್ಣ ನಂಬಿಕೆಯಿಂದ ಶ್ರದ್ಧೆಯಿಂದ ಬಣ್ಣಿಸಲಾಗುತ್ತದೆ. ಇದೆಲ್ಲ ನಡೆಯುವುದು ವೈಜ್ಞಾನಿಕ ಮನೋಧರ್ಮವನ್ನು ಜನತೆಯಲ್ಲಿ ಬೆಳೆಸುವುದಕ್ಕಾಗಿಯೇ ಪಣ ತೊಟ್ಟಿರುವುದಾಗಿ ಹೇಳಿಕೊಳ್ಳುವ ಒಂದು ಸಮಾಜದಲ್ಲಿ. ಸಂವಿಧಾನವೇನೋ ಅಸ್ಪೃಶ್ಯತೆಯನ್ನು ಪೂರ್ಣ ನಿಷೇಧಿಸಿದೆ. ಆದರೆ ದೇಶದ ಹಲವೆಡೆ ಗ್ರಾಮೀಣ ಪ್ರಭಾವಶಾಲಿಗಳು "ಅವರನ್ನು ತಕ್ಕ ಸ್ಥಾನದಲ್ಲಿ ಇರಿಸಲು" ಅತ್ಯಂತ ಕ್ರೂರವಾದ ಮಾರ್ಗಗಳನ್ನು ಅನುಸರಿಸಲು ಹಿಂದುಮುಂದು ನೋಡುವುದಿಲ್ಲ. ಅನೇಕ ವೇಳೆ ವರ್ಣಿಸಿರುವಂತೆ ಜಗತ್ತಿನ ಅತಿದೊಡ್ಡ ಪ್ರಜಾಪ್ರಭುತ್ವ ದೇಶ ಭಾರತದಲ್ಲಿ ಅಪರಾಧಕ್ಕೂ ರಾಜಕೀಯಕ್ಕೂ ಇರುವ ನಂಟು ಕಾರಣವಾಗಿ ಅನೇಕ ವಕ್ರತೆಗಳು ಕಂಡುಬರುತ್ತವೆ. ಪ್ರಮಾಣದ ದೃಷ್ಟಿಯಿಂದ ಹೇಳುವುದಾದರೆ ಮಾನವಶಕ್ತಿಯ ಅತಿದೊಡ್ಡ ವೈಜ್ಞಾನಿಕ ಹಾಗೂ ತಂತ್ರಜ್ಞಾನ ರಾಶಿ ಇಲ್ಲಿದೆ; ಆದರೆ ಅದರ ಕೆಲಭಾಗ ಪ್ರತಿಭಾ ಪಲಾಯನದ ಮೂಲಕ ಅಭಿವೃದ್ಧಿ ದೇಶಗಳಿಗೆ ಹರಿದುಹೋಗಿ ಬಿಡುತ್ತದೆ. ಅಲ್ಲಿ ವೇತನವೂ, ವೃತ್ತಿ ಪರಿಸ್ಥಿತಿಯೂ ಉತ್ತಮವಾಗಿರುತ್ತವೆ. ಬಹುಭಾಗ ಇಲ್ಲೇ ಉಳಿದುಕೊಂಡರೂ ಹೊಂದಿಕೆಯಾಗದ ವೃತ್ತಿ ಪರಿಸರ, ರಚನಶೀಲತೆಗೆ, ಪ್ರತಿಭೆಗೆ ಪ್ರೋತ್ಸಾಹ ಇಲ್ಲದುದು ಈ ಕಾರಣಗಳಿಂದ ತಪ್ತರಾಗಿ ಕುಳಿತುಕೊಳ್ಳುತ್ತಾರೆ. ವಾತಾವರಣವನ್ನು

ಮಲಿನಗೊಳಿಸಿ ಪರಿಸರವನ್ನು ಕೆಳಗೆಳೆಯುವ ಶಕ್ತಿಗಳನ್ನು ದೇಶ ಇನ್ನೂ ಅಂಕೆಯಲ್ಲಿಡಬೇಕಾಗಿದೆ. ಒಂದು ಕಾಲದಲ್ಲಿ ಸಮಷ್ಟಿವಾದವು ಜನರನ್ನು ಉದ್ರೇಕಿಸುತ್ತಿತ್ತು. ಆದರೆ ಈಗ ಅವರು ತಣ್ಣಗೆ ಕುಳಿತುಕೊಳ್ಳುವಂತೆ ಮಾಡುತ್ತದೆ. ಮುರಿದ ಭರವಸೆಗಳ ತಳಹದಿಯ ಮೇಲೆಯೇ ನೂತನ ಭಾರತೀಯ ಸಮಾಜದ ಸೌಧವು ನಿರ್ಮಾಣವಾಗುತ್ತದೆ ಎಂದು ನಿರಾಶಾವಾದಿಗಳು ಹೇಳುತ್ತಾರೆ.

ಅನೇಕ ವೇಳೆ ಪರಿಸ್ಥಿತಿಯು ತುಂಬ ಕಳಕಳಕಾರಿಯಾಗಿ ಕಾಣಿಸುತ್ತದೆ. ಆದರೆ ಕೆಲವಾದರೂ ಇತ್ಯಾತ್ಮಕ ಅಂಶಗಳಿಲ್ಲದೆ ಇಲ್ಲ. ಆಹಾರದ ವಿಷಯದಲ್ಲಿ ಸಾಧನೆ ಗಣನೀಯವಾಗಿದೆ. ದೇಶ ಹೆಚ್ಚುವರಿ ಆಹಾರ ಹೊಂದಿದೆ. ಒಂದೇ ಒಂದು ಕಷ್ಟವೆಂದರೆ, ಬಡತನದ ರೇಖೆಗಿಂತ ಕೆಳಗಿರುವವರಿಗೆ ಸಾಕಾಗುವಷ್ಟು ಆಹಾರವನ್ನು ಕೊಳ್ಳುವ ಶಕ್ತಿಯಿಲ್ಲ. ಅವರ ತಲಾ ಉಪಭೋಗ ತುಂಬ ಕಡಮೆಯಿರುತ್ತದೆ. ಸಾಮಾನ್ಯ ಸಾಮಾಜಿಕ ಸೇವೆಗಳಾದ ಸಾರ್ವಜನಿಕ ಸಾರಿಗೆ, ವೈದ್ಯಕೀಯ ನೆರವು (ರೋಗ ನಿರೋಧಕ ಕೂಡಿ), ಶಿಕ್ಷಣ, ಗ್ರಾಹಕ ಹಿತರಕ್ಷಣೆ ಮೊದಲಾದುವನ್ನು ಗಣನೀಯವಾಗಿ ವಿಸ್ತರಿಸಲಾಗಿದೆ. ಆದರೆ ಅವುಗಳ ಗುಣಮಟ್ಟ ಇನ್ನೂ ಸುಧಾರಿಸಬೇಕಿದೆ. ವಿಜ್ಞಾನದಲ್ಲಿ, ವಿಶೇಷವಾಗಿ ಸಸ್ಯತಳಿ, ಪರಮಾಣು ಸಂಶೋಧನೆ, ಅಂತರಿಕ್ಷ ಸಂಶೋಧನೆ, ಮೊದಲಾದ ಕ್ಷೇತ್ರಗಳಲ್ಲಿ ಗಣನೀಯ ಪ್ರಗತಿ ದಾಖಲಾಗಿದೆ. ಸಶಸ್ತ್ರ ಶಕ್ತಿಯಲ್ಲಿ ಭಾರತವನ್ನು ಗಣನೀಯವಾದ ಪ್ರಾದೇಶಿಕ ಶಕ್ತಿ ಎಂದು ಪರಿಗಣಿಸುವಂತಾಗಿದೆ. ತನಗೆ ತಾನೇ ಇದು ದೊಡ್ಡ ಸಾಧನೆ ಅಲ್ಲದಿರಬಹುದು. ಆದರೆ ಸುರುಳಿ ಸುತ್ತಿದ ಇಂದಿನ ಜಗತ್ತಿನಲ್ಲಿ ಅದು ಮಹತ್ವದ್ದಾಗುತ್ತದೆ. ಬಹುಶಃ ಎಲ್ಲಕ್ಕಿಂತ ಹೆಚ್ಚುಮುಖ್ಯವಾದ ಪರಿವರ್ತನೆಯೆಂದರೆ, ಜನರಲ್ಲಿ ತಮ್ಮ ಹಕ್ಕುಗಳ ಬಗೆಗೆ ಪ್ರಜ್ಞೆ ಬಂದಿರುವುದು. ಜನತೆ ಸುವ್ಯವಸ್ಥಿತವಾಗಿಲ್ಲದೆ ಹೋದರೂ, ಆಗಾಗ ಮುಖ್ಯ ವಿಷಯಗಳ ಮೇಲೆ ಒಂದುಗೂಡುತ್ತಾರೆ. ಅವರ ಸಾಂಘಿಕ ಕರೆಗೆ ಸರಕಾರವು ಪ್ರತಿಕ್ರಿಯೆ ತೋರಿಸಲೇಬೇಕಾಗುತ್ತದೆ. ಭಾರತೀಯ ಸಮಾಜದಲ್ಲಿ ಆಗುತ್ತಿರುವ ಪರಿವರ್ತನೆಯ ಒಲವುಗಳಿಗೆ ಇವೆಲ್ಲ ತಮ್ಮ ಕೊಡುಗೆ ನೀಡುತ್ತವೆ.

## ಭಿನ್ನಾಭಿಪ್ರಾಯ ಮತ್ತು ಸುಧಾರಣೆ

ಹಿಂದೂ ಧರ್ಮವನ್ನು ಅನೇಕ ವೇಳೆ ಸನಾತನ ಧರ್ಮ (ಗತಕಾಲದಿಂದ ಅವಿಚ್ಛಿನ್ನವಾಗಿ ಬಂದಿರುವ) ಎಂದು ಕರೆಯುತ್ತಾರೆ. ಹಿಂದೂ ದರ್ಶನವು ಶಾಶ್ವತ ಮೌಲ್ಯಗಳ ಅನ್ವೇಷಣೆಯಾಗಿದೆ ಎನ್ನುವ ಅರ್ಥದಲ್ಲಿ ಸನಾತನ ಧರ್ಮ ಎಂದು ಕರೆಯುವುದು ಸರಿ. ಆದರೆ ಹಿಂದೂಧರ್ಮ ಎಂದೂ ಪರಿವರ್ತನ ರಹಿತವಾಗಿರಲಿಲ್ಲ. ಹಿಂದೂಧರ್ಮದ ಕೊರತೆಗಳನ್ನು ಎತ್ತಿ ತೋರಿಸಿ ಹಲವು ಅಸಾಂಪ್ರದಾಯಿಕ ಪಂಥಗಳು ಹುಟ್ಟಿಕೊಂಡುವು. ಮೊದಮೊದಲು ಅವನ್ನು ಅಪಹಾಸ್ಯ ಮಾಡಿ ಬಹಿಷ್ಕರಿಸಲಾಯಿತು. ಆಮೇಲೆ ಅವಕ್ಕೂ ಮಾನ್ಯತೆ ನೀಡಿ ಸಾಮಾಜಿಕ ಗೌರವವನ್ನೂ ನೀಡಲಾಯಿತು. ಭಾರತೀಯ ಸಮಾಜದ ಮೇಲೆ ಅವುಗಳ ಒಟ್ಟು ಪ್ರಭಾವ ಎಷ್ಟು ಎಂಬುದನ್ನು ಅಂದಾಜು ಮಾಡುವುದು ಕಷ್ಟ,

ಅದು ಮಹತ್ವದ್ದಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

ದೇಶದ ಬೇರೆ ಬೇರೆ ಭಾಗಗಳಲ್ಲಿನ ಸಂತ ಕವಿಗಳು ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಿ ವ್ಯಾಪಕ ಸುಧಾರಣೆಗಳಿಗೆ ಪ್ರಯತ್ನ ಪ್ರಾರಂಭಿಸಿದರು. ಅವರಲ್ಲಿ ಅನೇಕರು ಸಮಾಜ ವ್ಯವಸ್ಥೆಯಲ್ಲಿ ಕಂಡು ಬಂದ ಅಸಮಾನತೆ ಮತ್ತು ಅನ್ಯಾಯಗಳನ್ನು ಅತ್ಯಂತ ಕಟುವಾಗಿ ತಿರಸ್ಕರಿಸಿದರು. ಅವರಲ್ಲಿ ಹಲವರು ಸಾಮಾನ್ಯವಾದ ಕುಟುಂಬಗಳಿಂದ ಬಂದವರು, ಜಾತಿ ಶ್ರೇಣಿಯಲ್ಲಿ ಕೆಳಹಂತಗಳಿಗೆ ಸೇರಿದವರು. ಉದಾಹರಣೆಗೆ, ಹಿಂದೀ ವಲಯದಲ್ಲಿ ಕಬೀರ ಒಬ್ಬ ನೇಕಾರ, ರೈದಾಸ ಚಮ್ಮಾರ. ಮಹಾರಾಷ್ಟ್ರದ ಸಂತರಲ್ಲಿ ಚೋಖಾ ಮೇಲಾ ಚಂಭಾರ (ಚಮ್ಮಾರ) ಕುಲಕ್ಕೆ ಸೇರಿದವನು; ಗೋರ ಒಬ್ಬ ಕುಂಬಾರ, ನರಹರಿ ಅಕ್ಕಸಾಲಿಗ; ನಾಮದೇವ ದರ್ಜಿ; ಸಾವಂತ ಒಬ್ಬ ಮಾಲಿ (ತೋಟಗಾರ). ಮಹಾರಾಷ್ಟ್ರದ ಸಂತ ಕವಿಗಳ ಪಟ್ಟಿಯಲ್ಲಿ ಮಹಿಳೆಯರೂ ಸೇರುತ್ತಾರೆ. ಅವರಲ್ಲಿ ಮುಖ್ಯರಾದವರು ಮುಕ್ತಾಬಾಯಿ, ಸಖುಬಾಯಿ, ಜನಾಬಾಯಿ ಮತ್ತು ಬಹಿನಾಬಾಯಿ. ಇದೇ ವಿನ್ಯಾಸವನ್ನೇ ಇತರ ರಾಜ್ಯಗಳಲ್ಲೂ ನೋಡಬಹುದು.

ಅವರ ಸಂದೇಶವು ಪ್ರಬಲವಾದ ಪರಿಣಾಮವನ್ನು ಹೊಂದಿತ್ತು. ಅದು ವ್ಯಾಪಕವಾಗಿ ಹರಡಿತು, ವಿಶೇಷವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ಬಡಜನತೆಯ ನಡುವೆ. ಈ ಸಂತರು ಬಳಸಿಕೊಂಡುದು ಜನಸಾಮಾನ್ಯರ ನುಡಿಗಟ್ಟುಗಳನ್ನು, ಅವರ ಭಾಷೆಯನ್ನು. ಅವರ ಹೃದಯಕ್ಕೆ ಹತ್ತಿರವಾದ ಸಮಸ್ಯೆಗಳನ್ನು ಅವರು ಕೈಗೆತ್ತಿಕೊಂಡಿದ್ದರು. ಹಾಗಾಗಿ ಅವರ ಸಂದೇಶ ವ್ಯಾಪಕವಾಗಿ ಮೆಚ್ಚುಗೆ ಗಳಿಸಿತು. ಭಕ್ತನಿಗೂ ಭಗವಂತನಿಗೂ ನಡುವೆ ಒಬ್ಬ ಮಧ್ಯಸ್ಥಗಾರ ಇರಬೇಕಾಗಿಲ್ಲ ಎಂದು ಅವರು ಸಾರಿದರು. ಆಚರಣೆಗಳನ್ನು ಸರಳಗೊಳಿಸಿದರು. ಬಡವರು ಮತ್ತು ದಲಿತರಲ್ಲಿ ಹೊಸ ಆಸೆಗಳನ್ನು ಮೂಡಿಸಿ ಸಮಾಜ ವ್ಯವಸ್ಥೆಯು ಅವರಿಗೆ ಏನನ್ನು ವಂಚಿಸಿತ್ತೋ ಆ ಗೌರವವನ್ನು ಒದಗಿಸಿದರು.

ಕಬೀರ (1398–1448) ಬರೆದ:

ನಾನು ಕಾಗದದ ಮೇಲೆ ಮಸಿ ಬಳಸುವುದಿಲ್ಲ  
ಈ ಕೈ ಎಂದೂ ಲೇಖನಿ ಹಿಡಿಯಲಿಲ್ಲ.  
ನಾಲ್ಕು ಯುಗಗಳ ಹಿರಿಮೆಯನಾದರೋ  
ಕಬೀರನು ಬಾಯಿಂದಲೇ ಉಸುರುವನೀಗ.

ಸಮಕಾಲೀನ ಸಮಾಜ ವ್ಯವಸ್ಥೆಯ ಅಲ್ಲೋಲಕಲ್ಲೋಲವನ್ನು ನೋಡಿ ಅವನು ದಿಗ್ಭ್ರಮೆಗೊಂಡನು.

ಸಂತರೆ, ಜಗತ್ತು ಹುಚ್ಚೆದ್ದಿದೆ.  
ಸತ್ಯವ ನಾ ನುಡಿದರೆ ಹೊಡೆಯ ಬರುವರು,  
ಸುಳ್ಳಾಡಿದರೆ ನಂಬುವರಲ್ಲ!

ಆದರೆ ಅವನು ತಾನು ಕಂಡ ಹಾಗೆ ಸತ್ಯವನ್ನೇ ಹೇಳಲು ಹೊರಟ; ಸಂದೇಹಿಸಲು, ಪ್ರಶ್ನಿಸಲು, ಉತ್ತರ ಹುಡುಕಲು ಮುಂದುವರಿಸಿದ. ಬ್ರಾಹ್ಮಣನಿಗೆ ಅವನೆಂದ

"ಪಂಡಿತ, ನೀನು ತಪ್ಪು ತಿಳಿದಿರುವೆ"; ಸನ್ಯಾಸಿಗೆ ಹೇಳಿದ "ನಿನ್ನ ಚಂಚಲ ಮನಸ್ಸನ್ನು ಸ್ಥಿರಗೊಳಿಸು"; ಮನೆಯಿಂದ ಮನೆಗೆ ತಲೆಗಳನ್ನು ಕತ್ತರಿಸುತ್ತಾ ಹೋಗುವುದನ್ನು ನೋಡಿ ಖಾಜಿಗೆ ಹೇಳಿದ: "ನಿನಗೆ ಕತ್ತಿಯನ್ನು ಹಿರಿ ಎಂದು ಯಾರು ಹೇಳಿದರು ?" ತನ್ನ ಒರಟು ಶೈಲಿಯಲ್ಲಿ ಕೇಳುತ್ತಾನವನು:

ಪಂಡಿತರೆ, ಹೇಳಿ
ಅಸ್ಪೃಶ್ಯತೆ ಎಲ್ಲಿಂದ ಬಂತು ?
ನೀವು ಅದನ್ನು ನಂಬುವಿರಾದ್ದರಿಂದ ಹೇಳಿ

ಅಥವಾ

ಖಾಜಿ, ಯಾವ ಪುಸ್ತಕವನ್ನು ಕುರಿತು ಉಪನ್ಯಾಸ ಮಾಡುವೆ ?....
ಸುನ್ನತಿಯಿರಬೇಕೆಂದೇ ಭಗವಂತನ ಇಚ್ಛೆಯಾಗಿದ್ದರೆ,
ಕತ್ತರಿಸಿದ ರೂಪದಲ್ಲೇ ನೀನು ಏಕೆ ಹುಟ್ಟಲಿಲ್ಲ ?

ಭಾರೀ ತೂಕದ ಗ್ರಂಥ ಸಂಪುಟಗಳನ್ನು ಓದುವುದರಿಂದ ವ್ಯಕ್ತಿಯು ಜ್ಞಾನ ಪಡೆಯಲು ಸಾಧ್ಯವೆ ಎಂದು ಕಬೀರನು ಸಂದೇಹಿಸುತ್ತಾನೆ. ಅವನಿಗೆ "ಪ್ರೇಮ ಎಂಬ ಎರಡಕ್ಷರವೇ ಸಮಸ್ತ ಜ್ಞಾನವನ್ನು ನೀಡಬಲ್ಲುದು."

ಅನೇಕ ಸಂತಕವಿಗಳು ಸಾಮಾನ್ಯ ಮಾನವನನ್ನು ಕೇಂದ್ರವಾಗಿ ಇಟ್ಟುಕೊಂಡು ಚಿಂತನೆ ಮಾಡಿದರು. ಚೋಖಾ ಮೇಲಾ ಹೇಳಿದ:

ಕಬ್ಬು ಡೊಂಕು, ಆದರೆ ಅದರ ರಸವಲ್ಲ,
ಹೊರ ರೂಪದಿಂದೇನು ?
ಬಿಲ್ಲು ಬಾಗಿಕೊಂಡಿದೆ
ಬಾಣವಲ್ಲ,
ಹೊರ ರೂಪದಿಂದೇನು ?
ನದಿಗೆ ತಿರುವುಗಳಿವೆ
ನೀರಿಗಲ್ಲ,
ಹೊರರೂಪದಿಂದೇನು ?
ಚೋಖಾ (ಮೇಲಾ) ಒರಟನಾಗಿರಬಹುದು
ಅವನ ಭಕ್ತಿ ಒರಟಲ್ಲ,
ಹೊರ ರೂಪವನ್ನೇಕೆ ಗಣಿಸುವಿರಿ ?

ಅಥವಾ ಬಸವನ ಮಾತನ್ನು ಆಲಿಸಿ:

ಬೇರು
ಮರದ ಮುಖ,
ಬುಡಕ್ಕೆ ನೀರೆರೆದರೆ,
ಮೇಲೆ ಹಸುರು ಚಿಗುರು,
ಜೀವಕೋಟಿ

ಭಗವಂತನ ಮುಖ
ಅವರಿಗೆ ಆಹಾರ ನೀಡು,
ದೇವರು ನಿನಗೆ ಬೇಕಾದ್ದು ಕೊಡುತ್ತಾನೆ,
ದೇವರೆಂದು ತಿಳಿದೂ
ಅವರನ್ನು ಮಾನವರಂತೆ
ಕಂಡರೆ ನೀನು
ನರಕಕ್ಕೆ ಹೋಗುವುದು ತಪ್ಪದು.

ಈ ಕೆಲವು ಸಂತಕವಿಗಳ ಸುತ್ತ ಪಂಥಗಳು ಮತಗಳು ಬೆಳೆದುಕೊಂಡುವು. ರೈದಾಸನು ಉತ್ತರ ಭಾರತದಲ್ಲಿ ಚಮಾರರ ಜೀವನ ವಿಧಾನ, ಆಲೋಚನಾ ವಿಧಾನಗಳ ಮೇಲೆ ಪ್ರಭಾವ ಬೀರಿದನು. ಕಬೀರ್ ಪಂಥ ಪಂಗಡವು ಕೆಲವು ಭಾಗಗಳಲ್ಲಿ ಇನ್ನೂ ಪ್ರಬಲವಾಗಿದೆ. ಬಸವ – ಗೌರವಪೂರ್ವಕವಾಗಿ ಬಸವಣ್ಣ ಅಥವಾ ಬಸವೇಶ್ವರ ಎಂದು ಕರೆಯುತ್ತಾರೆ – ವೀರಶೈವ ಮತದ ರೂವಾರಿ. ಅವನು ಭಾರತದ ಮಾರ್ಟಿನ್ ಲೂಥರ್ ಎಂದು ಕೆಲವರು ಬಣ್ಣಿಸಿದ್ದಾರೆ. ಇನ್ನು ಕೆಲವರು ಬುದ್ಧನು ಪೂರೈಸಲಾಗದೆ ಬಿಟ್ಟ ಕೆಲಸವನ್ನು ಕೈಗೆತ್ತಿಕೊಂಡು ಜಾತಿ ಭೇದವನ್ನು ತೊಡೆದುಹಾಕಿ, ಕ್ಷುಲ್ಲಕವಾದ ಆಚರಣೆಗಳ ಹುಳುಕನ್ನು ಬಯಲು ಮಾಡಿದ ಮಹಾಪುರುಷ ಎನ್ನುತ್ತಾರೆ. ಈ ಸಂತಕವಿಗಳು ತಮ್ಮ ಕಾರ್ಯವನ್ನು ಕೊನೆ ಮುಟ್ಟಿ ಸಾಧಿಸಲಿಲ್ಲ ನಿಜ, ಆದರೆ ಅನ್ಯಾಯ ತುಂಬಿದ ಸಮಾಜ ವ್ಯವಸ್ಥೆಗೆ ಭಾರೀ ಪೆಟ್ಟುಗಳನ್ನಂತೂ ಕೊಟ್ಟರು, ಆ ಅನ್ಯಾಯ ಅಸಮತೆಗಳಿಗೆ ತುತ್ತಾಗಿದ್ದವರಿಗೆ ಹೊಸ ಆಸೆ ನೀಡಿದರು.

ಕೆಲವು ಸಮಾಜ ಸುಧಾರಕರು ಮಾಡಿದ ಕೆಲಸವನ್ನು ಈ ಸಂದರ್ಭದಲ್ಲಿ ಗಮನಿಸಬೇಕು. ಈ ಮೊದಲೇ ಎರಡನೆಯ ಅಧ್ಯಾಯದಲ್ಲಿ ಅಸ್ಪಾಮೀ ಸಮಾಜದಲ್ಲಿ ಪರಿವರ್ತನೆಯುಂಟು ಮಾಡಲು ಶಂಕರದೇವನು ವಹಿಸಿದ ಪಾತ್ರವನ್ನು ಚರ್ಚಿಸಲಾಗಿದೆ. ಇಲ್ಲಿ ಇನ್ನು ಮೂವರು ಸುಧಾರಕರನ್ನು ಉಲ್ಲೇಖಿಸಬೇಕು. ಜ್ಯೋತಿ ಬಾ ಫುಲೇ (1827–1870), ನಾರಾಯಣ ಗುರು (1856–1926),ಮತ್ತು ದಯಾನಂದ ಸರಸ್ವತೀ (1824–1883).ಫುಲೇ ಮತ್ತು ಅವರ ಸತ್ಯಶೋಧಕ ಸಮಾಜದೊಡನೆ ಮಹಾರಾಷ್ಟ್ರದಲ್ಲಿ ಹೊಸ ಪರಿವರ್ತನೆಯ ಅಲೆಯನ್ನು ಸೃಷ್ಟಿಸಿದರು. ನ್ಯಾಯಪರತೆ ಮತ್ತು ಸಮಾನತೆಯ ತತ್ವಗಳನ್ನು ಆಧಾರವಾಗಿಟ್ಟುಕೊಂಡ ಮಾನವೀಯತೆಯನ್ನು ಅವರು ಪ್ರತಿನಿಧಿಸಿದರು. ಸಾಮಾಜಿಕವಾಗಿ ಸೌಲಭ್ಯ ವಂಚಿತರಾದವರಿಗೆ, ಮಹಿಳೆಯರನ್ನೂ ಕೂಡಿ, ಅವರು ವಿಶೇಷ ಗಮನ ಕೊಟ್ಟರು. ನಾರಾಯಣಗುರು ಕೇರಳ ಸಮಾಜದ ಮೇಲೆ ಬಹುದೊಡ್ಡ ಪ್ರಭಾವ ಬೀರಿದರು. ಅವರ ಸುಧಾರಣಾ ಚಳವಳಿಯ ಫಲಾನುಭವಿಗಳು ಮುಖ್ಯವಾಗಿ ಎಳವ ಸಮುದಾಯದ ಜನರು. "ಒಂದು ಜಾತಿ, ಒಂದು ಧರ್ಮ" ಎಂಬ ಸಿದ್ಧಾಂತವನ್ನವರು ಬೋಧಿಸಿದರು. ಮೂಢನಂಬಿಕೆಗಳನ್ನೂ ಪ್ರಾಣಿಬಲಿಯನ್ನೂ ಅತ್ಯಂತ ಉಗ್ರವಾಗಿ ಖಂಡಿಸಿದರು.

ಸತ್ಯ, ಶುಚಿ, ಧರ್ಮಪರತೆ, ಮತ್ತು ಏಕತೆಗಳಿಗೆ ಒತ್ತುಕೊಟ್ಟು ಅವರು ಉಪದೇಶ ಮಾಡಿದರು. ಅರ್ಥರಹಿತವೂ, ಹಾನಿಕಾರಕವೂ ಆದ ರೂಢಿಗಳನ್ನು ಕೈ ಬಿಡಬೇಕು ಎಂದು ಕರೆಯಿತ್ತರು. ಶಿಕ್ಷಣವನ್ನೂ ಕೈಗಾರಿಕೆಯನ್ನೂ ಪ್ರೋತ್ಸಾಹಿಸಿದ ಅವರು ತಮ್ಮ ಶಿಷ್ಯರಿಗೆ ಇತರ ಧರ್ಮಗಳನ್ನು ತೆಗಳಬಾರದೆಂದು ಬುದ್ಧಿವಾದ ಹೇಳಿದರು. ಅವರ ಉಪದೇಶಗಳು ಸಾರ್ವತ್ರಿಕವಾಗಿದ್ದುವು, ವ್ಯಾಪಕವಾಗಿ ಮನ್ನಣೆ ಗಳಿಸಿದುವು. ದಯಾನಂದರನ್ನು ಪುನರುಜ್ಜೀವಕರೆಂದು ಟೀಕಿಸಲಾಗಿದ್ದರೂ ಮಾನವೀಯತೆಯನ್ನು ಸಾಮಾಜಿಕ ಪುನರುತ್ಥಾನದ ಆಧಾರವಾಗಿ ಇಟ್ಟುಕೊಳ್ಳಲು ಅವರು ಬಯಸಿದರು. ಅಸ್ಪೃಶ್ಯತೆ ಹಾಗೂ ವಿಷಪೂರಿತ ಜಾತಿ ವ್ಯವಸ್ಥೆಗಳನ್ನು ಅವರು ಉಗ್ರವಾಗಿ ಖಂಡಿಸಿದರು. ಸಾಮಾಜಿಕವಾಗಿ ತುಳಿತಕ್ಕೆ ತುತ್ತಾದ ಮಹಿಳೆಯರ ವಿಮೋಚನೆಗಾಗಿ ಶ್ರಮಿಸಿದರು. ಅವರ ಜೀವನಚರಿತ್ರೆ ಬರೆದ ತಾರಾಚಂದ್ ಹೇಳಿದ್ದಾರೆ: "ಮಾನವನನ್ನು ಹೆಚ್ಚು ಸಂತುಷ್ಟನನ್ನಾಗಿ, ಉತ್ತಮನನ್ನಾಗಿ, ಉದಾತ್ತನನ್ನಾಗಿ ಮಾಡುವ ಒಂದು ಸಂದೇಶವನ್ನು ಅವರು ನೀಡಿದರು."

ಭಾರತದಲ್ಲಿ ಅನೇಕಾನೇಕ ಸಂತರು, ಸ್ವಾಮಿಗಳು, ಗುರುಗಳು ಆಗಿಹೋದರು. ಅವರಲ್ಲಿ ಕೆಲವರು ಧನದಾಸೆಯಿಂದ ಮತ್ತರಾದವರು. ವಿಷಯ ಸುಖಗಳನ್ನು ಅರಸಿದವರು. ಕೆಲವರು ಸಮಾಜಕ್ಕೆ ಯಾವ ಕೆಡುಕನ್ನೂ ಮಾಡದ ವಿಚಿತ್ರ ವ್ಯಕ್ತಿಗಳು. ಎಲ್ಲೋ ಕೆಲವರು ಮಾತ್ರ, ಶಂಕರದೇವ, ಜ್ಯೋತಿಬಾ ಫುಲೇ, ನಾರಾಯಣಗುರು, ದಯಾನಂದ ಇಂಥವರು ನಿಜವಾಗಿ ಸಮಾಜ ರಕ್ಷಕರಾದರು. ಅವರಿಲ್ಲದೆ ಹೋಗಿದ್ದರೆ ಹಿಂದೂ ಸಮಾಜವು ಚೂರು ಚೂರಾಗಿ ಬಿಡುತ್ತಿದ್ದಿತು. ಅತ್ಯಂತ ಅವಶ್ಯವಾಗಿದ್ದ ಸಾಮಾಜಿಕ ಪರಿವರ್ತನೆಯ ಪ್ರಧಾನ ಪ್ರವರ್ತಕರೂ ಅವರಾದುದು ವಿಶೇಷವೇ ಸರಿ.

ಮುಂದಿನ ಸಮಾಜ ಸುಧಾರಕರು, ಆಧುನಿಕ ಭಾರತೀಯ ಪುನರುಜ್ಜೀವನದಲ್ಲಿ ಪಾಲುಗೊಂಡವರು ಕೆಲವು ಮುಖ್ಯವಾದ ಧಾರ್ಮಿಕ ಸಿದ್ಧಾಂತಗಳನ್ನು ಕೈಗೆತ್ತಿಕೊಂಡರು. ಕೆಲವು ಸಾಮಾಜಿಕ ಅಂಶಗಳ ಕಡೆಗೂ ಅವರಿಗೆ ಕಳಕಳಿಯಿತ್ತು. ಶಿಶುವಿವಾಹ, ಹೆಂಗಸರನ್ನು ದೌರ್ಜನ್ಯದಿಂದ ನಡೆಸಿಕೊಳ್ಳುವುದು (ವಿಶೇಷವಾಗಿ ವಿಧವೆಯರನ್ನು), ಸತೀಪದ್ಧತಿ, ಅಸ್ಪೃಶ್ಯತೆಯ ಅಮಾನವೀಯ ಆಚರಣೆ ಇವು ಅವರಲ್ಲಿ ಕ್ರೋಧವನ್ನು ಉಕ್ಕಿಸಿದುವು. ಬ್ರಹ್ಮಸಮಾಜ, ಪ್ರಾರ್ಥನಾಸಮಾಜ, ಮತ್ತು ಆರ್ಯಸಮಾಜಗಳು ಈ ಕಳಕಳಿಯನ್ನು ಹಂಚಿಕೊಂಡುವು. ಆಚಾರವಂತರು ಅವುಗಳನ್ನು ಉಗ್ರವಾಗಿ ಪ್ರತಿಭಟಿಸಿದರು. ಬೌದ್ಧಿಕ ಸ್ತರದಲ್ಲಿ ಸುಧಾರಕರ ವಿಚಾರಗಳು ಜನತೆಗೆ ಒಪ್ಪಿಗೆಯಾದುವು. ಆದರೆ ಮೂಲತಃ ಬೇರಿನ ಹಂತದಲ್ಲಿ ಜನತೆಯ ಹಿಂದೂಧರ್ಮವು ಹಾವಿನ ಸುರುಳಿಯಂತಹ ಗೋಜಲಿನಿಂದ ಬಿಡುಗಡೆ ಪಡೆಯಲು ಶಕ್ತರಾಗಲಿಲ್ಲ.

ಇನ್ನೊಂದು ಒಲವು ಮುಖ್ಯವಾಗಿ ಊರ್ಧ್ವಚಲನೆಯನ್ನು ಕಂಡಿತು. ಧಾರ್ಮಿಕಾಚರಣೆ ಮತ್ತು ಸಾಮಾಜಿಕ ಅಂತಸ್ತುಗಳಲ್ಲಿ ಸಂಸ್ಕೃತೀಕರಣ ಎಂದು ಕರೆಯಲಾದ ಪರಿವರ್ತನೆಯನ್ನು ಕಂಡಿತು. 1920ರಿಂದ 1940ರ ನಡುವೆ ಹಲವು

ಜಾತಿಗಳ ಜನರು ಸಂಸ್ಕೃತ ಭಾಷೆಯಲ್ಲಿ ಪರಿಣತಿ ಗಳಿಸುವುದಕ್ಕೂ ಯಜ್ಞೋಪವೀತ ಧಾರಣೆಯ ಹಕ್ಕನ್ನು ಪಡೆಯುವುದಕ್ಕೂ ಪ್ರಯತ್ನಿಸಿದರು. ಈ ಉದ್ದೇಶವನ್ನು ಸಾಧಿಸಲು ಅವರು ದೇವಭಾಷೆಯಲ್ಲಿ ಪರಿಣಿತರಾಗಿದ್ದ ಸಾಧುಗಳ ಬೆಂಬಲವನ್ನು ಕೋರಿದರು. ಪ್ರತಿಫಲವಾಗಿ ಹಣವನ್ನು ಪಡೆದು ಈ ತಜ್ಞರು ಗುಂಪು ಗುಂಪುಗಳನ್ನೇ ಪುರಾಣಕಾಲದ ಯಾವನೋ ಋಷಿಯ ಪೀಳಿಗೆಯವರೆಂದು ಘೋಷಿಸಿದರು. ಧಾರ್ಮಿಕಾಚರಣೆಯ ಹಂತದಲ್ಲಿ ತೀರಾ ಕೆಳಗಿನವರಾಗಿರದವರಿಗೆ ಯಜ್ಞೋಪವೀತ ಧಾರಣೆಯ ಹಕ್ಕನ್ನೂ ನೀಡಿದರು. ಈ ಪ್ರಕ್ರಿಯೆಯು ಈಗ ಮಂದವಾಗಿದೆ. ಎಲ್ಲೋ ಒಮ್ಮೊಮ್ಮೆ ಇಡೀ ಜಾತಿಯನ್ನು ಮೇಲುವರ್ಗಕ್ಕೇರಿಸಿದ ಘಟನೆಗಳನ್ನು ಕೇಳುತ್ತೇವೆ ಅಥವಾ ಓದುತ್ತೇವೆ. ಇಂತಹ ಪ್ರಯತ್ನಗಳು ನಿಜವಾಗಿಯೂ ಯಾವುದೇ ಜಾತಿಯ ಧಾರ್ಮಿಕ ಅಂತಸ್ತನ್ನು ಮೇಲಕ್ಕೇರಿಸಿದಂತಾಗಿದೆಯೇ ಎಂಬುದಕ್ಕೆ ಆಧಾರ ಸಿಕ್ಕುವುದಿಲ್ಲ. ಜಾತಿಗೆ ಹೊಸ ಹೆಸರು ಬಂದಿರುತ್ತದೆ. ಅಕ್ಕಸಾಲಿಗರಿಗೆ ವಿಶ್ವಕರ್ಮ ಎಂದು, ನಾಯಿಂದರಿಗೆ ಶ್ರೀವಾಸ ಎಂದು, ದರ್ಜಿಗಳಿಗೆ ನಾಮದೇವ ಎಂದು, ಕಸಗುಡಿಸುವವರಿಗೆ ವಾಲ್ಮೀಕಿ ಎಂದು ಹೊಸ ಹೆಸರುಗಳು ಬಂದಿವೆ. ಆದರೆ ಹೆಸರು ಹೊಸವಾದಷ್ಟರಿಂದ ಅವರ ಸಾಮಾಜಿಕ ಅಂತಸ್ತು ಬದಲಾಗುವುದಿಲ್ಲ. ಸಂಸ್ಕೃತೀಕರಿಸಿದ್ದರಿಂದ ಕೆಳಜಾತಿಗಳು ಮೇಲುಜಾತಿಗಳ ನಡವಳಿಕೆ, ಆಚಾರ, ವಿಚಾರಗಳನ್ನು ಪಾಲಿಸಬೇಕಾಯಿತು. ಸಾಂಸ್ಕೃತಿಕ ಮಾದರಿಯೆಂದರೆ ವಸ್ತುತಃ ಬ್ರಾಹ್ಮಣ ಮಾದರಿಯಾಗಿತ್ತು. ಬ್ರಾಹ್ಮಣರು ಮಿಕ್ಕ ಜಾತಿಗಳಿಗೆ ಉಲ್ಲೇಖಿಸಬೇಕಾದ ಮಾದರಿ ಜಾತಿ ಎಂದು ನಂಬಲಾಗಿತ್ತು. ಆದರೆ ಅದು ಯಾವಾಗಲೂ ಹಾಗಿರಲಿಲ್ಲ. ವಾಸ್ತವವಾಗಿ ಹಲವಾರು ಉಲ್ಲೇಖನೀಯ ಮಾದರಿಗಳಿದ್ದುವು. ಅವುಗಳಲ್ಲಿ ಹೆಚ್ಚಿನವುಗಳಿಂದ ಅಥವಾ ಅವೆಲ್ಲವುಗಳಿಂದ ತನಗೆ ಬೇಕಾದ ಅಂಶಗಳನ್ನು ಜಾತಿಯು ತೆಗೆದುಕೊಳ್ಳಬಹುದಾಗಿತ್ತು. ಕ್ಷತ್ರಿಯ, ರೆಡ್ಡಿ, ಮರಾಠಾ ಅಥವಾ ನಾಯರ್ ಮಾದರಿಯು ಬ್ರಾಹ್ಮಣ ಮಾದರಿಯಷ್ಟೇ ಗೌರವಾನ್ವಿತವೂ ಹೆಚ್ಚು ಕಾರ್ಯಸಾಧ್ಯವೂ ಆಗಿತ್ತು. ಅನುಕರಣೆಯಿಂದ ಹೇಳಿಕೊಳ್ಳುವಂತಹ ಬದಲಾವಣೆಯೇನೂ ಆಗುತ್ತಿರಲಿಲ್ಲ. ಒಂದು ಅತಿರೇಕದ ಸಂದರ್ಭ ಮಧ್ಯಪ್ರದೇಶದಲ್ಲಿನ ಚತ್ತೀಸಘರದ ಸತ್ನಾಮಿಗಳ ನಿದರ್ಶನ ತೆಗೆದುಕೊಳ್ಳೋಣ. ಅವರಲ್ಲಿ ಬಹುಪಾಲು ಜನರು ಚಮ್ಮಾರ ಜಾತಿಯಿಂದ ಬಂದವರು. ಗುರು ಘಾಸೀದಾಸನ ಪ್ರಭಾವಕ್ಕೆ ಒಳಗಾಗಿ ಅವರು "ಪರಿಶುದ್ಧ" ಜೀವನ ವಿಧಾನವನ್ನು ಅಳವಡಿಸಿಕೊಂಡರು. ಯಜ್ಞೋಪವೀತವನ್ನು ಧರಿಸಿದರು; ಮಾಂಸಾಹಾರವನ್ನು ನಿಲ್ಲಿಸಿಬಿಟ್ಟರು (ಕೊನೆಗೆ ಮಾಂಸದಂತೆ ಕಾಣುವ ಬದನೆ, ಕ್ಯಾರೆಟ್, ಟೊಮೆಟೊ, ಮೊದಲಾದುವನ್ನೂ ನಿಲ್ಲಿಸಿದರು); ಮದ್ಯಪಾನವನ್ನು ಕೈಬಿಟ್ಟರು. ಇಷ್ಟೆಲ್ಲ ಆದರೂ ಮೇಲುಜಾತಿಯ ಸ್ಥಾನಮಾನ ಅವರಿಗೆ ಲಭ್ಯವಾಗಲಿಲ್ಲ. ಅವರು ಅನುಸೂಚಿತ ಜಾತಿಯಾಗಿಯೇ ಉಳಿದಿದ್ದಾರೆ. ಅವರ ಜೀವನಕ್ರಮದಲ್ಲಿ ತುಸು ಬದಲಾವಣೆಯಾಗಿದೆ. ಕೆಲವು ಮೂಢಾಚಾರಗಳನ್ನು ಜನಸಾಮಾನ್ಯರು ಒಪ್ಪದ ಕೆಲವು ಆಚರಣೆಗಳನ್ನು ತೊರೆದಿದ್ದಾರೆ. ಈ ರೀತಿಯ ಅನೇಕ ಸಣ್ಣಪುಟ್ಟ ಸಮುದಾಯಗಳಿಗೆ ಸೀಮಿತಗೊಂಡ

ಆಂದೋಲನಗಳಾದುವು. ಇದರಿಂದ ಗಮನಾರ್ಹವಾದ ಸಾಮಾಜಿಕ ಪರಿವರ್ತನೆ ಆಗಿದೆ. ಈ ಚಳವಳಿಗಳು ಸ್ವಲ್ಪಮಟ್ಟಿಗೆ ಭಿನ್ನಮತ ಪ್ರದರ್ಶನ, ಸ್ವಲ್ಪಮಟ್ಟಿಗೆ ಪ್ರತಿಭಟನೆ, ಸ್ವಲ್ಪಮಟ್ಟಿಗೆ ಸುಧಾರಣೆ ಮೂರೂ ಆಗಿದ್ದುವು. ಅವುಗಳ ಒಟ್ಟು ಪರಿಣಾಮ ಇಷ್ಟೆಂದು ಅಂದಾಜು ಮಾಡುವುದು ಕಷ್ಟವಾದರೂ ಸಮಾಜ ವ್ಯವಸ್ಥೆಯು ಕೆಲವು ಬಿಗಿತಗಳನ್ನು ಸಡಿಲಗೊಳಿಸುವುದಕ್ಕೆ ಅವು ಕಾರಣವಾದುವು ಎಂದು ನಿಸ್ಸಂದೇಹವಾಗಿ ಹೇಳಬಹುದು. ಈ ಚಳವಳಿಗಳ ಮೂಲಕ ಸಮಾಜವು ತನ್ನ ಪರಿವರ್ತನೆಯ ಬಯಕೆಯನ್ನು ಅಭಿವ್ಯಕ್ತಿಸುತ್ತಿತ್ತು. ಕ್ರಿಶ್ಚಿಯನರು ಮತ್ತು ಮುಸ್ಲಿಮರಲ್ಲೂ ಇಂಥವೇ ಚಳವಳಿಗಳಾದುವು.

## ಅರ್ಥವ್ಯವಸ್ಥೆ

ಸ್ವಾತಂತ್ರ್ಯ ಬರುವವರೆಗೂ ಭಾರತದಲ್ಲಿ ಕೃಷಿ ಮತ್ತು ಗುಡಿಕೈಗಾರಿಕೆಗಳ ವಲಯ ಬಹು ದೊಡ್ಡದಾಗಿತ್ತು, ಪರಂಪರೆಯಿಂದ ಬೆಳೆದುಬಂದಿತ್ತು. ಆಧುನಿಕ ಕೈಗಾರಿಕಾ ವಲಯ ಆಗಿನ್ನೂ ಚಿಕ್ಕದಾಗಿತ್ತು, ಅಷ್ಟು ಮಹತ್ವದ್ದೂ ಆಗಿರಲಿಲ್ಲ. ದೇಶದ ಕೃಷಿ ವಲಯಗಳನ್ನು ಅಲ್ಲಿಯ ಮುಖ್ಯ ಬೆಳೆಯಿಂದ ಗುರುತಿಸಲಾಗುತ್ತಿತ್ತು. ಬಹುತೇಕ ಪ್ರದೇಶಗಳಲ್ಲಿ ವರ್ಷಕ್ಕೆ ಒಂದೇ ಬೆಳೆ ಬೆಳೆಯುತ್ತಿತ್ತು, ಎರಡು ಬೆಳೆ ತೆಗೆಯುವ ಪ್ರದೇಶಗಳು ಬಹಳ ವಿರಳ. ಕೆಲವರು ಕೃಷಿಕ ಮಾಲೀಕರಿದ್ದರು. ಅನೇಕ ಜನ ಗುತ್ತಿಗೆ ಹಿಡಿದ ಕೃಷಿಕರು. ಇನ್ನೂ ಹೆಚ್ಚು ಜನ ಕೃಷಿ ಕಾರ್ಮಿಕರು ಅಥವಾ ಕೂಲಿಕಾರರು. ಈ ಕೊನೆಯ ವರ್ಗ ಒಂದು ರೀತಿ ಒಡೆಯನ ಕೈಕೆಳಗಿನ ಊಳಿಗವಾಗಿದ್ದರು. ಅವರ ಮೇಲೆ ಎರಡು ಅಥವಾ ಮೂರು ಮಟ್ಟದ ಶ್ರೀಮಂತವರ್ಗವಿತ್ತು, ಗುತ್ತಿಗೆದಾರರು ಇದಕ್ಕಿಂತ ಸ್ವಲ್ಪ ಉತ್ತಮ ಸ್ಥಿತಿಯಲ್ಲಿದ್ದರು. ಆದರೆ ಅವರಿಗೂ ತಮ್ಮ ಹಕ್ಕುಗಳನ್ನು ಕಳೆದುಕೊಂಡುಬಿಡುವ ನಿರಂತರ ಭೀತಿ. ಈ ಎರಡೂ ವರ್ಗದವರು ಗ್ರಾಮದ ಜಮೀನುದಾರರಿಗೆ ಅಥವಾ ಸ್ಥಳೀಯ ಭೂಮಾಲೀಕರಿಗೆ ಬೇಕಾದಷ್ಟು ಬಿಟ್ಟಿ ಚಾಕರಿ ಮಾಡಬೇಕಾಗಿತ್ತು, ಆಯ್ದು ಕೆಲವರು ನಾಮಕಾವಸ್ಥೆಯ ಹಣಕ್ಕೆ ಗ್ರಾಮದ ಮತ್ತು ಸರಕಾರದ ಕೆಲಸಗಳನ್ನು ಮಾಡಬೇಕಾಗಿತ್ತು, ಗ್ರಾಮದ ಜಮೀನ್ದಾರರು ಕ್ರೌರ್ಯಕ್ಕೆ, ದೌರ್ಜನ್ಯಕ್ಕೆ, ಅವಮಾನವೀಯತೆಗೆ ಹೆಸರಾಗಿದ್ದರು. ಸರಕಾರೀ ಅಧಿಕಾರಿಗಳ ಜೊತೆ ಸಂಬಂಧವಿರಿಸಿಕೊಂಡಿದ್ದುದರಿಂದ ಎಂಥದೇ ಭಯಂಕರ ದೌರ್ಜನ್ಯದ ಕೆಲಸ ಮಾಡಿಯೂ ಅವರು ತಪ್ಪಿಸಿಕೊಳ್ಳುತ್ತಿದ್ದರು. ಹಳ್ಳಿಯ ಅರ್ಥವ್ಯವಸ್ಥೆ ಮೊದಲೇ ಹೇಳಿದಂತೆ ಭಾಗಶಃ "ಜಾಜಮಾನಿ" ವ್ಯವಸ್ಥೆಯ ಮೇಲೆ ನಡೆಯುತ್ತಿತ್ತು. 1947 ಆಗಸ್ಟ್ 15ರ ನಂತರ ರಾಷ್ಟ್ರೀಯ ಕಾರ್ಯಸೂಚಿಯಲ್ಲಿ ಭೂಸುಧಾರಣೆಗೆ ಆದ್ಯ ಗಮನ ನೀಡಲಾಯಿತು. ಜಮೀನುದಾರಿಕೆ ರದ್ದಾಯಿತು. ಹಿಡುವಳಿಯನ್ನು ಕುರಿತ ಸುಧಾರಣೆಗಳಿಂದಾಗಿ, ಗುತ್ತಿಗೆದಾರರೇ ಭೂಸ್ವಾಮಿ (ಮಾಲಿಕ)ಗಳಾದರು. ಭೂಹಿಡುವಳಿ ಶಾಸನಗಳೂ ಜಾರಿಗೆ ಬಂದುವು. ಆದರೆ ಈ ಶಾಸನಗಳಲ್ಲಿ ಬಗೆಬಗೆಯ ದೋಷಗಳಿದ್ದುವಾಗಿ ಪರಂಪರೆಯಿಂದ ಅಧಿಕಾರ ಹೊಂದಿದ್ದವರು ತಮ್ಮ ಪ್ರಭಾವ ಉಪಯೋಗಿಸಿ ಸುಧಾರಣೆಗಳನ್ನು ಬಹುಮಟ್ಟಿಗೆ ದುರ್ಬಲವಾಗುವಂತೆ

ಮಾಡಿದರು.

ಹಳ್ಳಿಯ ಗಣ್ಯರು ಸ್ಥಳೀಯ, ಪ್ರಾದೇಶಿಕ, ಕೊನೆಗೆ ರಾಷ್ಟ್ರೀಯ ರಾಜಕಾರಣದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾ ತಮ್ಮ ಶಕ್ತಿಯನ್ನು ಹೆಚ್ಚಿಸಿಕೊಂಡರು. ಭೂಮಿತಿ ಶಾಸನಗಳನ್ನು ಜಾರಿಗೆ ತಂದ ಮೇಲೆ ಕೂಡ ಭೂವರ್ಗಾವಣೆ ಪರಿಣಾಮಕಾರಿಯಾಗುವಷ್ಟು ಪ್ರಮಾಣದಲ್ಲಿ ನಡೆಯಲಿಲ್ಲ. ಭೂಮಿಯಿಲ್ಲದವರು, ಅಂಚಿನಲ್ಲಿದ್ದವರು ಯಾವುದೇ ಆಸೆಯನ್ನೂ ಕಾಣದಾದರು. ವಿನೋಬಾ ಭಾವೆಯವರು ಆದರ್ಶಯುತವಾದ, ಸದುದ್ದೇಶದ ಭೂದಾನ, ಗ್ರಾಮದಾನ ಪ್ರಯೋಗಗಳು ಕೇವಲ ಕನಸಾದುವು. ಭೂಹೀನರಿಗೆ ಜಮೀನು ದೊರಕಲಿಲ್ಲ, ದೊರಕಿದರೂ ಬೇಸಾಯ ಮಾಡಲು ಸಾಧ್ಯವಿಲ್ಲದ ಬಂಜರುಭೂಮಿ ದೊರಕಿತು. ಹಾಗಾಗಿ ಅವರು ಕೂಲಿಕಾರರ ಪಟ್ಟಿಗೆ ಸೇರಬೇಕಾಯಿತು. ಸ್ಥಳದಿಂದ ಸ್ಥಳಕ್ಕೆ ವಲಸೆ ಹೋಗುವ ಕೂಲಿಕಾರರಾಗಿ ಅನಿಶ್ಚಿತ, ಕಳವಳಕಾರಿ ಪರಿಸ್ಥಿತಿಯಲ್ಲಿ ಬದುಕು ಸಾಗಿಸಬೇಕಾಯಿತು. ರಾಷ್ಟ್ರೀಯ ಸೇವಾ ಯೋಜನೆ ಸಮುದಾಯ ಅಭಿವೃದ್ಧಿ ಯೋಜನೆ, ಮುಂದೆ 'ಹಸಿರು ಕ್ರಾಂತಿ'ಯನ್ನು ಗುರಿಯಾಗಿಟ್ಟುಕೊಂಡ ಸಮಗ್ರ ಯೋಜನೆ ಇವೆಲ್ಲ ವ್ಯಾಪಕವಾದ ಯೋಜನೆಗಳಾಗಿದ್ದು ಇವುಗಳ ಪ್ರಯೋಜನ ಶ್ರೀಮಂತರಿಗೆ ಹೆಚ್ಚಾಗಿ ಆಯಿತೇ ಹೊರತು ಬಡವರಿಗೆ ಆಗಲಿಲ್ಲ. ರಾಷ್ಟ್ರಮಟ್ಟದಲ್ಲಿ ಬಡವರ ಮೇಲೆ, ಅದರಲ್ಲೂ ದಲಿತವರ್ಗಗಳ ಮೇಲೆ ದೌರ್ಜನ್ಯ ಕಡಮೆಯಾಗಿರಬಹುದು; ಆದರೂ ದೇಶದ ಹಲವೆಡೆ ಅಂತಹ ಕರಾಳ ದೌರ್ಜನ್ಯಗಳು ಸಂಭವಿಸಿದ ಘಟನೆಗಳು ವರದಿಯಾಗುತ್ತಿವೆ. ಕೃಷಿವಲಯದಲ್ಲಿ ಮಾಲೀಕ–ಊಳಿಗ ಸಂಬಂಧಗಳು ಇನ್ನೂ ಮುಂದುವರಿದೇ ಇವೆ. ಶಕ್ತಿಯುತವಾದ ರೈತಚಳವಳಿಗಳಿಂದ, ಕೆಲವು ಸ್ವಯಂ ಸೇವಾ ಕಾರ್ಯ ತಂಡಗಳ ಪ್ರಯತ್ನಗಳಿಂದ ಏನಾದರೂ ಒಳ್ಳೆಯ ನಾಗಬಹುದೆಂದು ನಿರೀಕ್ಷಿಸಬಹುದಾಗಿದೆ.

ಕೃಷಿಗೆ ಹಳ್ಳಿಯ ಕುಶಲಕರ್ಮಿಗಳ ಮತ್ತು ಕಸುಬುದಾರರ ಬೆಂಬಲವಿತ್ತು. ಗೃಹ ಕೈಗಾರಿಕೆಗೆ ಅದಷ್ಟೇ ಗುರಿಯಾಗಿರಲಿಲ್ಲ. ಈ ವಲಯದ ಕೆಲವು ಉತ್ಪನ್ನಗಳಿಗೆ ಅವುಗಳ ಕಲಾವಂತಿಕೆಗಾಗಿ, ಸೂಕ್ಷ್ಮ ಕಲೆಗಾರಿಕೆಗಾಗಿ ಶ್ರೀಮಂತರಿಂದ, ನಗರವಾಸಿಗಳಿಂದ, ವಿದೇಶಗಳಿಂದ ಕೂಡ ಬೇಡಿಕೆಯಿರುತ್ತಿತ್ತು. ಆದರೆ ಬ್ರಿಟಿಷರ ಆಡಳಿತಾವಧಿಯಲ್ಲಿ ಅವು ಕುಸಿದುವು. ಅವುಗಳಲ್ಲಿ ಕೆಲವನ್ನು ಉದ್ದೇಶಪೂರ್ವಕವಾಗಿಯೇ ಹಾಳು ಮಾಡಲಾಯಿತೆಂದು ನಂಬಲು ಕಾರಣಗಳಿವೆ. ಪಾರಂಪರಿಕವಾದ ಭಾರತೀಯ ಹತ್ತಿಬಟ್ಟೆ ಇದಕ್ಕೆ ಒಂದು ನಿದರ್ಶನವಾಗಬಹುದು. ಔದ್ಯಮೀಕರಣವು ಹೆಚ್ಚುಹೆಚ್ಚಾಗಿ ಬೆಳೆದು ಅವುಗಳ ಪುನರುಜ್ಜೀವನ ಸಾಧ್ಯವಿಲ್ಲದಂತಾಗಿದೆ. ಸರಕಾರೀ ವ್ಯವಸ್ಥೆಯ ಪ್ರೋತ್ಸಾಹದಿಂದಾಗಿ ಕುಶಲಕಲೆಗಳು ಮತ್ತು ಕೈಮಗ್ಗದ ಉದ್ಯಮ ಸ್ವಲ್ಪಮಟ್ಟಿಗೆ ಚೇತರಿಸಿಕೊಳ್ಳುತ್ತಿವೆ. ಗ್ರಾಮೋದ್ಯೋಗ ವಲಯದ ಕಲಾವಸ್ತುಗಳನ್ನು ಮನೆಯ ದಿವಾನಖಾನೆಗಳಲ್ಲಿ ಹಾಕಿ ಅಲಂಕರಿಸುವ ಗೀಳು ಹೆಚ್ಚುತ್ತಿದೆ. 1980ರ ದಶಕದಲ್ಲಿ ವಿದೇಶಗಳಲ್ಲಿ ನಡೆಸಿದ ಭಾರತ ಉತ್ಸವಗಳು ಭಾರತದ ಪಾರಂಪರಿಕ ಕಲಾವಸ್ತುಗಳಿಗೆ, ಕೈಕಸುಬು ಉತ್ಪನ್ನಗಳಿಗೆ

ತಾತ್ಕಾಲಿಕವಾಗಿಯಾದರೂ ಒಂದು ಅಂತರ-ರಾಷ್ಟ್ರೀಯ ಮಾರುಕಟ್ಟೆಯನ್ನು ಸೃಷ್ಟಿಸಿಕೊಟ್ಟಿವೆ. ಆದರೂ ಫ್ಯಾಷನ್ ಎನ್ನುವುದು ಬಹು ಚಂಚಲವಾದದ್ದು. ಈಗ ದೊರಕಿರುವ ಪ್ರೋತ್ಸಾಹ ಕೇವಲ ಅಲ್ಪಾವಧಿಯದಾಗಲೂಬಹುದು. ಬದಲಾಗದೆ ಉಳಿದಿರುವುದು ಏನೆಂದರೆ, ಕೃಷಿಗೂ ಸಾಂಪ್ರದಾಯಿಕ ಕಸಬುಗಳಿಗೂ ಇರುವ ನಂಟು. ಕೆಲವು ಕಲೆಗಳು ಅವುಗಳ ಗುಣಮಟ್ಟದಿಂದಾಗಿ ಉಳಿದುಕೊಳ್ಳುತ್ತವೆ. ಆದರೆ ಆ ಕಸಬುದಾರರಿಗೆ ಇಂದು ಜೀವನವೇ ದುರ್ಭರವಾಗಿದೆ. ಅಲ್ಲದೆ ಪ್ರವಾಸಿಗರು ವ್ಯಾಪಾರ ನಡೆಸುತ್ತಾ ತೋರಿಸುವ ಅಭಿರುಚಿ, ಬೇಡಿಕೆಗಳಿಂದಾಗಿ ಹೊಸಹೊಸ ಅಗ್ಗದ ಸುಧಾರಣೆಗಳನ್ನು ಮಾಡಹೋಗಿ ಸಾಂಪ್ರದಾಯಿಕವಾಗಿ ಬಂದಿದ್ದ ಶೈಲಿಯ ಅಧಿಕಾರಿಕತೆ ಅಳಿಸಿಹೋಗುತ್ತಿದೆ, ಅದು ಕಳಪೆ ಮಾಲಾಗುತ್ತಿದೆ.

ಒಂದು ಕಾಲದಲ್ಲಿ ಭಾರತವು ಜಗತ್ತಿನ ಒಂಬತ್ತನೆಯ ಅಥವಾ ಹತ್ತನೆಯ ಅತಿದೊಡ್ಡ ಕೈಗಾರಿಕಾ ಶಕ್ತಿಯಾಗಿತ್ತು. ಈಗ ಈ ನೆಲೆಯನ್ನು ಪ್ರಶ್ನಿಸುವಂತಾಗಿದೆ. ಆದರೂ ಕೈಗಾರಿಕೀಕರಣದಲ್ಲಿ ಒಳ್ಳೆಯ ಪ್ರಗತಿಯನ್ನೇನೋ ದೇಶವು ದಾಖಲು ಮಾಡಿದೆ. ಈ ಸಾಧನೆಯ ಗಣನೀಯ ಭಾಗ ನಡೆದದ್ದು ಕಳೆದ ಕೆಲವು ದಶಕಗಳಲ್ಲಿ. ಆದರೆ ದೇಶದ ವಿಸ್ತೀರ್ಣ ಮತ್ತು ಜನಸಂಖ್ಯೆಗಳನ್ನು ಗಮನಕ್ಕೆ ತೆಗೆದುಕೊಂಡಾಗ, ಈ ಸಾಧನೆಯ ಥಳಕು ಮಾಯವಾಗುತ್ತದೆ. ಕೈಗಾರಿಕೆಗಳು ದೇಶದ ಕೆಲವು ಆಯ್ದ ಪ್ರದೇಶಗಳಲ್ಲಿ ಕೇಂದ್ರೀಕರಿಸಿವೆ. ಅವುಗಳನ್ನು ಒಂದೇ ಕಡೆ ತುಂಬದೆ ಎಲ್ಲ ಕಡೆಗೂ ಚದುರಿಸುವ ಪ್ರಯತ್ನ ಸಾಗಿದ್ದು, ಅದರ ಫಲವಾಗಿ ಮಧ್ಯಪ್ರದೇಶ, ಒರಿಸ್ಸಾದಂತಹ ಹಿಂದುಳಿದ ರಾಜ್ಯಗಳೂ ಕೆಲವು ಬೃಹತ್ ಕೈಗಾರಿಕಾ ಸ್ಥಾವರಗಳನ್ನು ಹೊಂದಿರುವ ಹೆಮ್ಮೆಪಡಬಹುದು. ಆದರೂ ಕೈಗಾರಿಕೆಗಳ ಹಂಚಿಕೆ ಸಮಾನವಾಗಿಲ್ಲ. ಪ್ರಾದೇಶಿಕ ಅಸಮತೋಲನಗಳು ಗಂಭೀರವಾಗಿವೆ. ಇವುಗಳಿಂದಾಗಿ ಬಿಕ್ಕಟ್ಟು, ಒತ್ತಡ ಹೆಚ್ಚುತ್ತದೆ. ಬೃಹತ್ ಕೈಗಾರಿಕಾ ಕೇಂದ್ರಗಳಲ್ಲಿ ಕಾರ್ಮಿಕರ ಯೂನಿಯನ್ ಸಂಘಟನೆಗಳಿದ್ದು, ಸೂಕ್ತ ವೇತನ, ತಕ್ಕಮಟ್ಟಿಗೆ ಉತ್ತಮವಾದ ಕಾರ್ಯಪರಿಸರಗಳನ್ನು ಸಾಧಿಸಲಾಗಿದೆ. ಉತ್ಪಾದನೆಯ ಮಟ್ಟ ಇನ್ನೂ ಹಲವು ಗಂಭೀರ ಸಮಸ್ಯೆಗಳನ್ನು ಎದುರಿಸುತ್ತಿದೆ. ಕೆಲವು ಸಮಸ್ಯೆಗಳು; ಅನಾರೋಗ್ಯಕರವಾದ ಕೊಳಕು ಕೊಂಪೆಯಲ್ಲಿ, ಜೋಪಡಿಗಳಲ್ಲಿ ಜೋಪಡಪಟ್ಟಿಗಳಲ್ಲಿ ವಾಸ, ಮದ್ಯಪಾನ, ರೋಗ, ಸೂಳೆಗಾರಿಕೆ ಇತ್ಯಾದಿ. ಹಲವು ಕಾರ್ಮಿಕ ಪ್ರದೇಶಗಳು ಮಾಫಿಯಾ ತಂಡದ ಚಟುವಟಿಕೆಗಳ ಕೇಂದ್ರವಾಗಿವೆ. ಅವರ ದಬ್ಬಾಳಿಕೆ, ಶೋಷಣೆ ಆಕ್ರಮಣಗಳನ್ನು ಕಾನೂನು ಪಾಲನಾ ವ್ಯವಸ್ಥೆ ಕೂಡ ನಿಯಂತ್ರಿಸಲಾರದಾಗಿದೆ. ಸಂಶೋಧಕ ಪತ್ರಕರ್ತರು ಆಗಾಗ ಮಾಡಿರುವ ವರದಿಗಳ ಪ್ರಕಾರ ಈ ಮಾಫಿಯಾ ದಾದಾಗಳು ಕೊಬ್ಬಿರುವುದು ತೋಳಬಲದಿಂದ ಹಾಗೂ ಉನ್ನತವಲಯದೊಂದಿಗೆ ಗೋಚರ, ಅಗೋಚರ ಸಂಪರ್ಕಗಳನ್ನು ಇಟ್ಟುಕೊಂಡಿರುವುದರಿಂದ. ಹಲವು ಸರಕಾರೀ ಅಧಿಕಾರಿಗಳ ಸಂಪರ್ಕವೂ ಇವರಿಗಿರುತ್ತದೆ. ಅನೇಕ ವೇಳೆ ಇಬ್ಬರೂ ಸೇರಿ ಬಡವರನ್ನು ಸುಲಿಯುತ್ತಾರೆ ಎಂದೂ ವರದಿಯಾಗಿದೆ. ರಾಜಕೀಯ ಪಕ್ಷಗಳು ಇಂತಹ ತಂಡಗಳ ನಾಯಕರಿಗೆ ರಾಜ್ಯ

ವಿಧಾನಸಭೆ ಹಾಗೂ ದೇಶದ ಸಂಸತ್ತುಗಳ ಚುನಾವಣೆಗಳಲ್ಲಿ ಸ್ಪರ್ಧಿಸಲು ಟಿಕೆಟ್ ನೀಡಿದಾಗ ಅವರಿಗೆ ಹೊಸ ಗೌರವ ಲಭಿಸುತ್ತದೆ.

ಭಾರತೀಯ ಸಮಾಜವನ್ನು ಕುರಿತು ಮಾತನಾಡಲು ಹೊರಟರೆ "ಬಡತನದ ರೇಖೆ" ಅಲ್ಲಿ ಮುಖ್ಯವಾಗಿ ಕಾಣಿಸಿಕೊಳ್ಳುತ್ತದೆ. ಈ ರೇಖೆಯ ಕೆಳಗಿರುವವರ ಸಂಖ್ಯೆಯನ್ನು ಕಡಿಮೆ ಮಾಡಲು ಎಷ್ಟೇ ಗಂಭೀರ ಪ್ರಯತ್ನ ಮಾಡುತ್ತಿದ್ದರೂ ಅದು ಹಾಗೆಯೇ ಉಳಿದಿದೆ. ಇದಕ್ಕೆ ಮುಖ್ಯವಾಗಿ ಎರಡು ಕಾರಣಗಳನ್ನು ಕೊಡಬಹುದು. ಮೊದಲನೆಯದಾಗಿ, ದೇಶದ ಅರ್ಥವ್ಯವಸ್ಥೆ ಬೆಳೆಯುವುದಕ್ಕಿಂತ ಅತಿಹೆಚ್ಚಿನ ವೇಗದಲ್ಲಿ ಜನಸಂಖ್ಯೆ ಬೆಳೆಯುತ್ತಿರುವುದು. ಎರಡನೆಯದಾಗಿ, ಅನೇಕ ಅಭಿವೃದ್ಧಿ ಯೋಜನೆಗಳು ಯಾರು ಶ್ರೀಮಂತರಾಗಿದ್ದಾರೋ ಪ್ರಭಾವಶಾಲಿಗಳಾಗಿದ್ದಾರೋ ಅವರಿಗೆ ಅನುಕೂಲವಾಗುವ ರೀತಿಯಲ್ಲಿ ರೂಪುಗೊಂಡಿರುವುದು. ಶ್ರೀಮಂತ ಇನ್ನೂ ಶ್ರೀಮಂತನಾಗುತ್ತಾನೆ, ಬಡವ ಇನ್ನೂ ಬಡವನಾಗುತ್ತಾನೆ ಎಂಬ ಉಕ್ತಿಯಲ್ಲಿ ಸತ್ಯವಿದೆ. ಸುಮಾರಾಗಿ ದೇಶದ ಜನಸಂಖ್ಯೆಯ ಅರ್ಧ ಹೀಗೆ ಬಡತನದ ಪರಿಸ್ಥಿತಿಯನ್ನು ಎದುರಿಸುವಂತಾಗಿದೆ. ಇದರಿಂದ ದೇಶದಲ್ಲಿ ಸಾಮಾಜಿಕ ಪರಿವರ್ತನೆಯ ವೇಗ ಕಡಮೆಯಾಗುತ್ತದೆ. ಬಿಕ್ಕಟ್ಟು, ಘರ್ಷಣೆಯೂ ಹೆಚ್ಚುತ್ತದೆ.

## ರಾಜ್ಯ ವ್ಯವಸ್ಥೆ

ಭಾರತವು "ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವ" ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತದೆ. ದೇಶಕ್ಕೆ ಸ್ವಾತಂತ್ರ್ಯ ಬಂದ ತರುಣದಲ್ಲಿ ಭಾರತದ ಕೆಲವು ಮಿತ್ರರೂ ಸೇರಿದಂತೆ ಹಲವು ವಿದೇಶೀಯ ವೀಕ್ಷಕರು ಭಾರತದ ಈ ಪ್ರಜಾಪ್ರಭುತ್ವ ಪ್ರಯೋಗ ಯಶಸ್ವಿಯಾಗುವುದರ ಬಗೆಗೆ ತೀವ್ರ ಶಂಕೆ ತಳೆದಿದ್ದರು. ಭಾರತ ರಾಜಪ್ರಭುತ್ವಕ್ಕೆ ಒಗ್ಗಿಕೊಂಡಿದೆ; ಪ್ರಜಾಪ್ರಭುತ್ವದ ಪರಂಪರೆ ಇಲ್ಲಿ ಇಲ್ಲ; ಇಲ್ಲಿನ ನಾಯಕರಿಗೆ ಸರಕಾರದ ಅತಿ ಜಟಿಲ ಅಂಗಗಳನ್ನು ನಿರ್ವಹಿಸಿದ ಅನುಭವ ಇಲ್ಲ; ಧಾರ್ಮಿಕ ಹಾಗೂ ಜಾತೀಯ ಭಿನ್ನತೆಗಳಿಂದಾಗಿ ರಾಷ್ಟ್ರೀಯ ಐಕ್ಯತಾಭಾವನೆ ದುರ್ಬಲವಾಗಿದೆ; ಮತದಾರರು ಅಜ್ಞಾನ ಮತ್ತು ಮೂಢನಂಬಿಕೆಗಳ ಸುಳಿಯಲ್ಲಿ ಮುಳುಗಿಹೋಗಿದ್ದಾರೆ – ಎಂದು ಅವರು ವಾದಿಸುತ್ತಿದ್ದರು. ಪ್ರಜಾಪ್ರಭುತ್ವ ಪ್ರಯೋಗವು ಇಷ್ಟುಕಾಲ ಉಳಿದುಬಂದಿರುವುದೇ ಒಂದು ಮಹತ್ವದ ಸಾಧನೆಯಾಗಿದೆ. ಹಲವು ಆಂತರಿಕ ಮತ್ತು ಬಾಹ್ಯ ಬಿಕ್ಕಟ್ಟುಗಳನ್ನು ಎದುರಿಸಬೇಕಾಗಿ ಬಂದಿದ್ದರೂ ಅದು ಉಳಿದುಕೊಂಡಿದೆ.

ಭಾರತದ ಪ್ರಜಾಪ್ರಭುತ್ವ ಅನೇಕ ಬಾಲಗ್ರಹಗಳನ್ನು ಎದುರಿಸಬೇಕಾಯಿತು. ಅವನ್ನೆಲ್ಲ ಗೆದ್ದು ತನ್ನ ಶಕ್ತಿಯನ್ನು ಅದು ಈಗ ತೋರಿಸಿಕೊಂಡಿದೆ. ರಾಷ್ಟ್ರೀಯ ತುರ್ತು ಪರಿಸ್ಥಿತಿಯ ಅಲ್ಪ ಅವಧಿಯಲ್ಲಿ ದಬ್ಬಾಳಿಕೆ, ದೌರ್ಜನ್ಯ ನಡೆಸಿದ ಒಂದು ಆಡಳಿತವನ್ನು ಜನತೆ ಕಿತ್ತೊಗೆಯಲು ಸಮರ್ಥವಾಯಿತು. ಸ್ವಾತಂತ್ರ್ಯ ಬಂದಾಗ ನಾಯಕರಿಗೆ ಸರಕಾರವನ್ನು ನಡೆಸಿದ ಅನುಭವವಿರಲಿಲ್ಲವೆಂಬುದೇನೋ ನಿಜ. ಆದರೆ ಬಹುಬೇಗ ನೆಹರೂ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ವಲಯಗಳಲ್ಲಿ

ಶಿಖರಪ್ರಾಯವಾದ ಸಮರ್ಥ ವ್ಯಕ್ತಿಯಾಗಿ ರೂಪುಗೊಂಡರು. ಸರ್ದಾರ್ ಪಟೇಲರ ಮುತ್ಸದ್ದಿತನ ದೇಶದಲ್ಲಿದ್ದ ಸಂಸ್ಥಾನಗಳನ್ನು ಒಂದು ಒಕ್ಕೂಟಕ್ಕೆ ಒಳಪಡಿಸಿತು. ಅನಕ್ಷರಸ್ಥ ಮತದಾರರು, ಅನನುಭವಿ ನಾಯಕತ್ವಗಳೆರಡೂ ಅನೇಕ ಉತ್ತಮಾಂಶಗಳನ್ನು ಹೊಂದಿದ್ದುವು.

ಸ್ವಾತಂತ್ರ್ಯ ಚಳವಳಿಯು ತಕ್ಕಮಟ್ಟಿನ ಪ್ರಮಾಣದಲ್ಲಿ ದೇಶಾದ್ಯಂತ ರಾಷ್ಟ್ರೀಯತಾ ಪ್ರಜ್ಞೆಯನ್ನು ಉಂಟು ಮಾಡಿದ್ದಿತು. ಸ್ವಾತಂತ್ರ್ಯವು ಭಾರತದ ಜನತೆಯಲ್ಲಿ ಹೊಸ ಆಶೋತ್ತರಗಳನ್ನು ಮೂಡಿಸಿತು. ಇವೆರಡೂ ಕೂಡಿ ಸ್ವಲ್ಪ ಕಾಲಕ್ಕಾದರೂ ಭಿನ್ನತೆಗಳನ್ನು ಹಿಡಿತದಲ್ಲಿ ಇಟ್ಟಿದ್ದುವು. ಮೊದಲ ಎರಡು ಮಹಾ ಚುನಾವಣೆಗಳು ಒಂದು ರೀತಿಯಲ್ಲಿ ಮಹಾತ್ಮಾ ಗಾಂಧಿ ಮತ್ತು ಅವರ ರಾಜಕೀಯ ವಾರಸುದಾರರಿಗೆ ಸಲ್ಲಿಸಿದ ಕೃತಜ್ಞತೆಯ ರೂಪದಲ್ಲಿದ್ದುವು. ಆದರೆ ಸುಪ್ತವಾಗಿದ್ದ ಅತೃಪ್ತಿಗಳು ಮೆಲ್ಲನೆ ಅಭಿವ್ಯಕ್ತವಾಗತೊಡಗಿದುವು. ದೇಶದ ವಿಭಜನೆ ಮತ ಸಂಘರ್ಷವನ್ನು ಪರಿಹರಿಸಲಿಲ್ಲ. ಎರಡು ಮುಖ್ಯ ಮತಗಳ ನಡುವೆ ಹಿಂದಿನಿಂದ ಬಳುವಳಿಯಾಗಿ ಬಂದ ಅವಿಶ್ವಾಸವು ಇದ್ದ ಅಲ್ಪಸ್ವಲ್ಪ ಸಂಪನ್ಮೂಲಗಳಿಗೋಸ್ಕರವಾಗಿ ಸ್ಪರ್ಧೆಯ ರೂಪದಲ್ಲಿ ಕೆರಳಿತು. ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಪ್ರಮುಖ ರಾಜಕೀಯ ಪಕ್ಷವಾದ ಭಾರತ ರಾಷ್ಟ್ರೀಯ ಕಾಂಗ್ರೆಸ್ ಭಾಷಾವಾರು ಪ್ರಾಂತಗಳ ರಚನೆಯ ವಿಚಾರಕ್ಕೆ ಬೆಂಬಲ ಕೊಟ್ಟಿತ್ತು, ಅದು ಕಾರ್ಯ ರೂಪದಲ್ಲಿ ಬರುವುದು ನಿಧಾನವಾದಾಗ ಅನೇಕ ಕಡೆಗಳಲ್ಲಿ ಅತೃಪ್ತಿ ಭುಗಿಲೆದ್ದಿತು. ತೆಲುಗು ರಾಜ್ಯ ಆಂಧ್ರಪ್ರದೇಶದ ರಚನೆಗಾಗಿ ಉಪವಾಸ ಸತ್ಯಾಗ್ರಹ ಮಾಡಿದ ಪೊಟ್ಟಿ ಶ್ರೀರಾಮುಲು ಅವರ ನಿಧನ ಮಂದವಾಗಿದ್ದ ಕ್ರಿಯೆಯನ್ನು ಚುರುಕುಗೊಳಿಸಿತು. ಆಂಧ್ರಪ್ರದೇಶ ರಚನೆಗೆ ಒಪ್ಪಿಗೆ ನೀಡಲಾಯಿತು. ಬೇರೆ ಬೇರೆ ಪ್ರದೇಶಗಳಿಂದಲೂ ಒತ್ತಡ ಬಂದುದರಿಂದ ಕೊನೆಗೆ ಭಾಷಾ ಆಧಾರದ ಮೇಲೆ ದೇಶವನ್ನು ಪುನರ್-ವಿಂಗಡಿಸಲಾಯಿತು. ಭಾಷೆ ಮತ್ತು ಪ್ರಾದೇಶಿಕತೆ ಒಂದೇ ನಾಣ್ಯದ ಎರಡು ಮುಖಗಳು. ರಾಜ್ಯಗಳ ಭಾಷಾ ಪುನರ್ವಿಂಗಡಣೆಯಿಂದ ಪ್ರಾದೇಶಿಕ ಆಶೋತ್ತರಗಳನ್ನು ಈಡೇರಿಸಿದಂತಾಗುವುದೆಂದು ಭಾವಿಸಲಾಗಿತ್ತು. ಆದರೆ ಕೆಲ ಸಮಯದಲ್ಲೇ ಉಪ-ಪ್ರಾದೇಶಿಕತೆಯ ಸಮಸ್ಯೆಗಳು ಹುಟ್ಟಿಕೊಂಡುವು. ಆಂಧ್ರಪ್ರದೇಶದಲ್ಲಿ ತೆಲಂಗಾಣದ ಬೇಡಿಕೆ, ಮಹಾರಾಷ್ಟ್ರದಲ್ಲಿ ವಿದರ್ಭ, ಬಿಹಾರದಲ್ಲಿ ಛೋಟಾನಾಗಪುರ (ಜಾರ್ಖಂಡ್) ಇತ್ಯಾದಿ; ಈ ಉಪಪ್ರಾದೇಶಿಕ ಬೇಡಿಕೆಗಳನ್ನೂ ಪೂರೈಸಲು ಕ್ರಮಗಳನ್ನು ಕೈಗೊಳ್ಳಲಾಯಿತು. ಪಂಜಾಬು ಮೂರು ಸಲ ವಿಭಜನೆಗೊಳಪಡಬೇಕಾಯಿತು. ಮೊದಲು ದೇಶ ವಿಭಜನೆಗೊಂಡಾಗ ಪಂಜಾಬಿನ ಒಂದು ಭಾಗ ಪಾಕೀಸ್ತಾನಕ್ಕೆ ಸೇರಿತು. ಆಮೇಲೆ ಅದರಿಂದ ಹಿಮಾಚಲ ಪ್ರದೇಶವನ್ನು ಬೇರ್ಪಡಿಸಲಾಯಿತು; ಕೊನೆಗೆ ಸ್ವತಂತ್ರ ಹರ್ಯಾಣಾದ ರಚನೆಯಾದಾಗ ಒಡೆಯಿತು. ಮೊದಲಿಗಿಂತ ಬಹು ಚಿಕ್ಕದಾದ ಪಂಜಾಬಿ ಮಾತನಾಡುವ ಪಂಜಾಬ್ ಒಂದು ಭಾಷಾ ರಾಜ್ಯವಾಗಿ ಉಳಿಯಿತು. ಈಶಾನ್ಯಭಾಗದ ಸಮಸ್ಯೆಗಳು ಬೇರೆ ರೀತಿಯುವು. ಆದಿವಾಸಿ ಬುಡಕಟ್ಟುಗಳು ತಮಗೆ ಪ್ರತ್ಯೇಕ ಅಸ್ತಿತ್ವ ಬೇಕೆಂದು

ಒತ್ತಾಯಪಡಿಸಿದುವು. ನಾಗಾ ಮತ್ತು ಮಿಜೋ ಪ್ರತ್ಯೇಕತಾ ಚಳವಳಿಗಳು ಉಗ್ರರೂಪ ತಳೆದಿದ್ದುವು ಮತ್ತು ದೀರ್ಘಕಾಲಿಕವಾಗಿದ್ದುವು. ಭಾರತದ ರಾಜಕೀಯ ವ್ಯವಸ್ಥೆಯು ಇಂತಹ ಬೇಡಿಕೆಗಳಿಗೆ ಸ್ಪಂದಿಸಿ ಕೊನೆಯಪಕ್ಷ ಅರ್ಧದಷ್ಟನ್ನಾದರೂ ಪೂರೈಸಿ ರಾಷ್ಟ್ರದ ಐಕಮತ್ಯವನ್ನು ಕಾಪಾಡುವ ಶಕ್ತಿಯನ್ನು ಹೊಂದಿದ್ದಿತು.

ಆದರೆ ಭಾರತದ ರಾಜ್ಯ ವ್ಯವಸ್ಥೆಗೆ ಬೆದರಿಕೆಯೊಡ್ಡುವ ಅನೇಕ ಸಮಸ್ಯೆಗಳು ಈಗ ಹುಟ್ಟಿಕೊಂಡಿವೆ. ಮತೀಯ ಸಮಸ್ಯೆ ಪರಿಹರಿಸಲಾರದ್ದೆಂಬಂತೆ ತೋರುತ್ತಿದೆ. ಭಾಗಶಃ ಇಸ್ಲಾಮಿಕ್ ಮತನಿಷ್ಠೆಗೆದುರಾಗಿ ಹುಟ್ಟಿಕೊಂಡ ಹಿಂದೂತ್ವ ನಿಷ್ಠೆ ಸಮಸ್ಯೆಗಳನ್ನು ಉಲ್ಬಣಗೊಳಿಸುತ್ತಿದೆ, ಇನ್ನಷ್ಟು ಜಟಿಲವಾಗಿಸುತ್ತಿದೆ. ಹಿಂದೂ ಮುಸ್ಲಿಂ ಸಂಘರ್ಷದ ಜೊತೆಗೆ, ಹಿಂದೂ, ಕ್ರಿಶ್ಚಿಯನ್ ಕೆಲವೊಮ್ಮೆ ಹಿಂದೂ – ಜೈನ ದಂಗೆಗಳೂ ಕಾಣಿಸಿಕೊಂಡಿವೆ. ಸಿಖ್ ಪ್ರತ್ಯೇಕತಾ ಬೇಡಿಕೆಯು ಉಗ್ರ ಚಳವಳಿಯ ಹಾದಿ ಹಿಡಿದಿದೆ. ಭಾರೀ ರಕ್ತಪಾತ ಹಿಂಸಾಚಾರಗಳಲ್ಲಿ ತೊಡಗಿದೆ. ಪಶ್ಚಿಮ ಬಂಗಾಳದ ಗೂರ್ಖಾ ಭಾಗವು (ಡಾರ್ಜಿಲಿಂಗ್ ಮತ್ತು ಸುತ್ತುಮುತ್ತಿನ ಪ್ರದೇಶ) ಈಗ ಮತ್ತೊಮ್ಮೆ ಶಾಂತವಾಗಿರುವಂತೆಯೇ, ಅಸ್ಸಾಮಿನಲ್ಲಿ ಬೋಡೋಲ್ಯಾಂಡ್ ಬೇಡಿಕೆ ಭುಗಿಲೆದ್ದಿದೆ. ಕಾಶ್ಮೀರ ಕುದಿಯುತ್ತಲೇ ಇದೆ. ಜಾರ್ಖಂಡ್ ಬೇಡಿಕೆ ಮತ್ತೆ ಮೇಲಕ್ಕೆದ್ದಿದೆ, ಈಗ ಹೆಚ್ಚಿನ ಉಗ್ರತೆಯಿಂದ. ಜಾತಿ ಬಿಕ್ಕಟ್ಟುಗಳು ಹೆಚ್ಚುತ್ತಿವೆ. ಹಿಂದೂ ಬಡವರ್ಗದವರ ಮೀಸಲಾತಿಯ ಪರವಾದವರು ಹಾಗೂ ವಿರೋಧಿಗಳಾದವರು ಯುದ್ಧಸನ್ನದ್ಧರಾಗಿರುವಂತೆ ಮಸೆಯುತ್ತಿದ್ದಾರೆ. ಈ ಸಮಸ್ಯೆಗಳು ಭಾರತದ ರಾಜ್ಯ ವ್ಯವಸ್ಥೆಗೆ ಭಾರೀ ಸವಾಲು ಒಡ್ಡಿವೆ. ಘರ್ಷಣೆಗಳನ್ನು ಸಾಂತ್ವನಗೊಳಿಸಿ ಸಮಸ್ಯೆಗಳನ್ನು ಪರಿಹರಿಸುವ ಅದರ ಶಕ್ತಿಯನ್ನು ಪರೀಕ್ಷಿಸುತ್ತಿವೆ.

ರಾಜ್ಯ ವ್ಯವಸ್ಥೆಯ ರೋಗ ಲಕ್ಷಣಗಳನ್ನು ಪರಿಶೀಲಿಸಿ. ರಾಜಕೀಯ ಸಂಸ್ಥೆಗಳ ಮೌಲ್ಯ ಕುಸಿದು ಹೋಗಿ, ಆದರಿಂದ ಅವುಗಳ ನ್ಯಾಯ ಸಮ್ಮತತೆಯ ಬಿಕ್ಕಟ್ಟು ಉಂಟಾಗಿದೆ. ಆಳುವವರ ನೈತಿಕ ಅಧಿಕಾರವನ್ನು ಪದೇ ಪದೇ ಪ್ರಶ್ನಿಸಲಾಗಿದೆ. ಮತದಾರರನ್ನು ಸಾಮೂಹಿಕವಾಗಿ ಬಲಾತ್ಕರಿಸುವುದು, ಮತಗಟ್ಟೆಗಳನ್ನು ವಶಪಡಿಸಿಕೊಳ್ಳುವುದು ಮುಂತಾದ ಕೃತ್ಯಗಳಿಂದ ಜನತೆಯಲ್ಲಿ ವಿಶ್ವಾಸ ಹೋಗಿಬಿಡುತ್ತದೆ. ಆಗಾಗ ಮೇಲೆದ್ದ ಅಪಪ್ರಚಾರ ಮತ್ತು ಭ್ರಷ್ಟಾಚಾರಗಳಿಂದ ರಾಜ್ಯ ವ್ಯವಸ್ಥೆ ಅಲುಗಾಡುತ್ತಿದೆ. ಅಪರಾಧಿಗಳು, ಅಧಿಕಾರಶಾಹಿವರ್ಗ ಮತ್ತು ರಾಜಕೀಯಸ್ಥರು ಒಂದಾಗಿ ಕಣ್ಣಿಗೆ ಕಾಣುವಂತೆಯೇ ಶಕ್ತಿ ಹೆಚ್ಚಿಸಿಕೊಂಡಿರುವುದು ಕಳೆದ ಎರಡು ದಶಕಗಳಲ್ಲಿ ರಾಜ್ಯವ್ಯವಸ್ಥೆಯನ್ನು ಅಲ್ಲೋಲಕಲ್ಲೋಲ ಮಾಡಿದೆ. ಈ ರೀತಿ ರಾಜಕೀಯ ಅಸ್ತವ್ಯಸ್ತತೆಯಿಂದಾಗಿ ಭಾರತೀಯ ಸಮಾಜ ಮತ್ತು ಸಂಸ್ಕೃತಿ ಕುತ್ತಿಗೊಳಗಾಗಿರುವುದರ ಬಗೆಗೆ ಪ್ರತಿಯೊಬ್ಬ ಪೌರನೂ ಗಂಭೀರವಾಗಿ ಚಿಂತಿಸಬೇಕಾದ ಆಗತ್ಯವಿದೆ.

**ಸಂಸ್ಕೃತಿ**

ಭಾರತದಲ್ಲಿ ಧರ್ಮ, ಪ್ರದೇಶ, ಕುಲ ಆಧಾರಗಳ ಮೇಲೆ ಸಾಂಸ್ಕೃತಿಕ

ವೈಶಿಷ್ಟ್ಯಗಳನ್ನು ಗುರುತಿಸಲಾಗುತ್ತದೆ. ಇವುಗಳಲ್ಲಿ ಧರ್ಮ ಸರಿಯಾದ ಸೂಚನೆ ಕೊಡುವುದಿಲ್ಲ. ಒಂದು ನಿರ್ದಿಷ್ಟ ಧರ್ಮವನ್ನು ಅನುಸರಿಸುವವರಲ್ಲಿ ನಂಬಿಕೆ, ಪೂಜಾ ವಿಧಾನಗಳು ಮತ್ತು ಆಚರಣೆಗಳು ಇವುಗಳ ಹೊರತು ಬೇರಾವುದೂ ಸಮಾನಾಂಶ ಅವುಗಳಲ್ಲಿ ಇಲ್ಲ. ಪೂಜಾವಿಧಾನ ಹಾಗೂ ಆಚರಣೆಗಳಲ್ಲಿ ಕೂಡಾ ಪಂಥೀಯ ಹಾಗೂ ಪ್ರಾದೇಶಿಕ ಭಿನ್ನತೆಗಳುಂಟು. ಸಾಂಸ್ಕೃತಿಕವಾಗಿ ಹಿಂದೂಗಳು ಏಕರೂಪದವರಲ್ಲ. ಮುಸ್ಲಿಮರೂ ಅಲ್ಲ. ತಮಿಳುನಾಡಿನ ಬ್ರಾಹ್ಮಣರು ಕಾಶ್ಮೀರದ ಬ್ರಾಹ್ಮಣರಿಗಿಂತ ಬೇರೆ. ಕೇರಳದ ಮುಸ್ಲಿಮರೂ ಉತ್ತರಪ್ರದೇಶದವರೂ ತಮ್ಮ ಸಂಸ್ಕೃತಿಯ ಅನೇಕ ಅಂಶಗಳಲ್ಲಿ ಬೇರೆ ಬೇರೆಯಾಗಿದ್ದಾರೆ. ಪ್ರಾದೇಶಿಕ ಲಕ್ಷಣಗಳು ಹೆಚ್ಚು ವಾಸ್ತವಿಕವಾಗಿವೆ. ಬೇರೆ ಬೇರೆ ಧರ್ಮಗಳಿಗೆ, ಜಾತಿಗಳಿಗೆ ಸೇರಿದ ಜನರು ಮಾತು, ಆಹಾರ, ಉಡುಗೆ, ಮೌಲ್ಯಗಳು ಹಾಗೂ ಪ್ರಾಪಂಚಿಕ ದೃಷ್ಟಿಕೋನ ಇವುಗಳನ್ನು ಸಮಾನವಾಗಿ ಹಂಚಿಕೊಳ್ಳುತ್ತಾರೆ. ಬಂಗಾಳಾದಲ್ಲಿ ಹಿಂದೂ–ಮುಸ್ಲಿಮರಿಬ್ಬರೂ ತಾವು ಬಂಗಾಳಿಗಳಾಗಿರಲು ಹೆಮ್ಮೆಪಡುತ್ತಾರೆ. ಹಾಗೆಯೇ ದೇಶದ ಬೇರೆ ಬೇರೆ ಭಾಗಗಳಲ್ಲೂ ಹಿಂದೂಗಳು, ಮುಸ್ಲಿಮರು, ಕ್ರಿಶ್ಚಿಯನರು ಪ್ರಾದೇಶಿಕ ಸಂಸ್ಕೃತಿಯ ಹಲವಾರು ಅಂಶಗಳನ್ನು ಸಮಾನವಾಗಿ ಹಂಚಿಕೊಳ್ಳುವುದನ್ನು ನೋಡಬಹುದು. ಮುಸ್ಲಿಂ ಮತ್ತು ಹಿಂದೂ ಮೂಲಸಂಪ್ರದಾಯವಾದಿಗಳು ಪ್ರಾದೇಶಿಕವಾದ ಸಾಂಸ್ಕೃತಿಕ ಭಿನ್ನತೆಗಳನ್ನು ಅಳಿಸುವ ಸಾಧ್ಯತೆಯಿಲ್ಲ. ಕುಲ, ಸಂಸ್ಕೃತಿಗಳನ್ನು ರಕ್ಷಿಸಿಕೊಳ್ಳುವುದು ಆದಿವಾಸಿ ಬುಡಕಟ್ಟುಗಳಲ್ಲಿ ಬಹಳ ಹೆಚ್ಚು. ಉದಾಹರಣೆಗೆ, ನಾಗಾಲ್ಯಾಂಡಿನಂತಹ ಚಿಕ್ಕ ರಾಜ್ಯದಲ್ಲಿ ಒಂದು ಡಜನ್‌ಗಿಂತಲೂ ಹೆಚ್ಚು ವಿಧದ ನಾಗಾಗಳಿದ್ದಾರೆ. ಉಡುಗೆ, ಮಾತು, ನಂಬಿಕೆಗಳಲ್ಲಿ ಅವರು ಒಬ್ಬರಿಗಿಂತ ಒಬ್ಬರು ಬೇರೆ. ಮಧ್ಯಪ್ರದೇಶದ ಆದಿವಾಸಿಗಳಿರುವ ಬಸ್ತರ್ ಜಿಲ್ಲೆಯಲ್ಲಿ ತಮ್ಮದು ಬೇರೆಬೇರೆ ಕುಲವೆಂದು ಹೇಳಿಕೊಳ್ಳುವ ಹಲವು ಗುಂಪುಗಳಿವೆ. ಒಂದು ಬುಡಕಟ್ಟಿನ ಮೂಲ ಹೆಸರು ನಮ್ಮನ್ನು ತಪ್ಪುದಾರಿಗೆಳೆಯಬಹುದು. ಬಸ್ತರ್‌ನ ಅಬುಜ್‌ಮಾರಿಯ, ಚತ್ತೀಸಘರದ ಅಮತ್ ಮತ್ತು ಧುರ್‌ಗೊಂಡ್ (ಈ ಮೂರೂ ಮಧ್ಯಪ್ರದೇಶದಲ್ಲಿವೆ) ಮತ್ತು ಆಂಧ್ರಪ್ರದೇಶದ ಕೋಯಾ ಮತ್ತು ರಾಜ್‌ಗೊಂಡ ಇವೆಲ್ಲವೂ ಸಮಾನವಾದ ಕೋಯ್ತುರ್ ಮೂಲಕ್ಕೆ ಸೇರಿರಬಹುದು. ಆದರೆ ಈಗ ಸ್ಪಷ್ಟವಾದ ಸಾಂಸ್ಕೃತಿಕ ಭಿನ್ನತೆಗಳನ್ನು ಹೊಂದಿವೆ. ಹಾಗಾಗಿ ಭಾರತದ ಸಾಂಸ್ಕೃತಿಕ ವರ್ಣಚಿತ್ರದಲ್ಲಿ ನಿರ್ದಿಷ್ಟ ವಿನ್ಯಾಸಗಳನ್ನು ಗುರುತಿಸುವುದಾಗಲಿ, ವರ್ಣಿಸುವುದಾಗಲಿ ಕಷ್ಟ.

ಭಾರತದ ಸಾಂಸ್ಕೃತಿಕ ಚಿತ್ರದಲ್ಲಿ ಪ್ರಾದೇಶಿಕ ಸಂಸ್ಕೃತಿಗಳು ಅವುಗಳ ಸ್ಥಳೀಯ ಭಿನ್ನತೆಗಳೊಂದಿಗೆ, ಸ್ಪಷ್ಟವಾಗಿ ಎದ್ದು ತೋರುತ್ತವೆ. ಈ ಸಂಸ್ಕೃತಿಗಳು ಸದಾ ತಮ್ಮ ಪ್ರಾಚೀನ ಪರಂಪರೆಯನ್ನು ಉಲ್ಲೇಖಿಸುತ್ತವೆ. ಹಿಂದೂಗಳಿಗೆ ವೇದಶಾಸ್ತ್ರಗಳು; ಮುಸ್ಲಿಮರಿಗೆ ಕೊರಾನ್ ಹಾಗೂ ಹಾದಿಗಳು, ಕ್ರಿಶ್ಚಿಯನರಿಗೆ ಹಳೆಯ ಮತ್ತು ಹೊಸ ಒಡಂಬಡಿಕೆಗಳು. ಈ ಮಾದರಿಯೇ ಒಂದು ಸಾಮಾಜಿಕ ರಚನಾ ವಿನ್ಯಾಸ. ಅದರ

ವ್ಯಾಖ್ಯಾನ ಬದುಕಿನ ಬದಲಾಗುತ್ತಿರುವ ಸಂದರ್ಭಗಳಿಗನುಗುಣವಾಗಿ ಬದಲಾಗುತ್ತದೆ. ಕಾಲದಿಂದ ಕಾಲಕ್ಕೆ ಅದು ಬಗೆಬಗೆಯಾದ ಸಾಮಾಜಿಕ – ಸಾಂಸ್ಕೃತಿಕ ಮತ್ತು ರಾಜಕೀಯ ಚಳವಳಿಗಳನ್ನು ಪ್ರೇರಿಸುತ್ತದೆ, ಪ್ರಚೋದಿಸುತ್ತದೆ. ಬುಡಕಟ್ಟುಗಳಂತಹ ಕೆಲವು ತಂಡಗಳು ಮಾತ್ರ ಸ್ಥಳೀಯ ಅಥವಾ ಪ್ರಾದೇಶಿಕ ಸಂಸ್ಕೃತಿಗಳನ್ನು ಮಾತ್ರ ಹೊಂದಿದ್ದು ತಮ್ಮದೇ ಆದ ಪ್ರಾಚೀನ ಉಲ್ಲೇಖ ಮೂಲವನ್ನು ಹೊಂದಿರುವುದಿಲ್ಲ.

ಪ್ರಾದೇಶಿಕ ಸಂಸ್ಕೃತಿಗಳ ಮೇಲೆ ಕೊನೆಯ ಪಕ್ಷ ಮೂರು ಪ್ರಭಾವಗಳು ವರ್ತಿಸಿವೆ ಎಂದು ಹೇಳಬಹುದು. ಅವು ಪಾಶ್ಚಾತ್ಯೀಕರಣ, ಉದಯಿಸುತ್ತಿರುವ ರಾಷ್ಟ್ರೀಯ ಸಾಂಸ್ಕೃತಿಕ ಶೈಲಿಗಳು ಮತ್ತು ಜನತಾ ಸಂಸ್ಕೃತಿ. ಸ್ವಾತಂತ್ರ್ಯ ಬರುವುದಕ್ಕೆ ಮೊದಲು ಶ್ರೀಮಂತವರ್ಗದವರು ಮತ್ತು ಉನ್ನತ ಅಧಿಕಾರಗಳಲ್ಲಿದ್ದವರು ಕೆಲವು ಪಾಶ್ಚಾತ್ಯ ಮಾದರಿಗಳನ್ನು ಅಳವಡಿಸಿಕೊಂಡರು. ಈ ಸಂಸ್ಕೃತಿಯ ಪ್ರಭಾವ ಈಗ ಸಮಾಜದ ಮೇಲುಮಧ್ಯಮ ವರ್ಗಕ್ಕೆ ಹಬ್ಬಿದೆ. ಬಹು ಸ್ವಲ್ಪ ಪ್ರಮಾಣದಲ್ಲಿ ಹಳ್ಳಿಗಳಿಗೂ ಕಾಲಿಟ್ಟಿದೆ. ಸ್ವಾತಂತ್ರ್ಯ ಹೋರಾಟದ ಅವಧಿಯಲ್ಲಿ ಹೊಸತೊಂದು ರಾಷ್ಟ್ರೀಯ ಶೈಲಿ ರೂಪುಗೊಂಡಿತು. ಅದರ ಕೆಲವು ಅಂಶಗಳು ಈಗಲೂ ಉಳಿದಿವೆ. ಗಾಂಧಿಟೋಪಿ ಮತ್ತು ಖಾದಿ ಈಗ ಕೇವಲ ಅಲಂಕಾರಿಕವಾಗಿ, ಸಾಂಕೇತಿಕವಾಗಿ ಉಳಿದುಕೊಂಡಿರಬಹುದು. ಆದರೆ ಆ ಅವಧಿಯಲ್ಲಿ ರೂಪುಗೊಂಡ ಅನೇಕ ಅಂಶಗಳು ದೇಶದ ಐಕ್ಯತೆಗೆ ಇಂಬುಕೊಟ್ಟವು. ದೇಶದ ಸಂಸ್ಕೃತಿಯಲ್ಲಿ ಒಂದು ಏಕರೂಪತೆ ಕಾಣುವಂತೆ ಮಾಡಿದುವು. ಬಹುಮಟ್ಟಿಗೆ ಜನತಾ ಮಾಧ್ಯಮದ ಫಲವಾದ ಜನತಾ ಸಂಸ್ಕೃತಿಯೂ ಏಕೀಕರಣದ ಇನ್ನೊಂದು ಸಾಧನ. ಚಲನಚಿತ್ರಗಳ ಪ್ರಭಾವ ಅಗಾಧವಾಗಿದೆ. ಮನೋಭಾವಗಳನ್ನು ರೂಪಿಸುವಲ್ಲಿ ರೇಡಿಯೋ ಮತ್ತು ಈಗ ಟೆಲಿವಿಷನ್ ಕೂಡ ಪಾತ್ರ ವಹಿಸಿವೆ. ಅವುಗಳ ಕಲಾಮೌಲ್ಯ ಕಳಪೆಯಾಗಿರಬಹುದು. ಆದರೆ ಜನತೆಯ ಮೇಲೆ ಅವುಗಳಿಗಿರುವ ಹಿಡಿತ ಮಾತ್ರ ನಿಸ್ಸಂದೇಹ. ಆಧುನಿಕ ಸಮೂಹಮಾಧ್ಯಮಗಳು ಸಂಪ್ರದಾಯಕತೆಯನ್ನೂ ಸಾರ್ವಜನಿಕ ಆಸಕ್ತಿಯ ವಿಷಯಗಳನ್ನೂ ಎತ್ತಿ ಹಿಡಿದಿವೆ ಎಂಬುದನ್ನು ನೆನಪಿನಲ್ಲಿ ಇಡಬೇಕು. ಅವು ಬಿತ್ತರಿಸುವ ಶೈಲಿಗಳು ದೇಶದ ಹಲವು ಭಾಗಗಳಲ್ಲಿ ಬೇರೆ ಬೇರೆ ಜನವರ್ಗಗಳು ಆಚರಿಸುವವೇ ಆಗಿವೆ.

ಭಾರತವು ಸಾಂಸ್ಕೃತಿಕ ಪ್ರಜ್ಞೆಯುಳ್ಳ ದೇಶ. ಸ್ವಾತಂತ್ರ್ಯ ಗಳಿಕೆಗಿಂತಲೂ ಮೊದಲೇ ದೇಶದ ಸಾಂಸ್ಕೃತಿಕ ಪರಂಪರೆಯನ್ನು ರಕ್ಷಿಸಿ ಕಾಪಾಡಲು ಕೆಲವು ಪ್ರಯತ್ನಗಳು ನಡೆದಿದ್ದುವು. ರಾಷ್ಟ್ರದ ಹಾಗೂ ರಾಜ್ಯದ ವಸ್ತುಸಂಗ್ರಹಾಲಯಗಳಲ್ಲಿ ಬಹಳ ಅಮೂಲ್ಯವಾದ ಸಂಗ್ರಹಗಳಿವೆ. ಬ್ರಿಟಿಷರು ಸ್ಥಾಪಿಸಿದ ಆರ್ಕಿಯಲಾಜಿಕಲ್ ಸರ್ವೆ ಆಫ್ ಇಂಡಿಯಾ ನಮ್ಮ ದೇಶದ ಅಮೂಲ್ಯ ಸ್ಮಾರಕಗಳನ್ನು ಸಂರಕ್ಷಿಸಿದುದು ಮಾತ್ರವಲ್ಲದೆ ಉತ್ಖನನಗಳ ಮೂಲಕ ದೇಶದ ಸಾಂಸ್ಕೃತಿಕ ಪರಂಪರೆಯ ಇದುವರೆಗೂ ಬೆಳಕಿಗೆ ಬಂದಿರದಿದ್ದ ಅನೇಕ ಮುಖಗಳನ್ನು ತೋರಿಸಿತು. ಬ್ರಿಟಿಷರ ಮುಂದಾಳತ್ವದಲ್ಲೇ ಸ್ಥಾಪಿತವಾದ ಆಂಥ್ರೊಪೊಲಾಜಿಕಲ್ ಸರ್ವೆ ಆಫ್ ಇಂಡಿಯಾ

ಕುಲಸಂಬಂಧವಾದ ಅನೇಕ ತೆರಪುಗಳನ್ನು ತುಂಬಿ, ಭಾರತದ ಜನ ಮತ್ತು ಸಂಸ್ಕೃತಿಗಳನ್ನು ಕುರಿತು ಅಮೂಲ್ಯ ಮಾಹಿತಿಗಳನ್ನು ಒದಗಿಸಿದೆ. ಕಲೆ ಮತ್ತು ಸಂಗೀತ ಶಾಲೆಗಳು, ಅಧ್ಯಯನ ಕೇಂದ್ರಗಳು ಸಾಂಪ್ರದಾಯಿಕ ರೂಪಗಳನ್ನು ನಿರೂಪಿಸಿ, ಅವುಗಳ ಗಡಿಗಳನ್ನು ವಿಸ್ತರಿಸುವಲ್ಲಿ ಬಹುಮುಖ್ಯವಾದ ಪಾತ್ರ ವಹಿಸುತ್ತಿವೆ.

ಸ್ವಾತಂತ್ರ್ಯ ದೊರೆತ ನಂತರ ಸಂಸ್ಕೃತಿಗೆ ವಿಶೇಷ ಗಮನ ನೀಡಲಾಯಿತು. ರಾಷ್ಟ್ರಮಟ್ಟದಲ್ಲಿ ಸಾಹಿತ್ಯ, ಚಿತ್ರಕಲೆ ಮತ್ತು ಪ್ಲಾಸ್ಟಿಕ್ ಕಲೆ, ಸಂಗೀತ ಮತ್ತು ನಾಟಕಗಳಿಗಾಗಿ ಮೂರು ಅಕಾಡೆಮಿಗಳನ್ನು ಸ್ಥಾಪಿಸಲಾಯಿತು. ಈ ಕ್ಷೇತ್ರಗಳಲ್ಲಿ ರಚನಾತ್ಮಕ ಪ್ರತಿಭೆಯನ್ನು ಪ್ರೋತ್ಸಾಹಿಸುವ ಸಲುವಾಗಿ ಅನೇಕ ರಾಷ್ಟ್ರೀಯ ಪುರಸ್ಕಾರಗಳನ್ನು ಇವು ಸ್ಥಾಪಿಸಿದುವು. ಪ್ರಕಟಣೆಗಳು, ಪ್ರದರ್ಶನಗಳು, ರಂಗ ಪ್ರದರ್ಶನಗಳು, ವಿಚಾರಗೋಷ್ಠಿಗಳ ಮೂಲಕ ಅವು ಬೇರೆಬೇರೆ ಕಲೆಗಳನ್ನು ಜನಪ್ರಿಯಗೊಳಿಸಲು ಪ್ರಯತ್ನಿಸಿವೆ. ಇಂಥವೇ ಸಂಸ್ಥೆಗಳನ್ನು ಅನೇಕ ರಾಜ್ಯಗಳಲ್ಲೂ ಸ್ಥಾಪಿಸಲಾಗಿದೆ. ಹತ್ತೊಂಬತ್ತು ನೂರಾ ಎಪ್ಪತ್ತನೆಯ ಕೊನೆಯ ಅರ್ಧ ಹಾಗೂ ಎಂಭತ್ತರ ದಶಕಗಳಲ್ಲಿ ಸಾಂಸ್ಕೃತಿಕ ಚಟುವಟಿಕೆ ಬಿರುಸಾಗಿತ್ತು. ಬ್ರಿಟನ್, ಅಮೆರಿಕಾ, ಫ್ರಾನ್ಸ್, ಸೋವಿಯತ್ ರಷ್ಯಾ, ಜಪಾನ್ ಮೊದಲಾದ ವಿದೇಶಗಳಲ್ಲಿ ಅನೇಕ ಉತ್ಸವಗಳನ್ನು ವ್ಯವಸ್ಥೆ ಮಾಡಲಾಯಿತು. ಈ ಭಾರತ ಉತ್ಸವಗಳ ಮೂಲಕ ದೇಶವು ತನ್ನ ಪರಂಪರೆಯನ್ನು ವ್ಯಾಪಕವಾಗಿ ಪ್ರದರ್ಶಿಸಿತು. ಈ ಕೆಲವು ದೇಶಗಳು ಇದಕ್ಕೆ ಪ್ರತಿಯಾಗಿ ಭಾರತದಲ್ಲಿ ತಮ್ಮ ಸಾಂಸ್ಕೃತಿಕ ಉತ್ಸವನ್ನು ನಡೆಸಿದುವು. ಈ ಉತ್ಸವಗಳ ಒಂದು ವಿಶೇಷವೆಂದರೆ ಶಾಸ್ತ್ರೀಯ, ಜನಪ್ರಿಯ ಹಾಗೂ ಜಾನಪದ ಮೂರೂ ಕ್ಷೇತ್ರಗಳಿಗೆ ಪ್ರಾತಿನಿಧ್ಯ ಕೊಟ್ಟಿದ್ದು. ಇದೇ ಒಲವು ಮುಂದುವರಿದು ದೇಶದ ಹಲವು ಭಾಗಗಳಲ್ಲಿ ಅಪ್ನಾ ಉತ್ಸವ್ (ನಮ್ಮ ಹಬ್ಬಗಳು) ಗಳು ವ್ಯವಸ್ಥೆಗೊಂಡುವು. ಅನೇಕ ಪ್ರಾದೇಶಿಕ, ಸಾಂಸ್ಕೃತಿಕ ಕೇಂದ್ರಗಳನ್ನು ರಚಿಸಲಾಯಿತು. ಜಾನಪದ ಕಲಾವಿದರಿಗೆ, ಕುಶಲಕರ್ಮಿಗಳಿಗೆ ಹಿಂದೆಂದೂ ಇಷ್ಟು ಒಳ್ಳೆಯ ಕಾಲ ಬಂದಿರಲಿಲ್ಲ. ಈಗ ಅವರಿಗೆ ಹೊಸತೊಂದು ಗೌರವ ಪ್ರಾಪ್ತವಾಯಿತು.

ಈ ಕಾರ್ಯಕ್ರಮಗಳ ಮೌಲ್ಯಮಾಪನ ಮಾಡುವುದಕ್ಕೆ ಇದು ಇನ್ನೂ ಸೂಕ್ತ ಕಾಲವಾಗಿಲ್ಲ. ಆದರೆ ಅವು ಕೆಲಮಟ್ಟಿಗೆ ಸಾಂಸ್ಕೃತಿಕ ಪ್ರಜ್ಞೆಯನ್ನು ಹೆಚ್ಚಿಸಿದುವು; ನಿಂತಲ್ಲೇ ಸ್ಥಗಿತವಾಗಿದ್ದ ಗ್ರಾಮೀಣ ಕಲೆಗಳಿಗೂ ಕುಶಲಕಲೆಗಳಿಗೂ ಒಂದು ರಾಷ್ಟ್ರೀಯ ವೇದಿಕೆಯನ್ನು ಒದಗಿಸಿದುವು. ಇದರ ಸಾಮಾಜಿಕ ಪ್ರಭಾವ ಏನೆಂಬುದು ವ್ಯಕ್ತವಾಗಬೇಕಾದರೆ ಇನ್ನು ಒಂದೆರಡು ದಶಕಗಳು ಬೇಕಾಗಬಹುದು.

ಜಾನಪದ ಪ್ರಕಾರಗಳೂ ವ್ಯಾಪಕ ಜನಪ್ರಿಯತೆ ಗಳಿಸುತ್ತಿವೆ. ನಿಜವಾದ ರಾಷ್ಟ್ರೀಯ ಭಾವೈಕ್ಯವನ್ನು ಸಾಧಿಸಲು ಸಾಧ್ಯವಾಗಿರುವುದು ಇದೊಂದು ಕ್ಷೇತ್ರದಲ್ಲಿ.

ಈ ಸಂಬಂಧವಾಗಿ ಒಂದು ಮಾತನ್ನು ಹೇಳಬೇಕು. ಸಾಂಸ್ಕೃತಿಕ ಚಟುವಟಿಕೆಯ ಅನೇಕ ಅಂಶಗಳಲ್ಲಿ ಭಾರತದ ಸಮಗ್ರತಾ ಲಕ್ಷಣ ವ್ಯಕ್ತವಾಗುತ್ತದೆ. ಉದಾಹರಣೆಗೆ, ಭಾರತೀಯ ಸಂಗೀತ ಎಂದೂ ಧಾರ್ಮಿಕ ಭಿನ್ನತೆಗಳನ್ನು ಪರಿಗಣಿಸಿಲ್ಲ;

ಹಿಂದೂಸ್ತಾನೀ ಸಂಗೀತದ ಬೆಳವಣಿಗೆಯಲ್ಲಿ ಹಿಂದೂಗಳು ಮತ್ತು ಮುಸ್ಲಿಮರ ಕೊಡುಗೆ ಸಮಾನವಾಗಿದೆ. ಭಾರತದ ಗಣ್ಯ ಚಿತ್ರಕಲಾವಿದರಲ್ಲಿ ಹಲವಾರು ಮಂದಿ ಮುಸ್ಲಿಮರಿದ್ದಾರೆ, ಕ್ರಿಶ್ಚಿಯನರಿದ್ದಾರೆ, ಸಿಖ್‌ರಿದ್ದಾರೆ. ಇದು ಚಲನಚಿತ್ರ ಜಗತ್ತಿಗೂ ಅನ್ವಯವಾಗುವ ಮಾತು. ಕಲಾಸ್ಥಾಪನೆಗೆ ಪ್ರಾದೇಶಿಕ ಗಡಿರೇಖೆಗಳು ಎಂದೂ ತಡೆಯಾಗುವುದಿಲ್ಲ. ಉತ್ತರದ ಕಥಕ್, ದಕ್ಷಿಣದ ಭರತನಾಟ್ಯಂ, ಕೂಚಿಪುಡಿ ಮತ್ತು ಕಥಕ್ಕಳಿ; ಪೂರ್ವದಿಂದ ಒಡಿಸ್ಸಿ ಮತ್ತು ಚಾವು (ಒರಿಸ್ಸಾ), ಮಣಿಪುರಿ (ಮಣಿಪುರ್) ರಾಷ್ಟ್ರದ ಎಲ್ಲ ಭಾಗಗಳಲ್ಲೂ ಸಮಾನವಾಗಿ ಸಭಿಕರನ್ನು ರಂಜಿಸುತ್ತವೆ.

## ಸಮಾಜಃ ನಿರಂತರತೆ ಮತ್ತು ಪರಿವರ್ತನೆ

ಭಾರತದ ಅರ್ಥವ್ಯವಸ್ಥೆ, ರಾಜ್ಯವ್ಯವಸ್ಥೆ ಹಾಗೂ ಸಂಸ್ಕೃತಿಗಳಲ್ಲಿ ಆಗುತ್ತಿರುವ ಬದಲಾವಣೆಗಳ ಹಿನ್ನೆಲೆಯಲ್ಲಿ ದೇಶದಲ್ಲಿ ಆಗುತ್ತಿರುವ ಸಾಮಾಜಿಕ ಪರಿವರ್ತನೆಯ ಒಲವುಗಳ ಮುಖ್ಯಾಂಶಗಳನ್ನು ಈಗ ನೋಡಬಹುದು.

ಎರಡನೆಯ ಅಧ್ಯಾಯದಲ್ಲಿ ಹಿಂದೂ ಸಮಾಜದ ಏಳು ಸ್ಥೂಲ ಲಕ್ಷಣಗಳನ್ನು ಪಟ್ಟಿ ಮಾಡಲಾಗಿತ್ತು. ಹುಟ್ಟು, ಕ್ರಮ ಶ್ರೇಣಿ, ಆಚರಣೆಯ ಶುದ್ಧಿ ಅಥವಾ ಸಂಕರದ ಭಾವನೆ, ಪುರುಷಾರ್ಥಗಳು, ಆಶ್ರಮಗಳು, ಋಣ ಮತ್ತು ಕರ್ಮ. ಇವುಗಳಲ್ಲಿ ಮೊದಲ ಮೂರು ನಿಕಟವಾಗಿ ಸಂಬಂಧಿಸಿವೆ ಅಲ್ಲದೆ ಸ್ಪಷ್ಟವಾಗಿ ಗುರುತಿಸಬಹುದಾದ ಗುಂಪಾಗಿ ಕಾಣಿಸುತ್ತವೆ. ಸಾಮಾಜಿಕ ವರ್ಗಗಳ ಮೂಲಭೂತ ಸ್ಥಾನಮಾನವನ್ನು ಅವನು ಇಲ್ಲಿ ಹುಟ್ಟಿದ್ದಾನೆ ಎನ್ನುವುದರ ಆಧಾರದಿಂದ ನಿರ್ಣಯಿಸಲಾಗುತ್ತಿತ್ತು. ಈ ವರ್ಗೀಕರಣದ ಆಧಾರದಿಂದ ಅವರನ್ನು ಕ್ರಮಶ್ರೇಣಿಯಾಗಿ ವಿಭಜಿಸಲಾಗುತ್ತಿತ್ತು. ಅವರು ಅತ್ಯಂತ ಜಟಿಲವಾದ ಮಡಿ–ಮೈಲಿಗೆಗಳನ್ನು ಆಚರಿಸಬೇಕಾಗಿತ್ತು. ಪುರುಷಾರ್ಥಗಳು ಜೀವನದ ಗುರಿಗಳನ್ನು ವಿವರಿಸಿದುವು; ಪ್ರತಿಯೊಬ್ಬ ವ್ಯಕ್ತಿಯು, ಪ್ರತಿಯೊಂದು ಸಾಮಾಜಿಕ ವರ್ಗವೂ ಈ ಗುರಿಯನ್ನು ಸಾಧಿಸಬೇಕಾಗಿತ್ತು. ಜೀವನದ ವಿವಿಧ ಹಂತಗಳೇ ಆಶ್ರಮಗಳು. ದ್ವಿಜವರ್ಣಗಳಿಗೆ ಸೇರಿದವರು ಯಶಸ್ವಿಯಾಗಿ ಇವುಗಳನ್ನು ಆಚರಿಸಬೇಕಾಗಿತ್ತು. ಆಶ್ರಮಗಳಿಗೂ ಧರ್ಮಕ್ಕೂ ಹತ್ತಿರದ ನಂಟು. ಪ್ರತಿಯೊಂದು ಆಶ್ರಮಕ್ಕೂ ಧರ್ಮದ ನಿರ್ದಿಷ್ಟ ವಿನ್ಯಾಸ. ಧರ್ಮವೇ ಪುರುಷಾರ್ಥಗಳಲ್ಲಿ ಅತ್ಯಂತ ಮುಖ್ಯವಾದದ್ದು. ಭಯಗೊಳಿಸುವ ಕರ್ಮಸಿದ್ಧಾಂತವು ವ್ಯಕ್ತಿಯ ಬದುಕಿನ ಸ್ವರೂಪವನ್ನು ನಿರ್ಣಯಿಸುತ್ತದೆ. ಆದರೆ ವ್ಯಕ್ತಿಯು ಪ್ರಯತ್ನದಿಂದ ಹಿಂದಿನ ತಪ್ಪುಗಳಿಗೆ ಪಶ್ಚಾತ್ತಾಪಪಟ್ಟು ಮುಂದಿನ ಬದುಕನ್ನು ಉತ್ತಮಪಡಿಸಿಕೊಳ್ಳಬಹುದಾದ ಅವಕಾಶವನ್ನೂ ಕೊಟ್ಟಿದೆ. ಇಲ್ಲೇ ಇನ್ನೊಂದು ಮಾತನ್ನೂ ಹೇಳಿಬಿಡಬಹುದು. ಕ್ರೈಸ್ತ, ಇಸ್ಲಾಂ, ಸಿಖ್ ಮೊದಲಾದ ಧರ್ಮಗಳ ಸಿದ್ಧಾಂತಗಳು ಹಿಂದೂ ಧರ್ಮದ ಈ ಕೆಲವು ಲಕ್ಷಣಗಳನ್ನು ಒಪ್ಪದೆ ಹೋದರೂ ಈ ಧರ್ಮಗಳಿಗೆ ಹೊಸದಾಗಿ ಸೇರಿಕೊಂಡವರು ಈ ನಂಬಿಕೆಗಳನ್ನು, ದೃಷ್ಟಿಕೋನವನ್ನು ಉಳಿಸಿಕೊಂಡಿದ್ದಾರೆ. ವಾಸ್ತವವಾಗಿ ನಂಬಿಕೆಗಳು ಎಷ್ಟು -

ಪ್ರಬಲವಾಗಿದ್ದುವೆಂದರೆ, ಬೇರೆ ದೇಶಗಳಿಂದ ಬೇರೆ ಧರ್ಮಗಳನ್ನು ಬೋಧಿಸಲು ಇಲ್ಲಿಗೆ ಬಂದವರು ಕೂಡ ಪ್ರಾತಿನಿಧಿಕ ರೂಪದಲ್ಲಿ ಅವುಗಳನ್ನು ಅಳವಡಿಸಿಕೊಂಡರು.

ಈ ಭಾವನಾತ್ಮಕ ಒಲವು ಬದಲಾವಣೆಯ ಗಾಳಿಯನ್ನು ತಡೆದುಕೊಳ್ಳಬಲ್ಲುದೆ ? ಪಾಶ್ಚಾತ್ಯರಿಂದ, ಅವರ ಶಿಕ್ಷಣ, ವಿಜ್ಞಾನ, ತಂತ್ರಜ್ಞಾನಗಳಿಂದ ಅದು ಎಷ್ಟುಮಟ್ಟಿಗೆ ಪರಿಣಾಮಕ್ಕೊಳಗಾಗಿದೆ ? ಭಾರತವು ಗಳಿಸಿದ ಸ್ವಾತಂತ್ರ್ಯವು ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆಯನ್ನು ಚಾಲೂ ಮಾಡಿದೆಯೆ ?

ಜನ್ಮದ ಆಧಾರದಿಂದ ಸಾಮಾಜಿಕ ಸ್ಥಾನ, ಕ್ರಮಬದ್ಧ ಶ್ರೇಣಿ, ಆಚರಣೆಗಳಲ್ಲಿ ಮಡಿ–ಮೈಲಿಗೆ ಈ ಅಂಶಗಳು ಮತ್ತೆ ಮತ್ತೆ ವಿರೋಧ ಎದುರಿಸಬೇಕಾಗಿ ಬಂದಿದೆ. ಮೊದಲು ಇನ್ನೂ ರೂಪುಗೊಳ್ಳುತ್ತಿದ್ದ ಹಂತದಲ್ಲೇ ಚಿಂತನೆಯ ಅಸಾಂಪ್ರದಾಯಿಕ ಶಾಖೆಗಳು, ಆಮೇಲೆ ಅನೇಕಾನೇಕ ಜನ ಸಂತ–ಕವಿಗಳು, ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ ನೂತನ ಜ್ಞಾನ ಮತ್ತು ವಿಚಾರಗಳು ಅವನ್ನು ವಿರೋಧಿಸಿದುವು. ವ್ಯವಸ್ಥೆ ಮತ್ತು ಆಚರಣೆಗೆ ಸಂಬಂಧಿಸಿದ ಈ ಹಿಂದೂ ನಂಬಿಕೆಗಳನ್ನು ಹೊರಗಿನವರು ಅಸಹ್ಯಪಟ್ಟುಕೊಂಡು ಅಪಹಾಸ್ಯ ಮಾಡಿದ್ದಾರೆ. ಆದರೆ, ಈ ವ್ಯವಸ್ಥೆಗೆ ಅಪಾರವಾದ ಪುನಶ್ಚೇತನಗೊಳ್ಳುವ ಶಕ್ತಿಯಿರುವಂತೆ ತೋರುತ್ತದೆ; ಸ್ವಲ್ಪ ಬಿಟ್ಟುಕೊಟ್ಟರೂ, ಬೇಗನೆ ತನ್ನ ಹಿಂದಿನ ಸ್ಥಿತಿಗೆ ಮರಳುತ್ತದೆ. ಸಮಕಾಲೀನ ಜಗತ್ತಿನ ಲೌಕಿಕತೆ ಮತ್ತು ವೈಜ್ಞಾನಿಕ ಮನೋಧರ್ಮಗಳೆದುರಿಗೂ, ಕ್ರಮಬದ್ಧ ಶ್ರೇಣಿ ಮತ್ತು ಆಚರಣೆಯ ಶುದ್ಧತೆಗಳ ಭಾವನೆ ಇನ್ನು ಸಶಕ್ತವಾಗಿ ಉಳಿದಿವೆ; ಹೊರಗೆ ಪ್ರಕಟವಾಗಿ ಟೀಕಿಸಿದರೂ ಒಳಗೆ ಅವುಗಳನ್ನು ಒಪ್ಪಿಕೊಳ್ಳುವವರು ಬೇಕಾದಷ್ಟು ಜನರಿದ್ದಾರೆ. ಮೊದಲೇ ಹೇಳಿರುವಂತೆ ಅ–ಹಿಂದೂ ಧರ್ಮಗಳಲ್ಲೂ ಅವುಗಳನ್ನು ಸ್ವಲ್ಪಮಟ್ಟಿಗೆ ಒಪ್ಪಿಕೊಳ್ಳಲಾಗಿದೆ. ಈ ಪಕ್ಷಪಾತಗಳನ್ನು ಹಿಂದೂ ಸುಧಾರಕರು ಸುತರಾಂ ಒಪ್ಪಲಿಲ್ಲ; ಅದರಲ್ಲೂ ವಿಶೇಷವಾಗಿ ಮಹಾತ್ಮಾ ಗಾಂಧಿಯವರು ಅವುಗಳ ವಿರುದ್ಧವಾಗಿ ಬೃಹತ್ ಆಂದೋಳನಗಳನ್ನು ನಡೆಸಿದರು. ಸ್ವತಂತ್ರ ಭಾರತದಲ್ಲಿ ಅಸ್ಪೃಶ್ಯತೆಯ ನಿರ್ಮೂಲನೆಗೂ, ಸ್ತ್ರೀಯರ ಸ್ಥಾನಮಾನಗಳನ್ನು ಉತ್ತಮಪಡಿಸುವುದಕ್ಕೂ ಹಲವಾರು ಶಾಸನಗಳನ್ನು ತರಲಾಯಿತು. ಆದರೂ ಇನ್ನು ಸಾಮಾಜಿಕ ಸಮಾನತೆಯೆನ್ನುವುದು ಹಿಡಿತಕ್ಕೆ ಸಿಕ್ಕದೆ ಜಾರುತ್ತಲಿದೆ.

ಪುರುಷಾರ್ಥಗಳು, ಆಶ್ರಮಗಳು ಮತ್ತು ಋಣ ಇವುಗಳ ವಿಚಾರದಲ್ಲಿ ಅಂತರ್ಗತವಾಗಿರುವ ವ್ಯವಸ್ಥಾತ್ಮಕ ತತ್ವಗಳ ಆಚರಣೆಯನ್ನು ಅಳತೆ ಮಾಡಲು ತಕ್ಕ ವಸ್ತುನಿಷ್ಠ ಸೂಚಕಗಳಿಲ್ಲ. ವ್ಯಕ್ತಿಯ ಬದುಕಿನ ಗುರಿಗಳು, ಜೀವನ ಚಕ್ರದಲ್ಲಿ ಹಾದುಹೋಗುವ ತರ್ಕಬದ್ಧ ಪ್ರಗತಿಯ ಹಂತಗಳು, ವ್ಯಕ್ತಿಯ ಸಾಮಾಜಿಕ ಮತ್ತು ಧಾರ್ಮಿಕ ಕರ್ತವ್ಯಗಳು ಎಂಬರ್ಥದ ಮಾತುಗಳಾದರೆ ಇವುಗಳಲ್ಲಿ ಆಕ್ಷೇಪಣೀಯವಾದದ್ದು ಏನೂ ಇಲ್ಲ. ಅವು ಅಪೇಕ್ಷಣೀಯವಾದ ಜೀವನ ವಿಧಾನವೊಂದನ್ನು ನಿರೂಪಿಸುತ್ತವೆ. ಆದರೆ ಅವುಗಳ ಆಚರಣೆಯ ವಿಧಾನಗಳನ್ನು

ಜಾರಿಗೆ ತರುವ ಸಾಮಾಜಿಕ ವ್ಯವಸ್ಥೆಯೊಂದಿಲ್ಲ. ಇಲ್ಲಿ ಸ್ವಾರಸ್ಯವಾದ ವಿಷಯುವೇನೆಂದರೆ, ಅವನ್ನೂ ಕರ್ಮಸಿದ್ಧಾಂತವನ್ನೂ ಸಮಾಜವು ವ್ಯಾಪಕವಾಗಿ ಅಂಗೀಕರಿಸಿರುವುದು. ಈ ವಿಚಾರಗಳು ಎಷ್ಟು ಆಳವಾಗಿ ಬೇರೂರಿವೆಯೆಂದರೆ, ಅವುಗಳಲ್ಲಿ ಯಾವುದೇ ವ್ಯತ್ಯಾಸವನ್ನು ತರಲು ಪ್ರಯತ್ನಿಸುವುದೇ ಅರ್ಥವಿಲ್ಲದ ಸಂಗತಿಯಾಗುತ್ತದೆ. ಅಲ್ಲದೆ ಅವುಗಳಲ್ಲಿ ಕೆಲವು ಗುಣಾಂಶಗಳೂ ಇಲ್ಲದಿಲ್ಲ.

ವರ್ಗದ ಭಾವನೆ ಮುಖ್ಯವಾಗಿ ವರ್ಗೀಕರಣಕ್ಕೆ ಸಂಬಂಧಿಸಿದ್ದು. ಅದು ಸಾಮಾಜಿಕ ರಚನೆಯ ಒಂದು ಕಾರ್ಯಾಂಗವಾಗಿರಲಿಲ್ಲ. ಮೊದಲೇ ನಾವು ನೋಡಿರುವ ಹಾಗೆ ಪ್ರತಿಯೊಂದು ವರ್ಣವೂ ಹೆಚ್ಚು ಕಡಮೆ ಸಮಾನ ಧಾರ್ಮಿಕ ಸ್ಥಾನಮಾನವುಳ್ಳ ಹಲವು ಜಾತಿಗಳ ಗೊಂಚಲು. ಈಚೆಗೆ ಕಂಡುಬರುತ್ತಿರುವ ಒಂದು ಪ್ರವೃತ್ತಿಯೆಂದರೆ, ಮೂರು ದ್ವಿಜ ವರ್ಣಗಳಿಗೆ ರಾಜಕೀಯ ಮತ್ತು ಸಾಮಾಜಿಕ ವೇದಿಕೆಗಳಲ್ಲಿ ಪ್ರತ್ಯೇಕವಾದ ವ್ಯವಸ್ಥೆಯಾಗಬೇಕೆಂದು ಬಯಸುವುದು. ಹಾಗಾಗಿ ಅಖಿಲ ಭಾರತ ಬ್ರಾಹ್ಮಣ ಮಹಾಸಭಾ, ಅಖಿಲ ಭಾರತ ಕ್ಷತ್ರಿಯ ಮಹಾಸಭಾ ಮತ್ತು ಅಖಿಲ ಭಾರತ ವೈಶ್ಯ ಮಹಾಸಭಾಗಳು ಅಸ್ತಿತ್ವಕ್ಕೆ ಬಂದಿವೆ. ವಾಸ್ತವವಾಗಿ ಈ ಒಂದೊಂದು ವರ್ಗದಲ್ಲೂ ಹಲವಾರು ಸಮಾನಾಂತರ ಸಂಸ್ಥೆಗಳಿವೆ. ಆಗಾಗ ಅವರು ಎಲ್ಲರೂ ಒಂದೆಡೆ ಸೇರಿ ತಮ್ಮ ಮುಖಂಡರು ಏನು ಹೇಳುತ್ತಾರೆಂಬುದನ್ನು ಕೇಳುತ್ತಾರೆ. ಅನೇಕ ಮುಖ್ಯ ವಿಷಯಗಳನ್ನು ಕುರಿತಂತೆ ನಿರ್ಣಯಗಳನ್ನು ಕೈಗೊಳ್ಳುತ್ತಾರೆ. ಆಂತರಿಕವಾದ ಸಾಮಾಜಿಕ ಸುಧಾರಣೆ ಹಾಗೂ ರಾಜಕೀಯ ಐಕ್ಯತೆಯ ಅಪೇಕ್ಷಣೀಯತೆ ಇವೂ ಅವರ ಉದ್ದೇಶಗಳಲ್ಲಿ ಸೇರುತ್ತವೆ. ಬದಲಾದ ಪರಿಸ್ಥಿತಿಗಳಲ್ಲಿ ಒಂದೇ ವರ್ಣದ ಮಟ್ಟಗಳಲ್ಲಿ ವಿಭಿನ್ನ ಜಾತಿಗಳ ನಡುವೆ ವಿವಾಹವನ್ನು ಅನುಮತಿಸುವುದು ಸೂಕ್ತ ಎಂದು ನಿರ್ಣಯ ತೆಗೆದುಕೊಂಡಿರುವುದಾಗಿ ತಿಳಿದುಬರುತ್ತದೆ. ಚುನಾವಣೆಗಳಲ್ಲಿ ರಾಜಕೀಯ ಬೆಂಬಲ ಗಳಿಸುವುದಕ್ಕೂ ವರ್ಣನಿಷ್ಠೆಯನ್ನು ಪ್ರಚೋದಿಸಲಾಗುತ್ತಿದೆ. ಬ್ರಿಟಿಷರ ಆಡಳಿತಾವಧಿಯಲ್ಲಿ ಬೇರೆ ಬೇರೆ ಜಾತಿಗಳಿಗಾಗಿ ಅಖಿಲ ಭಾರತಮಟ್ಟದಲ್ಲೂ ಪ್ರಾದೇಶಿಕ ಮಟ್ಟದಲ್ಲೂ ಪರಸ್ಪರ ಹೋಲುವ ಸಂಸ್ಥೆಗಳನ್ನು ಸ್ಥಾಪಿಸುವುದೊಂದು ಫ್ಯಾಷನ್ ಆಗಿತ್ತು. ಜಾತಿಯ ನಿಯಮಗಳ ಉಲ್ಲಂಘನೆ, ಸಾಮಾಜಿಕ ಸುಧಾರಣೆ ಮೊದಲಾದ ವಿಷಯಗಳನ್ನು ಅವರು ಚರ್ಚಿಸುತ್ತಿದ್ದರು. ಅವರು ನಿರ್ಣಯಗಳನ್ನು ಅಂಗೀಕರಿಸಿದ ವಿಷಯಗಳಲ್ಲಿ ಶಿಶುವಿವಾಹ, ಧಾರ್ಮಿಕಾಚರಣೆಗಳ ಸರಳೀಕರಣ, ಸಮಾರಂಭಗಳಲ್ಲಿ ವ್ಯರ್ಥವಾದ ವೆಚ್ಚವನ್ನು ನಿವಾರಿಸುವುದು ಇವೆಲ್ಲ ಸೇರಿಕೊಂಡಿದ್ದುವು. ಸಾಮಾಜಿಕ ಇತಿಹಾಸ ಮತ್ತು ಸಮಾಜವಿಜ್ಞಾನಗಳು ಈ ವಿಚಾರಗಳನ್ನು ಆಳವಾಗಿ ಅಧ್ಯಯನ ಮಾಡಿಲ್ಲವಾದ್ದರಿಂದ ಈ ಸಂಸ್ಥೆಗಳ ಪ್ರಭಾವ, ಸಂಬಂಧಿಸಿದ ಜಾತಿಯ ವಿವಿಧ ಅಂಶಗಳು ಬದುಕಿನ ಮೇಲೆ ಮಾಡುವ ಪರಿಣಾಮಗಳು ಇವನ್ನು ಅಂದಾಜು ಮಾಡುವುದು ಕಷ್ಟವಾಗುತ್ತದೆ. ಈ ಸಂಸ್ಥೆಗಳ ಒತ್ತಡವಿದ್ದರೂ ವರದಕ್ಷಿಣೆ ಕೊಡುವ ಅನಿಷ್ಟ ಪದ್ಧತಿ ಉಳಿದುಕೊಂಡೇ ಬಂದಿದೆ. ಸ್ವಾತಂತ್ರ್ಯಾನಂತರ ಜಾತಿಯನ್ನು ಕ್ರಮೇಣ ರಾಜಕೀಯಕ್ಕೆಳೆಯಲಾಗಿದೆ. ಹೆಚ್ಚು

ಹೆಚ್ಚಾಗಿ ಚುನಾವಣೆಗಳಲ್ಲಿ ಮುಖ್ಯವಾದ ಪಾತ್ರ ವಹಿಸುತ್ತಿರುವಂತೆ ತೋರುತ್ತಿವೆ. ರಾಷ್ಟ್ರೀಯ ಹಾಗೂ ತೀವ್ರಗಾಮಿ ಪಕ್ಷಗಳೂ ರಾಜಕೀಯ ಉದ್ದೇಶಗಳಿಗಾಗಿ ಜಾತಿಯನ್ನು ದುರುಪಯೋಗಪಡಿಸಿಕೊಳ್ಳುತ್ತಿವೆ. ಆಧಾರಮಟ್ಟದ ರಾಜಕೀಯದಲ್ಲಿ ಜಾತಿ ಸಮಾಂತರತೆಯನ್ನು ನಿರಂತರವಾಗಿ ದೃಷ್ಟಿಯಲ್ಲಿ ಇಟ್ಟುಕೊಳ್ಳಲು ಪರಿಸ್ಥಿತಿ ಅವರನ್ನು ಒತ್ತಾಯಿಸುತ್ತಿದೆ. ಈ ಪರಿಸ್ಥಿತಿಯಲ್ಲಿ ಎರಡು ವ್ಯೂಹಗಳನ್ನು ರಚಿಸಿಕೊಳ್ಳಲಾಗುತ್ತಿದೆ. ಎರಡು ಅಥವಾ ಮೂರು ಪರಸ್ಪರ ವಿರುದ್ಧ ರಾಜಕೀಯ ಪಕ್ಷಗಳು ಒಂದೇ ಜಾತಿಯ ಉಮೇದುವಾರರನ್ನು ನಿಲ್ಲಿಸುವುದು ಅಥವಾ ಜಾತಿಯ ವೋಟುಗಳು ಹಂಚಿಹೋಗುವ ಹಾಗೆ ಮಾಡುವ ಸಲುವಾಗಿ ವಿರೋಧಿ ರಾಜಕೀಯ ಪಕ್ಷದ ಅಭ್ಯರ್ಥಿಗೆದುರಾಗಿ ಸ್ವತಂತ್ರರನ್ನು ಗೋಪ್ಯವಾಗಿ ಪ್ರೋತ್ಸಾಹಿಸುವುದು. ಈ ಪ್ರವೃತ್ತಿಯು ವಾತಾವರಣವನ್ನು ಕಲುಷಿತಗೊಳಿಸುತ್ತದೆ ಮತ್ತು ಅಂತರಜಾತೀಯ ಬಿಕ್ಕಟ್ಟುಗಳಿಗೂ ಸಂಘರ್ಷಗಳಿಗೂ ದಾರಿಮಾಡಿಕೊಡುತ್ತದೆ. ಕೆಲವು ಭಾಗಗಳಲ್ಲಿ ಅಂತರಜಾತಿ ಮಿತ್ರತ್ವಗಳು ಏರ್ಪಟ್ಟು ಸಮಾಜದ ದುರ್ಬಲ ವರ್ಗಗಳನ್ನು ಶೋಷಿಸಿ ತುಳಿಯುತ್ತಿವೆ.

ಏನೇ ಆದರೂ ಅಂತರ-ಜಾತೀಯ ಸಂಬಂಧಗಳಲ್ಲಿ ಧಾರ್ಮಿಕಾಚರಣೆಯ ಮಡಿಮೈಲಿಗೆಗಳ ಕಟ್ಟುಪಾಡು ಅಷ್ಟೊಂದು ಬಿರುಸಾಗಿರುವುದಿಲ್ಲ. ಕೊನೆಯ ಪಕ್ಷ ಸಾರ್ವಜನಿಕ ಸಂಸ್ಥೆಗಳಲ್ಲಿ, ಸಾರ್ವಜನಿಕ ಸಾರಿಗೆಯಲ್ಲಿ ಮತ್ತು ನಗರ ಪ್ರದೇಶಗಳಲ್ಲಿ ಹೊಸ ಹೊಸ ಉದ್ಯೋಗಾವಕಾಶಗಳು ತೆರೆದುಕೊಳ್ಳುತ್ತಿದ್ದಂತೆ ಕುಟುಂಬದ ಕೆಲವು ಸದಸ್ಯರು ಪರಂಪರೆಯ ಜಾತಿವೃತ್ತಿಯನ್ನು ಕೈಬಿಡುವುದು ಹೆಚ್ಚುಹೆಚ್ಚಾಗಿ ಕಂಡುಬರುತ್ತಿದೆ. ಜಾತಿ ಪಂಚಾಯಿತಿಗಳೂ ಅವನತಿ ಸ್ಥಿತಿಯಲ್ಲಿವೆ; ಲಾ ಕೋರ್ಟುಗಳು ಮತ್ತು ಹಳ್ಳಿಯ ಮುಖ್ಯರು ಅವುಗಳ ಕೆಲಮಟ್ಟಿನ ಪಾತ್ರಗಳನ್ನು ನಿರ್ವಹಿಸುತ್ತಿವೆ. ಆದರೇನು, ಜಾತಿಯು ಸಮಾಜ ವಿನ್ಯಾಸದ ಬಲವಾದ ಕ್ರಿಯಾತ್ಮಕವಾದ ಘಟಕವಾಗಿ ಮುಂದುವರಿದೇ ಇದೆ.

ಕುಟುಂಬ ಬಿಕ್ಕಟ್ಟಿನಲ್ಲಿ ಸಿಲುಕಿಕೊಂಡಿರುವ ಹಾಗೆ ತೋರುತ್ತದೆ. ನಂಟುತನದ ಬೆಸುಗೆಗಳು ಹಿಂದೆ ಇದ್ದಷ್ಟು ಬಲವಾಗಿಲ್ಲ. ಹೇಗೇ ಆದರೂ ''ಅವಿಭಕ್ತ ಕುಟುಂಬ'' ಎಂದು ಯಾವುದನ್ನು ಬಣ್ಣಿಸುತ್ತಾರೆಯೋ ಅದು ಎಂದೂ ಭಾರತೀಯ ಸಮಾಜದ ಲಕ್ಷಣವಾಗಿರಲಿಲ್ಲ. ಅದು ಹಳ್ಳಿಗಳಲ್ಲಿ ಸಣ್ಣ ಪಟ್ಟಣಗಳಲ್ಲಿ ಕೆಲವು ಜಾತಿಗಳಿಗೆ ಸೀಮಿತವಾಗಿದ್ದಿತಷ್ಟೆ. ಅಲ್ಲಿ ಕೂಡ ಎರಡು ಅಥವಾ ಮೂರು ತಲೆಮಾರಿನವರೆಗೆ ವಿಸ್ತೃತಗೊಂಡ ಇಡೀ ಕುಟುಂಬಗಳು ಅಪರೂಪ. ಆದರೆ ಈ ಜಾತಿಗಳಲ್ಲೇ ಕುಟುಂಬದ ವಿರಳನ ಕ್ರಿಯೆಯನ್ನು ನೋಡಬಹುದಾಗಿದೆ. ಕುಟುಂಬ ಮತ್ತು ಬಂಧುತ್ವ ಜಾಲದ ಸವಕಳಿಗೆ ಹಲವಾರು ಕಾರಣಗಳನ್ನು ಹೇಳಬಹುದು. ಆಧುನಿಕ ಶಿಕ್ಷಣ, ನೂತನ ವೃತ್ತಿಗಳು, ಭೌಗೋಳಿಕ ಚಲನೆ, ಸಮೂಹ ಮಾಧ್ಯಮಗಳ ಪ್ರಭಾವ, ಇತ್ಯಾದಿ; ವಿವಾಹದಲ್ಲಿ ಹೆಚ್ಚಿನ ಸ್ವಾತಂತ್ರ್ಯವನ್ನೂ ಬಳಸಿಕೊಳ್ಳುವುದೂ ಕೂಡು ಕುಟುಂಬದಲ್ಲಿ ಇರಲಾಗದ್ದಕ್ಕೆ ಕಾರಣವಾಗಬಹುದು. ಆದರೂ ಮುಖ್ಯವಾದ ಸಮಾರಂಭಗಳಲ್ಲಿ, ಧಾರ್ಮಿಕ ಆಚರಣೆಗಳಲ್ಲಿ ಕುಟುಂಬದ ಎಲ್ಲರೂ ಒಟ್ಟಿಗೆ ಸೇರಿ

ತಮ್ಮ ಐಕ್ಯತೆಯನ್ನು ತೋರಿಸುತ್ತಾರೆ. ವಿದ್ಯಾವತಿಯರಾದ ಮಹಿಳೆಯರು, ಆಧುನಿಕ ವೃತ್ತಿಗಳಲ್ಲಿ ಕೆಲಸ ಮಾಡುತ್ತಿದ್ದು, ತಮ್ಮ ಜೊತೆಯಲ್ಲಿ ಬಂಧುವಾದ ಒಬ್ಬ ಮಹಿಳೆ ಇರುವುದನ್ನು ಬಯಸುತ್ತಾರೆ. ಮನೆಗೆಲಸಗಳನ್ನು ನೋಡಿಕೊಂಡಿರಲು, ಅದರಲ್ಲೂ ಮಕ್ಕಳಿಗೆ ಬೇಕಾದುದನ್ನು ಒದಗಿಸಿ ಅವರನ್ನು ನೋಡಿಕೊಳ್ಳಲು ಇದು ಅಗತ್ಯವಾಗುತ್ತದೆ. ಔದ್ಯೋಗಿಕ ಹಾಗೂ ವಾಣಿಜ್ಯ ಉದ್ಯಮಗಳಿಗೂ ಕೂಡ ವಿಸ್ತೃತ ಕುಟುಂಬದ ಸದಸ್ಯರಿಂದ, ದೂರದ ಬಂಧುಗಳಿಂದ ಆರ್ಥಿಕ ಬೆಂಬಲ ಬೇಕಾಗುತ್ತದೆ.

ಬದಲಾಗುತ್ತಿರುವ ಪ್ರವೃತ್ತಿ ಅನೇಕ ಪ್ರಶ್ನೆಗಳನ್ನು ಎತ್ತುತ್ತದೆ. ಕಿರಿಯ ಪೀಳಿಗೆಯವರು ಹಿರಿಯರ ಬಗೆಗೆ ಏಕೆ ಗೌರವ ಕಳೆದುಕೊಳ್ಳುತ್ತಿದ್ದಾರೆ ? ಸ್ತ್ರೀ ಸಮಾನತೆಗಾಗಿ ಹಕ್ಕೊತ್ತಾಯ ಹೆಚ್ಚುತ್ತಿರುವುದು ಕುಟುಂಬ ವಿನ್ಯಾಸಗಳ ಮೇಲೆ ಹಾಗೂ ಸಮಾಜದ ವ್ಯವಸ್ಥಾತ್ಮಕ ರಚನೆಯ ಮೇಲೆ ಯಾವ ರೀತಿ ಪರಿಣಾಮ ಬೀರುತ್ತದೆ ? ಸಮಾಜದ ಕೆಳವರ್ಗಗಳ ಹಕ್ಕೊತ್ತಾಯ ಹೆಚ್ಚುತ್ತಿರುವುದು ಸಮಾಜದ ಸಮತೋಲನವನ್ನು ದಿಕ್ಕುಗೆಡಿಸುತ್ತದೆಯೆ ? ಬೇರೆ ಬೇರೆ ಬಗೆಯ ಕೋಮುವಾದಗಳ ಹಾಗೂ ಮತೀಯ ಕಲಹಗಳ ಹೆಚ್ಚಳಕ್ಕೆ ಏನು ಕಾರಣ ? ಈ ಸಮಸ್ಯೆಗಳ ಅಗಾಧತೆ ಕಳವಳಕಾರಿಯಾಗಿದೆ. ಆದರೆ ಪ್ರಶ್ನೆಗಳೇನೂ ಹೊಸವಲ್ಲ. ಇತಿಹಾಸದ ತಿರುವುಗಳಲ್ಲೆಲ್ಲ ಈ ಪ್ರಶ್ನೆಗಳನ್ನು ಎತ್ತಲಾಗಿದೆ. ಅವುಗಳಿಗೆ ಪರಿಹಾರಗಳನ್ನು ಕಂಡುಹಿಡಿಯಲು ಸಮಾಜವು ಪ್ರಯತ್ನಿಸಿದೆ. ಪರಿವರ್ತನೆಯ ಅಗಾಧತೆಯು ಅದರ ನಿರ್ವಹಣೆಯನ್ನು ಜಟಿಲವಾಗಿಸಿದೆ. ಕಷ್ಟವಾಗಿಸಿದೆ. ಸಮಾಜದಲ್ಲಿರುವ ಸಮಸ್ಯಾ ಪರಿಹಾರಕ ತಂತ್ರಗಳು ತಾತ್ಕಾಲಿಕ ರಾಜಕೀಯ ಲಾಭಗಳಿಗಾಗಿ ಸಮಸ್ಯೆಗಳನ್ನು ಉಲ್ಬಣಗೊಳಿಸುತ್ತವೆ. ಸಾಮಾಜಿಕ ಸ್ಮೃತಿನಾಶ ಅಗತ್ಯವಾದಾಗಲೆಲ್ಲ ವಿಷಾದಕರವಾಗಿ ಕುಲಸಂಬಂಧಿ ಸ್ಮೃತಿಗಳನ್ನು ಜಾಗೃತಗೊಳಿಸಲಾಗುತ್ತಿದೆ. ಹಾಗಾಗಿ, ಆಗಲೇ ಗೋಜಲಾಗಿರುವ ಪರಿಸ್ಥಿತಿ ಇನ್ನಷ್ಟು ಗೋಜಲಾಗುತ್ತದೆ.

ಅಗಾಧ ಪರಿವರ್ತನೆಯನ್ನು ಕಾಣುತ್ತಿರುವ ಒಂದು ಪ್ರಾಚೀನ ಸಮಾಜವು ಹಲವು ತಡೆಗಳನ್ನೂ ಹಿನ್ನಡೆಗಳನ್ನೂ ಎದುರಿಸಲೇಬೇಕಾಗುತ್ತದೆ. ಅದು ಸಹಜ. ಭಾರತವು ಈಗ ಕುದಿಯುತ್ತಿದ್ದರೂ ಅದರಲ್ಲೂ ಕೆಲವು ಗುಣಾಂಶಗಳು ಇಲ್ಲದಿಲ್ಲ. ಜನರು ಬದಲಾವಣೆಗಳನ್ನು ಒತ್ತಾಯಿಸುತ್ತಿದ್ದಾರೆ. ಸಮಾಜವು ತನ್ನೆದುರಿಗಿಟ್ಟುಕೊಳ್ಳಬೇಕಾದ ಹೊಸ ಗುರಿಗಳನ್ನು ತೋರಿಸುತ್ತಿದ್ದಾರೆ. ಆಹಾರದ ಸ್ವಸಂಪೂರ್ಣತೆ, ವಿಜ್ಞಾನ ಮತ್ತು ತಂತ್ರಜ್ಞಾನ, ಉದ್ಯಮೀಕರಣ ಮೊದಲಾದ ಕ್ಷೇತ್ರಗಳಲ್ಲಿ ದೇಶವು ತೋರಿಸಿರುವ ಸಾಧನೆಯನ್ನು ಸುಲಭವಾಗಿ ತಳ್ಳಿಹಾಕಲು ಬರುವುದಿಲ್ಲ. ದೇಶವು ಹಿಂದೆಂದೂ ಕಂಡಿರದಷ್ಟು ಅಪಾರವಾದ ಉದ್ವೇಗದಿಂದ, ಕಾಳಜಿಯಿಂದ ಪರಿಸರದ ವಿನಾಶ, ಅದರ ಅಸಮತೋಲನ ಮತ್ತು ಹಾನಿ, ಶಕ್ತಿಯ ಬದಲಿ ಮೂಲಗಳು ಮೊದಲಾದ ಅಂಶಗಳನ್ನು ಇಂದು ಚರ್ಚಿಸಲಾಗುತ್ತಿದೆ. ಇದು ನಾಳೆಯ ಬಗೆಗೆ ಹೊಂದಿರುವ ಕಾಳಜಿಯ ದ್ಯೋತಕವಾಗಿದೆ. ಅತ್ಯಂತ ಆಶಾದಾಯಕವಾಗಿರುವ ಸೂಚನೆಗಳೆಂದರೆ, ದೇಶದ ಅತ್ಯಂತ ಸಾಮಾನ್ಯರೆನಿಸಿದ ಪೌರರನ್ನೂ ಕಡೆಗಣಿಸುವುದಕ್ಕೆ

ಸಾಧ್ಯವಿಲ್ಲದುದು, ಅಥವಾ ಅವರ ಬಗೆಗೆ ಇಚ್ಛೆ ಬಂದಂತೆ ನಡೆದುಕೊಳ್ಳಲು ಅವಕಾಶವಿಲ್ಲದ್ದು. ಇದರಿಂದಾಗಿ ಭಾರತವು ವ್ಯಕ್ತಿಯು ಜೀವಿಸಲು ಚೈತನ್ಯಭರಿತ ದೇಶವಾಗಿದೆ, ಇಲ್ಲಿ ಸಮಾಜದ ನೂತನ ಆಶೋತ್ತರಗಳನ್ನು ಎಲ್ಲರೂ ಹಂಚಿಕೊಳ್ಳಬಹುದಾಗಿದೆ.

ಸಮಕಾಲೀನ ಭಾರತೀಯ ಸಮಾಜವು ಬದಲಾವಣೆಯ ರೋಗಕ್ಕೆ ತುತ್ತಾಗಿದೆ. ಸಾಲುಸಾಲು ದ್ವಂದ್ವಗಳು, ಇಮ್ಮನಸ್ಸುಗಳು, ವೈರುಧ್ಯಗಳು ಎದುರಾಗುತ್ತಿವೆ. ಅವು ಗಾಯಗೊಳಿಸುತ್ತವೆ ನಿಜ, ಆದರೆ ಅವು ಅನಿವಾರ್ಯವಾದಂಥವು. ಸಮಾಜವು ತನ್ನ ಎಲ್ಲಾ ವರ್ಗಗಳ ಜನರ ಸಮಸ್ಯೆಗಳನ್ನು ಸಹಾನುಭೂತಿಯಿಂದ ನೋಡಬೇಕು; ಆರ್ಥಿಕ ಅಸಮತೆ, ಅನ್ಯಾಯ ಎಂಬ ಸಮಸ್ಯೆಗಳಿಗೆ ಪರಿಹಾರ ಹುಡುಕಬೇಕು; ಸಮುದಾಯ ಪ್ರಜ್ಞೆಯನ್ನು ವಿಸ್ತರಿಸಲು ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು; ಪುರಾಣ ಕಟ್ಟುಕಥೆಗಳಿಗೆ ಜೋತುಬೀಳದೆ ನಿಜವಾದ ಐತಿಹಾಸಿಕ ಪ್ರಜ್ಞೆ ಜನತೆಯಲ್ಲಿ ಬೆಳೆಯುವಂತೆ ಮಾಡಬೇಕು. ನಿರ್ಣಯ ಕೈಗೊಳ್ಳುವುದರಲ್ಲಿ ಹಲವರು ಭಾಗವಹಿಸುವಂತಹ ಪ್ರಕ್ರಿಯೆಯಲ್ಲಿ ತೊಡಗಬೇಕು. ಪರಂಪರೆಯ ಕೆಲವು ಅಂಶಗಳು ತಮ್ಮ ಅಂತಸ್ಸತ್ವ ಮತ್ತು ಉಪಯುಕ್ತತೆಗಳಿಂದಾಗಿ ಉಳಿದುಕೊಳ್ಳುತ್ತವೆ; ಅನೇಕ ಮೇಲುಮೇಲಿನ ಪೂರ್ವಾಗ್ರಹಗಳು ಕಳಚಿಕೊಳ್ಳುತ್ತವೆ. ಶೋಷಣೆ–ದಬ್ಬಾಳಿಕೆಗಳು ತೊಡೆದುಹೋಗುತ್ತವೆ. ಮುಂದಿರುವ ದಾರಿ ತುಂಬ ದೀರ್ಘವಾಗಿರಬಹುದು. ಪ್ರಕ್ರಿಯೆ ಯಾತನಾಮಯವಾಗಿರಬಹುದು. ಆದರೆ ನಾವು ಒಬ್ಬೊಬ್ಬರೂ–ಭಾರತದ ಪ್ರತಿಯೊಬ್ಬ ಪ್ರಜೆಯೂ – ಭವಿಷ್ಯತ್ತಿಗಾಗಿ ಪಣ ಒಡ್ಡಬೇಕಾಗಿದೆ.

## ಮುಂದಿನ ಓದಿಕೆಗೆ

ಭಾರತದಂತಹ ಬೃಹತ್ ದೇಶದ ಐತಿಹಾಸಿಕ ವಿಕಾಸವನ್ನೂ ಸಾಮಾಜಿಕ ವ್ಯವಸ್ಥೆಯನ್ನೂ ಕುರಿತ ಎಲ್ಲ ಅಂಶಗಳನ್ನೂ ಒಂದು ಸಣ್ಣ ಪುಸ್ತಕದಲ್ಲಿ ಪರಿಶೀಲಿಸುವುದು ಸಾಧ್ಯವಿಲ್ಲ. ಕೆಲವು ಓದುಗರಾದರೂ ಭಾರತದ ಸಾಂಸ್ಕೃತಿಕ ಪರಂಪರೆ ಮತ್ತು ಸಮಾಜವ್ಯವಸ್ಥೆಗಳ ಬಗೆಗೆ ತುಸು ಹೆಚ್ಚು ತಿಳಿದುಕೊಳ್ಳಲು ಬಯಸುತ್ತಾರೆ. ಅವರಿಗಾಗಿ ಈ ಕೆಳಗೆ ಒಂದು ಸಣ್ಣ ಪಟ್ಟಿ ಮಾಡಿಕೊಟ್ಟಿದೆ. ವಿದ್ವತ್ಪೂರ್ಣ ಮಹಾ ನಿಬಂಧಗಳನ್ನು ಇಲ್ಲಿ ಸೇರಿಸಿಲ್ಲ. ಇಲ್ಲಿ ಸೂಚಿಸಿರುವ ಎಲ್ಲ ಶೀರ್ಷಿಕೆಗಳು ಓದಲು ಸುಲಭವಾಗಿವೆ.

ರೋಮಿಲಾ ಥಾಪರ್ ಅವರ *ಎ ಹಿಸ್ಟರಿ ಆಫ್ ಇಂಡಿಯಾ – 1* ಭಾರತದ ಸಂಸ್ಕೃತಿ ಮತ್ತು ಸಮಾಜ ಅಧ್ಯಯನಕ್ಕೆ ಒಂದು ಒಳ್ಳೆಯ ಐತಿಹಾಸಿಕ ಪ್ರವೇಶ. ಮೊದಲು 1966ರಲ್ಲಿ ಪೆಂಗ್ವಿನ್ ಪ್ರಕಟಿಸಿದ ಈ ಕೃತಿ 1982ರವರೆಗೆ ಹತ್ತು ಸಲ ಮರುಮುದ್ರಣಗೊಂಡಿದೆ. ಕಾಗದ ರಟ್ಟಿನ ಪುಸ್ತಕವಾಗಿ ಸುಲಭವಾಗಿ ದೊರಕುತ್ತಿರುವ ಇದು ಬಾರಿಯೂ ಅಲ್ಲ. ಅವರ *ದಿ ಪಾಸ್ಟ್ ಆಂಡ್ ಪ್ರಿಜುಡೀಸ್* (ಪ್ರಕಟಣೆ: ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ; ಎರಡನೆಯ ಮರು ಮುದ್ರಣ 1990) ಪುಸ್ತಕವು ಪೂರ್ವಾಪರ ನಂಬಿಕೆಗಳ ಮುಸುಕನ್ನು ತೆರೆದು ಅನಾವರಣಗೊಳಿಸಲು ಸಹಾಯಕವಾಗಿದೆ. ಪರ್ಸಿವಲ್ ಸ್ಪಿಯರ್ ಬರೆದ *ಎ ಹಿಸ್ಟರಿ ಆಫ್ ಇಂಡಿಯಾ – 2* ಮುಗಲರ ಕಾಲದಿಂದ ತೊಡಗಿ ಸ್ವತಂತ್ರ ಭಾರತದ ಮೊದಲ ದಶಕಗಳವರೆಗೆ ಭಾರತೀಯ ಸಮಾಜವು ಹೇಗೆ ಬೆಳೆದುಬಂದಿತು ಎಂಬುದನ್ನು ನಿರೂಪಿಸುತ್ತದೆ. ಇದು ಪೆಂಗ್ವಿನ್ ಕಾಗದ ರಟ್ಟಿನ ಪುಸ್ತಕ. ಇದಕ್ಕಿಂತ ದೊಡ್ಡದಾದ ಆದರೆ ಒಳ್ಳೆಯ ಓದಿಕೆಯಿರುವ ಪುಸ್ತಕಗಳು ಎ.ಎಲ್. ಭಾಷಾಂ ಅವರ *ದಿ ವಂಡರ್ ದಟ್ ವಾಸ್ ಇಂಡಿಯಾ* (ಲಂಡನ್ 1954, ಭಾರತದಲ್ಲೂ ಪುನರ್ಮುದ್ರಿತ) ಮತ್ತು ಡಿ.ಡಿ. ಕೋಸಾಂಬಿ ಅವರ *ದಿ ಕಲ್ಚರ್ ಅಂಡ್ ಸಿವಿಲೈಸೇಷನ್ ಆಫ್ ಏನ್‌ಷಂಟ್ ಇಂಡಿಯಾ ಇನ್ ಹಿಸ್ಟಾರಿಕಲ್ ಔಟ್‌ಲೈನ್* (ಲಂಡನ್ 1965, ಭಾರತೀಯ ಆವೃತ್ತಿಯಾಗಿಯೂ ದೊರಯುತ್ತದೆ). ಆಧುನಿಕ ಭಾರತಕ್ಕೆ ಸಂಬಂಧಿಸಿದಂತೆ ಸುಮಿತ್ ಸರ್ಕಾರರ *ಮಾಡರ್ನ್ ಇಂಡಿಯಾ* ಉಪಯುಕ್ತವಾಗಿದೆ. ಸ್ವಲ್ಪ ಹಳೆಯದಾದರೂ ಕೆ.ಎಂ. ಪಣಿಕ್ಕರ್ ಅವರ *ಎ ಸರ್ವೇ*

*ಆಫ್ ಇಂಡಿಯನ್ ಹಿಸ್ಟರಿ* (ಮುಂಬಯಿ 1947, ಹಲವಾರು ಬಾರಿ ಮರುಮುದ್ರಣಗೊಂಡಿದೆ) ಇಂದಿಗೂ ಪ್ರಚೋದಕ ಬರವಣಿಗೆಯನ್ನೊಳಗೊಂಡಿದೆ.

ಭಾರತೀಯ ಸಮಾಜವನ್ನು ಕುರಿತು ವಿಶ್ವಾಸಾರ್ಹವಾದ ಸಣ್ಣ ಪುಸ್ತಕಗಳು ಅಷ್ಟಾಗಿ ಲಭ್ಯವಿಲ್ಲ. ಬುಡಕಟ್ಟುಗಳು ಮತ್ತು ಜಾತಿಗಳನ್ನು ಕುರಿತು, ಬಿಡಿ ಹಳ್ಳಿಗಳ ಅಧ್ಯಯನಗಳನ್ನು ಕುರಿತು, ಬಹಳ ಉತ್ತಮಮಟ್ಟದ ಮನೋಗ್ರಾಫ್‌ಗಳು ಪ್ರಕಟವಾಗಿವೆ. ಭಾರತೀಯ ಸಾಮಾಜಿಕ ವ್ಯವಸ್ಥೆಯ ವಿವಿಧ ಮುಖಗಳನ್ನು ಕುರಿತು ತಾತ್ವಿಕ ಅಧ್ಯಯನವುಳ್ಳ ಪುಸ್ತಕಗಳಿವೆ. ಆದರೆ ಅವು ತಜ್ಞರಿಗೆ, ಸಾಮಾನ್ಯ ಓದುಗರಿಗಲ್ಲ. ಭಾರತ ಸರಕಾರದ ಪ್ರಕಟಣಾ ವಿಭಾಗವು *ದಿ ಗೆಜೆಟಿಯರ್ ಆಫ್ ಇಂಡಿಯಾ: ಇಂಡಿಯನ್ ಯೂನಿಯನ್* ಸಂಪುಟಗಳನ್ನು ಪ್ರಕಟಿಸಿದೆ. ಮೊದಲನೆಯ ಸಂಪುಟವು ದೇಶ ಮತ್ತು ಜನ ಕುರಿತದ್ದು (ದೆಹಲಿ 1965). ಐದು ಚಿಕ್ಕ ಸುಲಭ ಬೆಲೆಯ ಪುಸ್ತಕಗಳು (1969-70) ಭೌತಿಕ ಭೂಗೋಳ, ಜನ, ಧರ್ಮ, ಭಾಷೆಗಳು ಮತ್ತು ಸಮಾಜ ರಚನೆಗಳನ್ನು ನಿರೂಪಿಸುತ್ತವೆ. ಇವುಗಳನ್ನು ಸಾಮಾನ್ಯ ಜ್ಞಾನದ ಸಲುವಾಗಿ ಓದಬಹುದು. ಈ ಪುಸ್ತಕದ ಓದುಗರಿಗೆ ಸಮಾಜದ ರಚನೆಯನ್ನು ಕುರಿತ ಪುಸ್ತಿಕೆ ಹೆಚ್ಚು ಇಷ್ಟವಾಗುತ್ತದೆ. ಗ್ರಾಮೀಣ ಭಾರತದ ಜೀವನದ ವಿಷಯದಲ್ಲಿ ಎಸ್.ಸಿ. ದುಬೆ ಅವರ *ಇಂಡಿಯನ್ ವಿಲೇಜ್* (ಲಂಡನ್ ಮತ್ತು ಇತಾಕಾ 1955. ಹಲವು ಗಟ್ಟಿ ಹಾಗೂ ತೆಳುರಟ್ಟಿನ ಆವೃತ್ತಿಗಳು ಮತ್ತು ಅನುವಾದಗಳು ಪ್ರಕಟವಾಗಿವೆ) ಅನ್ನು ಓದಬಹುದು. ಎಂ.ಎನ್. ಶ್ರೀನಿವಾಸ್ ಅವರ *ಸೋಷಿಯಲ್ ಚೇಂಜ್ ಇನ್ ಮಾಡರ್ನ್ ಇಂಡಿಯಾ* (ಬರ್ಕ್‌ಲಿ ಮತ್ತು ಲಾಸ್ ಏಂಜಲೀಸ್ 1966, ಭಾರತದಲ್ಲೂ ಮರು ಮುದ್ರಣಗೊಂಡಿದೆ) ಪರಿವರ್ತನೆಯ ಕೆಲವು ಅಂಶಗಳನ್ನು ಸಮರ್ಥವಾಗಿ ಚರ್ಚಿಸುತ್ತದೆ. ಡೇವಿಡ್ ಜಿ. ಮಂಡೆಲ್‌ಬಾಮ್ ಎರಡು ಸಂಪುಟಗಳಲ್ಲಿ ಅಧ್ಯಯನ ಮಾಡಿರುವ *ಸೊಸೈಟಿ ಇನ್ ಇಂಡಿಯಾ* (ಬರ್ಕ್‌ಲಿ ಮತ್ತು ಲಾಸ್ ಏಂಜಲೀಸ್ 1970. ಭಾರತದಲ್ಲೂ ಮರುಮುದ್ರಣಗೊಂಡಿದೆ. ತೆಳುರಟ್ಟಿನ ಆವೃತ್ತಿಯೂ ಇದೆ) ಸಾಕಷ್ಟು ವಿವರವಾಗಿ ನಿರಂತರತೆಯನ್ನೂ, ಪರಿವರ್ತನೆಯನ್ನೂ ಚರ್ಚಿಸುತ್ತದೆ. ಗಂಭೀರ ಓದುಗನಿಗೆ ಭಾರತೀಯ ಸಮಾಜವನ್ನು ಕುರಿತು ಅಧ್ಯಯನ ಮಾಡಲು ಇದು ಒಳ್ಳೆಯ ಪ್ರವೇಶಿಕೆ.

ಇಲ್ಲಿ ಸೂಚಿಸಿರುವ ಹಲವು ಪುಸ್ತಕಗಳಲ್ಲಿ ವಿಸ್ತಾರವಾದ ಗ್ರಂಥಸೂಚಿಗಳೂ, ಉಲ್ಲೇಖಗಳೂ ಸೇರಿವೆ.

Printed at Beauty Print, 10/8020 Multani Dhanda, Paharganj, New Delhi-55